॥ ಓಂ ತತ್ಸತ್ ॥



# ಕುಕ್ಕೆ ಶ್ರೀ ಸುಬ್ರಹ್ಮಣ್ಯ ಕ್ಷೇತ್ರ

ಇದರ

ಸಂಶೋಧನಾತ್ಮಕ

## ಐತಿಹಾಸಿಕ ಹಿನ್ನೆಲೆ

ಮತ್ತು

## ಮರೆಯಾದ ಸಿದ್ಧಿ ವಿನಾಯಕ ದೇವರು

ಲೇಖಕ ಹಾಗೂ ಸಂಗ್ರಾಹಕ

**ಡಾ॥ ಯಂ.ಯಸ್. ಅಚ್ಯುತ ಶರ್ಮಾ**

(ಕ್ಷೇತ್ರದ ಮಾಜಿ ಧರ್ಮದರ್ಶಿ)

ಕಂಕನಾಡಿ, ಮಂಗಳೂರು - 2.

ಪ್ರಕಾಶಕರು

**ಸತ್ಯಶೋಧ ಪ್ರಕಾಶನ**

ಮಂಗಳೂರು - 2. ದ.ಕ.

॥ ಓಂ ತತ್ಸತ್ ॥



# ಕುಕ್ಕೆ ಶ್ರೀ ಸುಬ್ರಹ್ಮಣ್ಯ ಕ್ಷೇತ್ರ

ಇದರ

ಸಂಶೋಧನಾತ್ಮಕ

## ಐತಿಹಾಸಿಕ ಹಿನ್ನೆಲೆ

ಮತ್ತು

## ಮರೆಯಾದ ಸಿದ್ಧಿ ವಿನಾಯಕ ದೇವರು

ಲೇಖಕ ಹಾಗೂ ಸಂಗ್ರಾಹಕ

**ಡಾ॥ ಯಂ.ಯಸ್. ಅಚ್ಯುತ ಶರ್ಮಾ**

(ಕ್ಷೇತ್ರದ ಮಾಜಿ ಧರ್ಮದರ್ಶಿ)

ಕಂಕನಾಡಿ, ಮಂಗಳೂರು - 2.

ಕ್ರಿ.ಶ. 1970

ಶಾ.ಶ. 1892

ಪ್ರಕಾಶಕರು

**ಸತ್ಯಶೋಧ ಪ್ರಕಾಶನ**

ಮಂಗಳೂರು - 2. ದ.ಕ.



# ಬ್ರಹ್ಮಜ್ಞಾನಾವಲಿ

ಅಸಂಗೋಹಂ ಅಸಂಗೋಹಂ ಅಸಂಗೋಹಂ ಪುನಃ ಪುನಃ ।
ಸಚ್ಚಿದಾನಂದ ರೂಪೋಹಂ ಅಹಮೇವಾಹಮವ್ಯಯಃ ॥

ಅಂತರ್ಜ್ಯೋತಿಃ ಬಹಿರ್ಜ್ಯೋತಿಃ ಪ್ರತ್ಯಗ್ಜ್ಯೋತಿಃ ಪರಾತ್ಪರಃ ।
ಜ್ಯೋತಿರ್ಜ್ಯೋತಿಃ ಸ್ವಯಂಜ್ಯೋತಿಃ ಆತ್ಮಜ್ಯೋತಿಃ ಶಿವೋಽಸ್ಮ್ಯಹಂ ॥

ಓಂಕಾರ ಬಿಂದು ಸಂಯುಕ್ತಂ ನಿತ್ಯಂಧ್ಯಾಯಂತಿಯೋಗಿನಃ ॥
ಕಾಮದಂ ಮೋಕ್ಷದಂ ಚೈವ ಓಂಕಾರಾಯ ನಮೋ ನಮಃ ॥

ಸದಾಶಿವ ಸಮಾರಂಭಾಂ ಶ್ರೀ ಶಂಕರಾಚಾರ್ಯ ಮಧ್ಯಮಾಂ
ಅಸ್ಮದಾಚಾರ್ಯ ಜಗದ್ಗುರು ಶ್ರೀಮದಭಿನವ ವಿದ್ಯಾತೀರ್ಥ
ಮಹಾಸ್ವಾಮಿನಾಂ ಪರ್ಯಂತಾಂ, ವಂದೇ ಗುರು ಪರಂಪರಾಂ

ಓಂ, ನಮೋ ಬ್ರಹ್ಮಾದಿಭ್ಯಃ ಬ್ರಹ್ಮ ವಿದ್ಯಾ ಸಂಪ್ರದಾಯ
ಕರ್ತೃಭ್ಯೋ ವಂಶ ಋಷಿಭ್ಯೋ ನಮೋ ಮಹದ್ಭ್ಯಃ, ನಮೋ ಗುರುಭ್ಯಃ ॥

ಸರ್ವೋಪಪ್ಲವರಹಿತಃ ಪ್ರಜ್ಞಾನ ಘನಃ
ಪ್ರತ್ಯಗರ್ಥೋ ಬ್ರಹ್ಮೈವಾಹಮಸ್ಮಿಃ ॥

---

ಉಡುಪಿಯ ಕ್ಷೇತ್ರದ ನೈಜ ಚಿತ್ರ ಮತ್ತು ಚಾರಿತ್ರಿಕ ಹಿನ್ನಲೆ
ಎಂಬ ಪ್ರಥಮ ಗುಚ್ಛವನ್ನು ನೋಡಿರಿ.

(ಸ್ಥಾನಿಕ ಶಿವ ಬ್ರಾಹ್ಮಣ ಅಂದರೆ ಸ್ಥಳೀಯ ಸ್ಮಾರ್ತ ಬ್ರಾಹ್ಮಣ)

# ಮೆಚ್ಚುಗೆಯ ಮಾತು

ಆಗಿ ಹೋದ ಸಂಗತಿಗಳನ್ನು ಹೇಳುವುದು ಕಷ್ಟ. ದಾಖಲೆಗಳನ್ನು ಹುಡುಕಿ ಅದರ ಮೇಲೆ ಸತ್ಯಾಂಶಗಳನ್ನು ಅವಿಚ್ಛಿನ್ನವಾದ ಒಂದು ಕ್ರಮದಲ್ಲಿ ಕಟ್ಟಿ ಹೇಳುವುದು ಇನ್ನೂ ಕಷ್ಟ. ಸಾರ್ವಜನಿಕ ವಿಷಯಗಳನ್ನು ಸಪ್ರಮಾಣಿಸಿ ಹೇಳುವುದು ಮತ್ತೂ ಕಷ್ಟ. ಹೀಗೆ ಒಂದು ಕಷ್ಟ ಇನ್ನೊಂದು ಕಷ್ಟತರ ಮತ್ತೊಂದು ಕಷ್ಟತಮ ಎಂದಿರುವಾಗ ಶ್ರೀ ಮ.ಸು. ಅಚ್ಯುತ ಶರ್ಮರು ಕಷ್ಟತಮವಾದ ಕಾರ್ಯದಲ್ಲಿಯೇ ನಿರತರಾಗಿರುವುದು ಅವರ ಚಿಕಿತ್ಸಕ ಬುದ್ಧಿಯನ್ನು ತೋರಿಸುತ್ತದೆ.

ಪರೀಕ್ಷೆ, ಪ್ರಯೋಗ, ಚಿಕಿತ್ಸೆ - ಇವೇ ಅಹರ್ನಿಶೀಯ ಉದ್ಯೋಗವಾಗಿ ವೈದ್ಯವರೇಣ್ಯರಾದ ಶ್ರೀ ಶರ್ಮರವರು ತಮ್ಮ ಉದ್ಯೋಗ ಕ್ಷೇತ್ರಕ್ಕೆ ಸಹಜವಾದ ಈ ಮನೋಧರ್ಮವನ್ನು ಈ ವಯಸ್ಸಿನಲ್ಲಿಯೂ ಮತ, ಧರ್ಮ ಇತಿಹಾಸ, ತತ್ತ್ವಾದಿ ಕ್ಷೇತ್ರಗಳಲ್ಲಿಯೂ ಪ್ರವೇಶ ಗೊಳಿಸಿರುವುದು ಶ್ರೀಯುತರ ಶ್ರೀಮಂತ ಪ್ರತಿಭೆಗೆ ಸಾಕ್ಷಿಯಾಗಿದೆ.

ಶ್ರೀ ಶರ್ಮರವರ ಚಾರಿತ್ರಿಕ ಸಂಶೋಧನೆಗೆ ಸಂಬಂಧಿಸಿದಂತೆ ಏನನ್ನಾಗಲೀ ಹೇಳುವ ಸಾಮರ್ಥ್ಯ ನನಗಿಲ್ಲ. ಆದರೆ ಜ್ಞಾನಾರ್ಜನೆ, ಜ್ಞಾನ ಪ್ರಸಾರ ಇವುಗಳನ್ನೇ ಧ್ಯೇಯವಾಗಿಟ್ಟುಕೊಂಡು ಸತ್ಯಪಥದಲ್ಲಿ ಯಾತ್ರಿಕರಾಗಿ ಮುಂದುವರಿಯುತ್ತಿರುವ ಶ್ರೀ ಶರ್ಮರವರನ್ನು ದೂರದಿಂದ ನೋಡಿ ಭಕ್ತಿಯಿಂದ ಕೈಮುಗಿಯುವುದು ನನ್ನ ಕರ್ತವ್ಯವೆಂದು ಭಾವಿಸಿದ್ದೇನೆ.

ದೇವಾಸುರದೇವತೆಗಳ ಕಥೆಗಳೋ, ರಾಜಮಹಾರಾಜರ ಚರಿತ್ರೆಗಳೋ, ತೀರ್ಥಕ್ಷೇತ್ರಗಳ ಮಹಿಮೆಗಳೋ, ನಗರೋಪನಗರಗಳ ಸ್ಥಿತಿಗತಿಗಳೋ, ವಿಷಯ ಯಾವುದೇ ಇರಲಿ, ಹೇಳುವುದು ಯಾರೇ ಇರಲಿ ಅವರೆಲ್ಲರ ಪ್ರಾರ್ಥನೆಯೂ ಒಂದೇ, ನನ್ನದೂ ಅದೇ.

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ
ತತ್ ತ್ವಂ ಪೂಷನ್ನ ಪಾವೃಣು ಸತ್ಯಧರ್ಮಾಯ ದೃಷ್ಟಯೇ

ಮಂಗಳಗಂಗೆ
ಸ್ನಾತಕೋತ್ತರ ಕೇಂದ್ರ
ಮಂಗಳೂರು

ಎಸ್.ವಿ. ಪರಮೇಶ್ವರ ಭಟ್ಟ
ಕನ್ನಡ ಪ್ರಾಧ್ಯಾಪಕ

# ಪ್ರಸ್ತಾವನೆ

ಅನೇಕ ವರಪ್ರದ ನಿತ್ಯಾನ್ನದಾನ ವಿನೋದಿ ಕುಕ್ಕೆಲಿಂಗ
ಬಿರುದಾಂತ ಶ್ರೀ ಸುಬ್ರಹ್ಮಣ್ಯೇಶ್ವರಾಯ ನಮಃ

ಶ್ರೀ ಮಹಾ ಗಣಪತಿ ಮತ್ತು ಶ್ರೀ ಸುಬ್ರಹ್ಮಣ್ಯೇಶ್ವರನ ಅನುಗ್ರಹದಿಂದ 1953ನೇ ಇಸವಿ ಜುಲ್ಯಾ ತಾ. 27ರಲ್ಲಿ ಹಿಂದೂ ರಿಲೀಜಿಯಸ್ ಎಂಡೋಮೆಂಟ್ ಕಮಿಶನರ್ ಮದ್ರಾಸ್, ಇವರ ಆರ್ಡರ್ ನಂಬ್ರ 380-27 of 1953 ಪ್ರಕಾರ ನಾನು ಕುಕ್ಕೆ ಶ್ರೀ ಸುಬ್ರಹ್ಮಣ್ಯೇಶ್ವರ ದೇವಸ್ಥಾನದ ಆಡಳಿತೆ ಕೌನ್ಸಿಲ್‌ನಲ್ಲಿ ಒಬ್ಬ ಸದಸ್ಯನಾಗಿ ನೇಮಿಸಲ್ಪಟ್ಟೆನು. ನನ್ನ ನೇಮಕವು ದೇವಳದ ಆಡಳಿತೆಯನ್ನು 2 ಜನ ದ್ರಾವಿಡ ಬ್ರಾಹ್ಮಣರಿಂದ ಕೂಡಿದ ಐದು ಜನ ಸದಸ್ಯರಿಂದ ನಡೆಸಲ್ಪಡಬೇಕೆಂದು ಇದ್ದ ಜಿಲ್ಲಾ ಕೋರ್ಟು ಸ್ಕೀಂ O.S.No of 1930 ಮತ್ತು ಮದ್ರಾಸ್ ಹೈಕೋರ್ಟು A.S.No. 394 of 1931ನ್ನು ಅನುಸರಿಸಿ ಮಾಡಿದ್ದಾಗಿರುತ್ತದೆ. ಈ ನೇಮಕದಲ್ಲಿ ದ್ರಾವಿಡ ಬ್ರಾಹ್ಮಣ ಸ್ಥಾನಗಳಿಗೆ ನಾನು ಮತ್ತು ಶ್ರೀ ಅಡಿಬಾಯಿ ಭೀಮ ಭಟ್, ಎಡ್ವೊಕೇಟ್ ಪುತ್ತೂರು ಮತ್ತು ಬ್ರಾಹ್ಮಣೇತರರ ಸ್ಥಾನಗಳಿಗೆ ಶ್ರೀ ಬೆಳ್ಳಾರೆ ನಾರಾಯಣ ಶೇಕ ಪಠೇಲ್ ಬೆಳ್ಳಾರೆ, ಶ್ರೀ ಕೆ.ವಿ. ಗೌಡ ಯಂ.ಎಲ್.ಎ. (ನಿವೃತ್ತ) ಎಡ್ವೊಕೇಟ್ ಪುತ್ತೂರು. ಅಲ್ಲದೆ ಮೈಸೂರು ಕಡೆಯಿಂದ ಶ್ರೀ ಬೋರಣ್ಣ ಗೌಡ ನಿವೃತ್ತ ಎಂ.ಎಲ್.ಎ. ಹಾಸನ ಈ ಪ್ರಕಾರ ಆಡಳಿತೆ ಕೌನ್ಸಿಲ್‌ನಲ್ಲಿ ನೇಮಕ ಮಾಡಲ್ಪಟ್ಟಿದ್ದರು. ನಮ್ಮೊಳಗೆ ಶ್ರೀ ಭೀಮ ಭಟ್ಟರು ಅಧ್ಯಕ್ಷರಾಗಿಯೂ, ಶ್ರೀ ನಾರಾಯಣ ಶೇಕರು ಖಜಾಂಜಿಯಾಗಿಯೂ ಆರಿಸಲ್ಪಟ್ಟರು. ನಮ್ಮ ನೇಮಕದ ಸಮಯ ಬಾಗಲೋಡಿ ಶ್ರೀ ರಾಘವೇಂದ್ರ ರಾಯರು ದೇವಸ್ಥಾನದ ಮೆನೇಜರರಾಗಿದ್ದರು.

ನಾನು ದೇವಸ್ಥಾನವನ್ನು ಪ್ರವೇಶಿಸಿ ಅಲ್ಲಿಯ ಸ್ಥಿತಿಗತಿಗಳನ್ನು ವೀಕ್ಷಿಸುವಾಗ ಶ್ರೀ ಸುಬ್ರಹ್ಮಣ್ಯ ದೇವಸ್ಥಾನವು ಶಿವಸಮ್ಮಂಧವಾದ ಶೈವಾಗಮಕ್ಕೆ ಸಮ್ಮಂಧವಟ್ಟದ್ದಾಗಿದ್ದರೂ ಇಲ್ಲಿ ಪೂರ್ಣದ್ವಾದಶನಾಮಿಗಳಾದ ವೈಷ್ಣವ ಮಾಧ್ವರಿಂದ ತುಂಬಿರುವುದನ್ನು ದೇವಸ್ಥಾನದ ಆಗ್ನೇಯ ಮೂಲೆಯಲ್ಲಿ ಮಾಧ್ವ ಮತದ ಸ್ವಾಮಿಗಳ ಮಠವನ್ನೂ, ದೇವಸ್ಥಾನದ ಒಳ ಅಂಗಣದ ಆಗ್ನೇಯ ಮೂಲೆಯಲ್ಲಿ ಅಂದರೆ ಶಿವಾಲಯಗಳಲ್ಲಿ ನ್ಯಾಯವಾಗಿ ಪರಿವಾರ ದೇವರಾದ ಶ್ರೀ ಮಹಾ ಗಣಪತಿಯು ಇರಬೇಕಾದ ಸ್ಥಳದಲ್ಲಿ ಮೇಲಿನ ಮಾಧ್ವ ಮಠಕ್ಕೆ ಸಂಬಂಧಪಟ್ಟ ಸಂಪುಟ ನರಸಿಂಹ

# ವಿಷಯಾನುಕ್ರಮಣಿಕೆ



ಕುಕ್ಕೆ ಶ್ರೀ ಸುಬ್ರಹ್ಮಣ್ಯೇಶ್ವರ ದೇವರು

ದೇವರ ಗುಡಿಯನ್ನು ನೋಡಿಯೂ ಮತ್ತು ಆಗಾಗ ದೇವಳದ ಆಡಳಿತೆ ಕಮಿಟಿಯವರಿಗೂ ದೇವಳದ ಒಳ ಆಗ್ನೇಯ ಮೂಲೆಯನ್ನು ಆಕ್ರಮಿಸಿದ ಮಾಧ್ವ ಮಠದ ಯತಿಗಳಿಗೂ ನಡೆಯುತ್ತಿರುವ ವಿವಾದಗಳಿಂದ ದೇವಳದ ನಾಲ್ಕು ಪೌಳಿಗಳ ಪೈಕಿ ತೆಂಕು ಪೌಳಿಯು ಅನೇಕ ವರ್ಷಗಳಿಂದ ರಿಪೇರಿ ಇಲ್ಲದೆ ಜೀರ್ಣಾವಸ್ಥೆಯಲ್ಲಿ ಬಿದ್ದಿರುವುದನ್ನು ನೋಡಿಯೂ, ಅಲ್ಲದೆ ದೇವಳದ ಟ್ರೆಜರಿಯಲ್ಲಿ ಸಾಧಾರಣ ಆಗ ರೂಪ್ಯಾ 5000 ಕ್ರಯ ಬಾಳುವ ಶ್ರೀ ವಿನಾಯಕ ದೇವರ ಚಿನ್ನದ ಕವಚವಿದ್ದು ಅದಕ್ಕೆ ತಕ್ಕುದಾದ ವಿಗ್ರಹವು ಹೊರಗೆ ಎಲ್ಲಿಯೂ ಕಾಣದೇ ಇರುವುದನ್ನು ತಿಳಿದು ಈ ದೇವಳದ ಸತ್ಯಾಂಶವು ಬೇರೆಯೆ ಇರಬಹುದೆಂದು ನಿಶ್ಚಯಿಸಿ ಅದರ ಸಂಶೋಧನೆಗೆ ತೊಡಗಿದೆನು.

ಅಂದಿನಿಂದಲೇ ನಾನು ಈ ದೇವಳದ ಇತಿಹಾಸ ಮತ್ತು ಆಡಳಿತೆ ವಿಚಾರವಾಗಿ ಏನಾದರೂ ಆಧಾರ ಗ್ರಂಥಗಳು, ದಾಕ್ಲೆಗಳು ಮತ್ತು ಹಳೆ ಶಾಸನಗಳು ಇವೆಯೋ ಎಂದು ಹುಡುಕಲು ಆರಂಭಿಸಿದೆನು. ಹೆಚ್ಚಿನ ಈ ದೇವಳದ ರಿಕಾರ್ಡುಗಳು ಈ ಮೇಲೆ ಹೇಳಿದ ಮಾಧ್ವ ಸ್ವಾಮಿಗಳ ಆಡಳಿತೆ ಕಾಲದಲ್ಲೂ, ಆ ಮೇಲೆ ಆಡಳಿತೆ ನಡೆಸಿದ ಶ್ರೀಗಳಾದ ಬಾಗ್ಲೋಡಿ ರಾಮಕೃಷ್ಣಯ್ಯ, ಬಿ. ಭೋಜ ರಾವ್ ಮತ್ತು ಶ್ರೀ ಅನಂತರಾಮಯ್ಯನವರ ಕಾಲದಲ್ಲಿಯೂ ದೇವಳದಿಂದ ಹೊರಹೋಗಿರ ಬಹುದಾಗಿ ತಿಳಿದುಬಂತು. ಆದರೂ ಶ್ರೀ ಸುಬ್ರಹ್ಮಣ್ಯೇಶ್ವರನ ಅನುಗ್ರಹದಿಂದ, ಹೆಚ್ಚಿನ ಪ್ರಯತ್ನದ ಫಲವಾಗಿ ಕೆಲವು ಜಜ್‌ಮೆಂಟ್‌ಗಳೂ, ಕೆಲವು ಹಳೇ ಗ್ರಂಥಗಳೂ, ಹಳೇ ದಾಕ್ಲೆಗಳೂ ಮತ್ತು ಕೆಲವು ತಾಮ್ರ ಶಾಸನಗಳ ಪ್ರತಿಗಳೂ ಲಭಿಸಿದುವು. ಹೀಗೆ ಸಿಕ್ಕಿದ ಆಧಾರ ಗ್ರಂಥಗಳೂ ಶಾಸನಗಳೂ. ಜಜ್‌ಮೆಂಟ್‌ಗಳೂ ಇತ್ಯಾದಿ ದಾಕ್ಲೆಗಳ ಸಹಾಯದಿಂದಲೂ, ಅಲ್ಲದೆ ದೇವಳದ ಆಗಿನ ಪರಿಸ್ಥಿತಿಯನ್ನು ನೋಡಿಯೂ ಈ ಕ್ಷೇತ್ರದ ಇತಿಹಾಸವು ಬರೆಯಲ್ಪಟ್ಟಿದೆ.

1955ನೇ ಇಸವಿಯಲ್ಲಿ ದೇವಳದ ಟ್ರೆಜರಿಯಲ್ಲಿದ್ದ ಶ್ರೀ ಸಿದ್ಧಿ ವಿನಾಯಕ ದೇವರ ಚಿನ್ನದ ಕವಚಕ್ಕೆ ಸಂಬಂಧಪಟ್ಟ ವಿನಾಯಕ ವಿಗ್ರಹವು ಶ್ರೀ ಸುಬ್ರಹ್ಮಣ್ಯೇಶ್ವರನ ಮೂಲಸ್ಥಾನದ ಎಡಬದಿಯಲ್ಲಿ ಗೋಪ್ಯವಾಗಿ ಇರಿಸಲ್ಪಟ್ಟ ವಿಚಾರವು ತಿಳಿದುಬಂದುದರಿಂದ ಆ ವಿಗ್ರಹದ ಪ್ರತಿಷ್ಠಾ ವಿಚಾರ ದೇವಳದ ಆಡಳಿತೆ ಕೌನ್ಸಿಲಿನ ಸಭೆಯಲ್ಲಿ ನಾನು ತಂದ ನಿರ್ಣಯವನ್ನು ಇತರ ಸದಸ್ಯರು ಪುಷ್ಟೀಕರಿಸಿ ಆ ವಿಗ್ರಹದ ಸ್ಥಾನ ತಪ್ಪಿಸಿದ ವಿಷಯದಲ್ಲಿ ಪೂರ್ವೇತಿಹಾಸವನ್ನು ಶೋಧಿಸಿ ಆಡಳಿತೆ ಕೌನ್ಸಿಲಿಗೆ ರಿಪೋರ್ಟು ಮಾಡಬೇಕೆಂದು ನಮ್ಮ ಕಮಿಟಿಯವರು ತಾ. 9-12-1955ನೇ ಮೀಟಿಂಗಿನ ನಿರ್ಣಯ ನಂಬ್ರ 456-39(7)ರ ಪ್ರಕಾರ ನನ್ನನ್ನೇ ಅಧಿಕರಿಸಿದರು. ಆ ನಿರ್ಣಯದ ಮೇರೆಗೆ ನಾನು ತಯಾರಿಸಿದ ತಾ. 28-10-1955ರ ರಿಪೋರ್ಟು ತಾ. 6-11-1956ರಲ್ಲು ನಿರ್ಣಯ ನಂಬ್ರ 605-45ರಲ್ಲೂ ಮತ್ತು ತಾ. 28-4-1957ರ ಮೀಟಿಂಗಿನ ನಿರ್ಣಯ ನಂಬ್ರ 750-8 (2)ರ ಪ್ರಕಾರ

ರಿಕಾರ್ಡು ಮಾಡಲ್ಪಟ್ಟ ಸರಕಾರಕ್ಕೂ, ಎಂಡೋಮೆಂಟ್ ಕಮಿಶನರಿಗೂ ಮತ್ತು ಡೆಪ್ಯೂಟಿ ಕಮೀಶನರಿಗೂ ಕಳುಹಿಸಲ್ಪಟ್ಟದ್ದನ್ನು ದೇವಸ್ಥಾನದಲ್ಲಿ ನೋಡಬಹುದು. ಅಲ್ಲದೆ ಈ ದೇವಳದಿಂದ ಆಡಳಿತೆಯವರು 1955ರಲ್ಲಿ ಪ್ರಕಟಿಸಿದ ಕ್ಷೇತ್ರ ವರ್ಣನೆ ಪುಸ್ತಕದಲ್ಲೂ ಅಲ್ಲಲ್ಲಿ ವ್ಯತಿರಿಕ್ತ ಕಂಡಲ್ಲಿ ಪರಿಶೋಧನೀಯ ಮತ್ತು ವಿಮರ್ಶನೀಯವೆಂದು ಪ್ರಕಟಿಸಲ್ಪಟ್ಟಿದೆ ಆಗ ಪರಿಶೋಧನೆ ಪೂರ್ಣವಾಗದೇ ಇದ್ದುದರಿಂದ ಈ ಪುಸ್ತಕವನ್ನು ವಯ್ಯಕ್ತಿಕವಾಗಿ ಪ್ರಕಟಿಸಬೇಕಾಯಿತು. ವರ್ತಮಾನ ಕಾಲವೆಂಬ ವೃಕ್ಷಕ್ಕೆ ಭೂತಕಾಲವೇ ಬೀಜ, ಭವಿಷ್ಯತ್ ಕಾಲವೇ ಫಲವು. ವರ್ತಮಾನ ಕಾಲವು ಫಲಕಾರಿಯಾಗಬೇಕಾದರೆ ಅದರ ಭೂತಕಾಲವು ಉತ್ತಮ ರೀತಿಯಲ್ಲಿದ್ದರೆ ಭವಿಷ್ಯವು ಉತ್ತಮ ಫಳ ಕೊಡುತ್ತದೆ. ಈ ಕಾರಣದಿಂದ ಒಂದು ಸ್ಥಳದ ಭೂತಕಾಲದ ಪರಿಸ್ಥಿತಿಯನ್ನು ಮನದಟ್ಟು ಮಾಡಿಕೊಂಡು ವರ್ತಮಾನ ಕಾಲದಲ್ಲಿ ಭೂತಕಾಲದ ಅವಾಂತರಗಳನ್ನು ತೊಡೆದುಹಾಕಿ ಸರಿಪಡಿಸಿಕೊಂಡು ಭವಿಷ್ಯತ್ತನ್ನು ಸುಗಮ ರೀತಿಯಲ್ಲಿ ಕಟ್ಟಬಹುದು. ಆದುದರಿಂದ ಈ ಕ್ಷೇತ್ರದ ಭೂತಕಾಲದ ಇತಿಹಾಸವು ಸ್ವಲ್ಪಮಟ್ಟಿಗೆ ಸಂಶೋಧಿಸಲ್ಪಟ್ಟು ಬರೆಯಲ್ಪಟ್ಟಿದೆ.

ಇದರಲ್ಲಿ ಕೆಲವೆಡೆಗಳಲ್ಲಿ ಮಾಧ್ವರ ಮತ್ತು ಸ್ಮಾರ್ತರೊಳಗೆ ವಿವಾದಾತ್ಮಕ ವಿವರಗಳು ಬರೆಯಲ್ಪಟ್ಟಿವೆ. ಈ ವಿವರಣೆಗಳು ಮತ ವೈಷಮ್ಯದ ವಿರೋಧ ದೃಷ್ಟಿಯಿಂದ ಬರೆದದ್ದಲ್ಲ. ಐತಿಹಾಸಿಕ ಹಿನ್ನೆಲೆಯ ದೃಷ್ಟಿಯಿಂದ ಮಾತ್ರ ಬರೆದದ್ದಾಗಿದೆ. ಈ ಮೊದಲು ತುಳುನಾಡಿನ ವಿಷಯದಲ್ಲಿ ಬರೆದ ಹೆಚ್ಚಿನ ಲೇಖನಗಳು ಬರೆದ ಪುಸ್ತಕಗಳಲ್ಲಿ ಈ ಕ್ಷೇತ್ರದಲ್ಲಿ ನಡೆದ ಸ್ಮಾರ್ತ ವೈಷ್ಣವರೊಳಗಿನ ವಿವಾದದ ವಿಚಾರಗಳನ್ನು ಗೊತ್ತಿದ್ದೋ ವ ಗೊತ್ತಿಲ್ಲದೆಯೋ ಪ್ರಕಟಿಸಿರುವುದು ಕಾಣುವುದಿಲ್ಲ. ಈ ಸುಬ್ರಹ್ಮಣ್ಯ ದೇವಳದ ಧರ್ಮದರ್ಶಿಗಳಿಂದ ಈ ಮೊದಲು ಪ್ರಕಟಿಸಲ್ಪಟ್ಟ ಕ್ಷೇತ್ರ ವರ್ಣನೆ ಪುಸ್ತಕಗಳಲ್ಲಿಯೂ ಆ ದೇವಳದ ಶಾಸನ ಜಜ್‌ಮೆಂಟ್ ಇತ್ಯಾದಿಗಳಲ್ಲಿ ಕಾಣುವ ಪ್ರಕಾರ ಆ ದೇವಸ್ಥಾನದ ಅನಾದಿ ಅರ್ಚಕ ಮತ್ತು ಆಡಳಿತೆದಾರರಾಗಿದ್ದ ಸ್ಮಾರ್ತರಾದ ಮೊರೋಜ ಮತ್ತು ಹೆಬ್ಬಾರರ ವಿಚಾರ, ಅಲ್ಲಿಯ ಮಾಧ್ವ ಸ್ವಾಮಿಗಳಿಗೂ ಹೆಬ್ಬಾರರಿಗೂ ನಡೆದ ವಿವಾದಗಳನ್ನು ಮುಚ್ಚಿಟ್ಟು ಪ್ರಕಟಿಸಿದಂತೆ ಕಾಣುತ್ತದೆ. ಅದಕ್ಕೆ ಕಾರಣವೇನೆಂದರೆ 1845ರಿಂದ ಈ ದೇವಾಲಯದ ಆಡಳಿತೆಯು ಅಲ್ಲಿಯ ಮಾಧ್ವ ಸ್ವಾಮಿಗಳ ಕೈಗೆ ಬಂದು ಆ ಸ್ವಾಮಿಗಳು ಈ ಸುಬ್ರಹ್ಮಣ್ಯ ದೇವಸ್ಥಾನವನ್ನು ವೈಷ್ಣವ ದೇವಾಲಯವನ್ನಾಗಿ ಮಾರ್ಪಾಟು ಮಾಡುವ ಉದ್ದೇಶವಿಟ್ಟುಕೊಂಡು ದೇವಳವು ತಮ್ಮ ಶಿಲಶಿಲಾ ಹಕ್ಕಿನದೆಂದು ಮಾಡಲೋಸುಗ ಮುಂಚಿನ ಅರ್ಚಕ ಮತ್ತು ಆಡಳಿತೆದಾರರಾದ ಬ್ರಾಹ್ಮಣರ ಹೆಸರನ್ನೇ ಮುಚ್ಚಿಟ್ಟು ತಮ್ಮದನ್ನಾಗಿ ಮಾಡಿಕೊಳ್ಳಲು ಬೇಕಾದ ಹಾಗೆ ಕತೆ ಕಟ್ಟಿ ಪುಸ್ತಕಗಳನ್ನು ಬರೆದದ್ದಾಗಿರುತ್ತದೆ.

ಕಾಲವು ವ್ಯತ್ಯಾಸ ಆದ ಹಾಗೆ ಒಬ್ಬನ ಸೊತ್ತು ಮತ್ತೊಬ್ಬನ ಪಾಲಾಗುವುದು.

ಆ ಪ್ರಕಾರ ಚರಿತ್ರೆಯು ಮಾರ್ಪಾಡು ಆಗುವುದು ಪ್ರಕೃತಿ ನಿಯಮ. ಆದರೆ ಚರಿತ್ರೆಯನ್ನು ಬರೆಯುವಾಗ ಸತ್ಯತೆಯನ್ನೇ ಬರೆಯಬೇಕಲ್ಲದೆ ಅವರವರ ಸ್ವಾರ್ಥಕ್ಕೆ ಬೇಕಾದಂತೆ ಕತೆಕಟ್ಟಿ ಬರೆಯುವುದು ಅಸಮಂಜಸ. ಈ ತತ್ವವನ್ನು ಅನುಸರಿಸಿ ಅನೇಕ ಆಧಾರಗಳನ್ನು ಇದಕ್ಕೆ ಲಗ್ತೀಕರಿಸಿ ಈ ಚಾರಿತ್ರಿಕ ಹಿನ್ನೆಲೆಯು ಬರೆದದ್ದಾಗಿದೆ. ಇದೇ 1963ನೇ ಇಸವಿಯಲ್ಲಿ ವೈಷ್ಣವ ಮತದ ಮಾಧ್ವ ಸಂಪ್ರದಾಯದವರೇ ಆದ ಶ್ರೀ ಪಿ. ಗುರುರಾಜ ಭಟ್, ಎಂ.ಎ., ಬಿಇಡಿ., ಪಿಎಚ್.ಡಿ., ಕಲ್ಯಾಣಪುರ ಮಿಲಾಗ್ರಿಸ್ ಕಾಲೇಜಿನ ಮುಖ್ಯ ಪ್ರಾಧ್ಯಾಪಕ (ಪ್ರಿನ್ಸಿಪಾಲ್)ರವರು ತನ್ನ 'ತುಳುನಾಡು' ಎಂಬ ಸಂಶೋಧನಾತ್ಮಕ ಸಾಮಾಜಿಕ ಚರಿತ್ರೆ ಪುಸ್ತಕದಲ್ಲಿ ತಾನು ಮಾಧ್ವ ಸಂಪ್ರದಾಯದವನಾದರೂ ಧೈರ್ಯದಿಂದ ಸತ್ಯವನ್ನು ಶೋಧನೆ ಮಾಡಿ ಬರೆಯುವಾಗ ಈ ದೇವಾಲಯದ ಚಾರಿತ್ರಿಕ ಹಿನ್ನೆಲೆಯಲ್ಲಿ ಅಲ್ಲಿಯ ಸ್ಥಾನಿಕ ಸ್ಮಾರ್ತ ಬ್ರಾಹ್ಮಣರಾದ ಹೆಬ್ಬಾರರ ಉದ್ಯೋಗಗಳನ್ನು ವಿವರಿಸಿಕೊಟ್ಟದ್ದು ಬಹಳ ತರ್ಕಬದ್ಧವಾಗಿದೆ. ಅಲ್ಲದೆ ಕನ್ನಡ ಜಿಲ್ಲೆಯ ದೇವಸ್ಥಾನಗಳು ಒಂದು ಕಾಲದಲ್ಲಿ ಸ್ಥಳದ ಸ್ಮಾರ್ತ ದ್ರಾವಿಡ ಬ್ರಾಹ್ಮಣರ ಅರ್ಚಕತನ ಮತ್ತು ಆಡಳಿತದಲ್ಲೇ ಇತ್ತು. ಎಂದೂ ಸ್ಪಷ್ಟಪಡಿಸಿ ಚಾರಿತ್ರಿಕ ಸತ್ಯತೆಯನ್ನು ಹೊರಡಿಸಿದ್ದು ಗಮನಾರ್ಹವಾಗಿದೆ.

ಈ ಪುಸ್ತಕದಲ್ಲಿ ಸ್ವಯಂ ಕಲ್ಪಿತವಾದುದು ಏನೂ ಇರುವುದಿಲ್ಲ. ಇದು ಶಿಲಾ ಶಾಸನ, ತಾವರ ಶಾಸನ, ಹಳೆ ದಾಖ್ಲೆಗಳು, ಜಜ್‌ಮೆಂಟ್‌ಗಳು ಮೊದಲಾದುವುಗಳ ಆಧಾರದಿಂದಲೇ ವಿಮರ್ಶಾತ್ಮಕ ದೃಷ್ಟಿಯಿಂದ ಬರೆಯಲ್ಪಟ್ಟಿದೆ. ಇದರಲ್ಲಿ ವಾಕ್ಯ ದೋಷಗಳು ಇತ್ಯಾದಿ ತಪ್ಪುಗಳಿದ್ದರೆ ಓದುಗರು ಅದಕ್ಕೆ ಕ್ಷಮಿಸಿ ಹಂಸಕ್ಷೀರ ನ್ಯಾಯವರಿತು ಗ್ರಾಹ್ಯ ಮಾಡಬೇಕಾಗಿ ಅಪೇಕ್ಷಿಸುತ್ತೇನೆ.

ಈ ಪುಸ್ತಕವನ್ನು ಬರೆಯಲು ಬೇಕಾದ ದಾಖ್ಲೆಗಳನ್ನೂ, ಹಳೆಗ್ರಂಥಗಳನ್ನೂ ಕೊಟ್ಟು ಸಹಕರಿಸಿದ ದಿ| ಡಾ| ಯಂ.ವಿ. ಶಾಸ್ತ್ರಿಗಳ ಪರವಾಗಿ ಅವರ ಸುಪುತ್ರ ಡಾ| ಯಂ.ಸಿ. ಶಾಸ್ತ್ರಿಗಳವರಿಗೂ, ದಿ| ನಟ್ಟೋಜಿ ಶಿವರಾಯರ ಪರವಾಗಿ ಅವರ ಸುಪುತ್ರ ಶ್ರೀ ನಟ್ಟೋಜಿ ಕೃಷ್ಣಯ್ಯನವರಿಗೂ, ದಿ| ಐ.ಕೆ. ಶ್ರೀನಿವಾಸ ರಾಯರಿಗೂ, ದಿ| ಪೊಳಲಿ ಶೀನಪ್ಪ ಹೆಗ್ಗಡೆಯವರಿಗೂ, ಶ್ರೀ ಕಡಬ ಕುಂಬಾಟ್ ಶ್ರೀನಿವಾಸ ರಾಯರಿಗೂ, ದೇವಸ್ಥಾನದ ಹಳೆ ದಾಖ್ಲೆಗಳನ್ನು ಪರಿಶೀಲಿಸಲು ಅವಕಾಶವನ್ನು ಒದಗಿಸಿ ಕೊಟ್ಟ ನನ್ನ ಸಹ ಧರ್ಮದರ್ಶಿಗಳಾದ ಶ್ರೀ ಬೆಳ್ಳಾರೆ ನಾರಾಯಣ ಶೇಕ ಮೊದಲಾದವರಿಗೂ ಅಲ್ಲದೆ 'ತುಳುನಾಡು' ಪುಸ್ತಕವನ್ನು ಬರೆದ ಶ್ರೀ ಗುರುರಾಜ ಭಟ್ ಅವರಿಗೂ ನಾನು ಈ ಮೂಲಕ ನನ್ನ ಪೂರ್ಣ ಕೃತಜ್ಞತೆಯನ್ನು ಅರ್ಪಿಸುತ್ತೇನೆ.

ಕಂಕನಾಡಿ<br>ಮಂಗಳೂರು-2.

**ಡಾ| ಮ.ಸು. ಅಚ್ಯುತ ಶರ್ಮಾ**<br>ಶ್ರೀ ಸುಬ್ರಹ್ಮಣ್ಯ ದೇವಳದ ನಿವೃತ್ತ ಧರ್ಮದರ್ಶಿ

# ಲೇಖಕನ ಮೊದಲ ಮಾತು

ಈ ಕುಕ್ಕೆ ಶ್ರೀ ಸುಬ್ರಹ್ಮಣ್ಯ ಕ್ಷೇತ್ರದಲ್ಲಿ ಮಹತೋಬಾರ್ ಶ್ರೀ ಸುಬ್ರಹ್ಮಣ್ಯೇಶ್ವರ ಪ್ರಸಿದ್ಧ ಜಾತ್ರೆಯು ಪ್ರತಿವರ್ಷ ನವಂಬರ ವಾ ದಶಂಬರ ತಿಂಗಳಲ್ಲಿ ಬರುವ ಮಾರ್ಗಶಿರ ಶುದ್ಧ ಚತುರ್ಥಿ ಪಂಚಮಿಾ ದಿವಸಗಳಲ್ಲಿ ಪಾಲಕಿ ಮತ್ತು ಸಣ್ಣ ರಥೋತ್ಸವಗಳು ಷಷ್ಠಿ ದಿವಸ "ಚಂಪಾಷಷ್ಠಿ ಮಹಾ ರಥೋತ್ಸವವೂ" ಸಪ್ತಮಿಾ ದಿವಸ ಅವಭೃತ ಸ್ನಾನವೂ ಅಷ್ಟು ದಿವಸಗಳಲ್ಲೂ ಅನ್ನದಾನವೂ ಜರಗುತ್ತದೆ. ದಕ್ಷಿಣ ಭಾರತದ ಅನೇಕ ಸ್ಥಳಗಳಿಂದ ಭಕ್ತಾದಿಗಳು ದೇವರ ದರ್ಶನ ಮಾಡಿ ಸೇವೆ ಸಲ್ಲಿಸಿ ಹೋಗುವುದು ದರ್ಶನೀಯವಾಗಿದೆ. ದೇವಸ್ಥಾನದ ಎದುರಿನ ದೊಡ್ಡ ರಸ್ತೆಯ ಇಬ್ಬದಿಯಲ್ಲಿ ಕರ್ನಾಟಕದ ಅನೇಕ ಮಹನೀಯರು ಬಂದ ಭಕ್ತಾದಿಗಳಿಗೆ ಉಳಕೊಳ್ಳಲು ಅನುಕೂಲವಾಗುವಂತೆ ಅನೇಕ ಧರ್ಮಛತ್ರಗಳನ್ನು ಕಟ್ಟಿಸಿದ್ದು, ಅದರಲ್ಲಿಯೂ ಸಾಹುಕಾರ್ ಶ್ರೀ ಕಾಡಯ್ಯನವರ ವಂಶದವರು ಛತ್ರ ಕಟ್ಟಡ ಕಟ್ಟಿಸಿದ್ದು ಮಾತ್ರವಲ್ಲದೆ ಪ್ರತಿ ವರ್ಷ ದೇವರಿಗೆ ಜವಾಹಿರಿಗಾಗಿಯೂ ತುಂಬ ದ್ರವ್ಯ ಸಹಾಯ ಮಾಡುವುದು ನೋಡುವಾಗ ಬಹಳ ಆನಂದವಾಗುತ್ತದೆ.

ಇಂತಹ ಪ್ರಸಿದ್ಧ ಶೈವ ಕ್ಷೇತ್ರದಲ್ಲಿ ಐದು ಜನ ಧರ್ಮದರ್ಶಿಗಳೊಳಗೆ (Trustees) ದೇವಳದ ಹಿತಚಿಂತಕನಾದ ಒಬ್ಬ ಸ್ಮಾರ್ತ ದ್ರಾವಿಡ ಶಿವ ಬ್ರಾಹ್ಮಣನನ್ನು ನೇಮಿಸಬೇಕೆಂದು ಜಜ್‌ಮೆಂಟಿನಲ್ಲಿ (A Suitable member of the Dravida Brahmin of S.K. District and he Shall belong to the seet specified who could at any time get into any part of the Temple in connection with the discharge of the duties without hinderance or obstruction on the score of their caste.) ಎಂದು ಇದ್ದರೂ ಈಗಿನ ಸರಕಾರವು ಕ್ರಮವರಿತು ನೇಮಿಸದೆ ದೇವಳದ ವಿರೋಧವಾಗಿ ವರ್ತಿಸುವ ಪಂಚದ್ರಾವಿಡ ಬ್ರಾಹ್ಮಣರಲ್ಲಿ ಸೇರದ ದ್ವೈತಿಗಳಾದ ಮಾಧ್ವರನ್ನೇ ನೇಮಿಸುವುವರಿಂದ ಒಳಗಿನ ಶೈವಾಗಮ ಪೂಜಾ ಕ್ರಮುವನ್ನು ನಾಶಪಡಿಸಿದಂತಾಗಿದೆ. ಇದನ್ನು ಮಾನ್ಯ ಎಂಡೋಮೆಂಟ್ ಕಮಿಷನರುಗಳು ಅಗತ್ಯ ಗಮನಿಸಬೇಕು.

ಭಕ್ತಾದಿಗಳು ಈ ಪುಸ್ತಕವನ್ನು ಓದಿ ಇಲ್ಲಿಯ ಪೂರ್ಣ ಪೂರ್ವ ಇತಿಹಾಸವನ್ನು ಅರಿತು ತಿಳಿದುಕೊಳ್ಳಬಹುದು.



# ಶ್ರೀ ಸುಬ್ರಹ್ಮಣ್ಯ ಕ್ಷೇತ್ರದ ಚಾರಿತ್ರಿಕ ಹಿನ್ನೆಲೆ

ಮತ್ತು

## ಸ್ಥಾನ ಚ್ಯುತಿಹೊಂದಿ ಗುಪ್ತವಾಗಿರಿಸಿದ ಶ್ರೀ ಸಿದ್ಧಿವಿನಾಯಕ ದೇವರು

## ಶ್ರೀ ಕ್ಷೇತ್ರದ ಸೂಕ್ಷ್ಮ ಪರಿಚಯ

**ಶ್ರೀ ಗಣೇಶಾಯ ನಮಃ। ಶ್ರೀ ಸುಬ್ರಹ್ಮಣ್ಯೇಶ್ವರಾಯ ನಮಃ॥**

ಧ್ಯಾಯೆತ್ಸಿಂಹಗತಂ ವಿನಾಯಕ ಮಮುಂ ದಿಗ್ಬಾಹು ಮಾದ್ಯೆಯಗೇ ।
ತ್ರೇತಾಯಾಂತು ಮಯೂರ ವಾಹನ ಮಮುಂ ಷಡ್ಬಾಹುಕಂ ಸಿದ್ಧಿದಂ
ದ್ವಾಪಾರೇತು ಗಜಾನನಂ ಯುಗಭುಜಂ ರಕ್ತಾಂಗ ರಾಗೋಜ್ವಲಂ ।
ತುರ್ಯೆತು ದ್ವಿಭುಜಂ ಸಿತಾಂಗ ರುಚಿರಂ ಸರ್ವಾರ್ಥದಂ ಸರ್ವದಾ॥
ಶಡಾನನಂ ಕುಂಕುಮ ರಕ್ತವರ್ಣಂ । ಮಹಾಮಂತಿಂ ದಿವ್ಯ ಮಯೂರ ವಾಹನಂ ॥
ರುದ್ರಸ್ಯಸೂನುಂ ಸುರ ಸೈನ್ಯನಾಥಂ । ಗುಹಂ ಸದಾ ಶರಣ ಮಹಂ ಪ್ರಪದ್ಯೆ ॥

ಈ ಕುಕ್ಕೆ ಶ್ರೀ ಸುಬ್ರಹ್ಮಣ್ಯ ಕ್ಷೇತ್ರವು ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಶೈವ ಕ್ಷೇತ್ರಗಳಾದ ಕೊಲ್ಲೂರು, ಉಡುಪಿ, ಧರ್ಮಸ್ಥಳ ಇತ್ಯಾದಿಗಳಂತೆ ಪ್ರಾಮುಖ್ಯವಾದ ಶೈವ ಕ್ಷೇತ್ರವಾಗಿದೆ.

ಇದು ದಕ್ಷಿಣ ಭಾರತದ ಪಡು ಕರಾವಳಿಯಲ್ಲಿರುವ ದಕ್ಷಿಣ ಕನ್ನಡ ಜಿಲ್ಲೆಯ ಈಗಿನ ಸುಳ್ಯ ತಾಲುಕಿನಲ್ಲಿದೆ. ಇದು ಜಿಲ್ಲೆಯ ಅತಿ ಪೂರ್ವ ದಿಕ್ಕಿನಲ್ಲಿರುವ ಪಶ್ಚಿಮ ಘಟ್ಟಗಳ ತಪ್ಪಲಲ್ಲಿ ಕುಮಾರ ಪರ್ವತದ ಬುಡದಲ್ಲಿ ಸುಬ್ರಹ್ಮಣ್ಯ ಎಂಬ ಹೆಸರುಳ್ಳ ಗ್ರಾಮದಲ್ಲಿ ಮೆರೆಯುತ್ತಿದೆ. ಈ ಕ್ಷೇತ್ರದಲ್ಲಿ ಶ್ರೀ ಸುಬ್ರಹ್ಮಣ್ಯೇಶ್ವರನನ್ನು ನಾಗ ರೂಪದಿಂದ ಆರಾಧಿಸುತ್ತಾರೆ. ಹೆಚ್ಚೇಂದರೆ ಅಖಿಲ ಭಾರತದಲ್ಲಿ ಶ್ರೀ ಸುಬ್ರಹ್ಮಣ್ಯನನ್ನು ಈಗ ನಾಗ ರೂಪದಿಂದ ಆರಾಧಿಸುವುದು ಇದು ಒಂದೇ ಕ್ಷೇತ್ರದಲ್ಲಿ ಎಂದು ಹೇಳಲೂಬಹುದು.

ಶ್ರೀ ಕ್ಷೇತ್ರವು ಸಮುದ್ರ ಮಟ್ಟದಿಂದ ಸಾಧಾರಣ 5626 ಅಡಿ ಎತ್ತರ ಉಳ್ಳ ಕುಮಾರ ಪರ್ವತಕ್ಕೆ ತಾಗಿ ಇರುವ ಪುಷ್ಪಗಿರಿ ಎಂದು ಕರೆಯಲ್ಪಡುವ ಬೆಟ್ಟದ ತಪ್ಪಲಲ್ಲಿ ಇರುವುದರಿಂದ ಇದನ್ನು ಒಂದು ಕಾಲದಲ್ಲಿ ಪುಷ್ಪಗಿರಿ ಎಂದೂ ಕರೆಯುತ್ತಿದ್ದರು. ಈ ಕ್ಷೇತ್ರಕ್ಕೆ ಮೂಡು ಈಶಾನ್ಯ ಭಾಗದಲ್ಲಿ ಕೊಡಗು ಮತ್ತು ಮೈಸೂರು ಪ್ರಾಂತ್ಯಗಳು ಇವೆ. ಈ ಕ್ಷೇತ್ರದ ಅಕ್ಷಾಂಶ ರೇಖಾಂಶಗಳು 12 ಡಿಗ್ರಿ- 41N ಮತ್ತು 75 ಡಿಗ್ರಿ' L ಆಗಿದೆ. ಇದು ಭಾರತದಲ್ಲೇ ಪ್ರಸಿದ್ಧವಾದ ಶೈವ ಕ್ಷೇತ್ರವಾಗಿದೆ. (Madras Gazetteir by Wililam Travellar) ಈ ಕ್ಷೇತ್ರವು ಮೈಸೂರು

ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ವಿರಚಿತ 'ತತ್ವನಿಧಿ' ಎಂಬ ಪುಸ್ತಕದ ಲಲಿತಾಗಮ ಪಟಲದಲ್ಲಿ ನಿರೂಪಿಸಿದ ಪ್ರಕಾರ ಭರತಖಂಡಸ್ಥ ೧೦೮ ಶೈವ ಕ್ಷೇತ್ರಗಳಲ್ಲಿ ಒಂದಾಗಿದ್ದು ದಿವ್ಯ ಲಿಂಗಗಳ ಪೈಕಿ 'ಅಹಿಪೇಶ್ವರ ಲಿಂಗ' ವಾಸುಕಿ ಲಿಂಗವು ಇಲ್ಲಿ ಮುಖ್ಯವಾಗಿ ಇರಬೇಕಾಗಿತ್ತು. ಆದರೆ ಈಗ ಗರ್ಭಗೃಹದ ಒಳಗೆ ಲಿಂಗವೇ ಕಾಣುವುದಿಲ್ಲ. ಇದರ ವಿಚಾರ ಮುಂದಕ್ಕೆ ಓದಬಹುದು.

ಈ ಕ್ಷೇತ್ರವು ಸಾಧಾರಣ 2 ಶತಮಾನಗಳ ಹಿಂದೆ ಒಂದು ದೊಡ್ಡ ಪಟ್ಟಣವಾಗಿತ್ತೆಂಬುದು ಇಲ್ಲಿಯ ಸುತ್ತುಮುತ್ತಲಿನ ಸನ್ನಿವೇಶಗಳಿಂದ ತಿಳಿದು ಬರುತ್ತದೆ. ಆ ಸಮಯದಲ್ಲಿ ಇಲ್ಲಿಗೆ ಕುಕ್ಕೆ ಪಟ್ಟಣವೆಂಬ ಹೆಸರಿತ್ತು. ವಿಜಯ ನಗರದ ಅರಸರ ಆಡಳಿತ ಕಾಲದಲ್ಲಿ ಈ ಕ್ಷೇತ್ರವು ಅನೇಕ ರಾಜರುಗಳಿಂದ ಕೊಡಲ್ಪಟ್ಟ ಉಂಬಳಿ ವರಾಡಗಳಿಂದ ಬಹಳ ವೈಭವಯುಕ್ತವಾಗಿ ಮೆರೆಯುತ್ತಿತ್ತೆಂದು ತಿಳಿಯಬೇಕಾಗಿದೆ. ವಿಜಯ ನಗರದ ರಾಜ್ಯಾಧಿಕಾರವು ಬಿದ್ದು ಹೋಗುವ ಸಮಯದಲ್ಲಿ ರಾಜ್ಯವು ಖಂಡ ಖಂಡವಾಗಿ ಪಾಳೆಗಾರರ ಅಧಿಕಾರಕ್ಕೆ ಬಂದು ಈ ಕ್ಷೇತ್ರವು ಬಂಗರ ಒಡೆತನದಲ್ಲಿ ದೇವಳದ ಸರ್ವ ಆಡಳಿತೆಯನ್ನು ತೌಳವ ಸ್ಮಾರ್ತ ದ್ರಾವಿಡ ಬ್ರಾಹ್ಮಣರಾದ - ಅಲ್ಲಿಯ ಸ್ಥಾನೀಕ ಶಿವ ಬ್ರಾಹ್ಮಣರು ನಡೆಸಿಕೊಂಡು ಬರುತ್ತಿದ್ದರು. ಇದು ಸಾಧಾರಣ 1817ರ ವರೆಗೂ ನಡೆದುಕೊಂಡು ಬರುತ್ತಿತ್ತು. (Vide, O.S. 27/1886, ಜಜ್‌ಮೆಂಟ್ ಮತ್ತು ದೇವಳದ ತಾಮ್ರ ಶಾಸನ, ವಗೈರೆ) ವಿಜಯನಗರವು ರಾಜ್ಯವನ್ನು ಕಳೆದುಕೊಂಡ ಸಮಯ ಹಿಂದೂ ದೇವಾಲಯಗಳು ಹಾಳಾಗದಂತೆಯೂ ದೇವಳದ ನಿತ್ಯನೈಮಿತ್ತಿಕ ಪೂಜಾವಗೈರೆ ಕರ್ಮಗಳು ಸಾಂಗವಾಗಿ ನಡಕೊಂಡು ಬರುವಂತೆಯೂ ನಗರ ಸಂಸ್ಥಾನದ ಆಗಿನ ಮಹಾರಾಜರು ದೇವಾಲಯಗಳ ಎಲ್ಲಾ ಹಕ್ಕನ್ನು ಸ್ಥಾನೀಕ ಬ್ರಾಹ್ಮಣರಿಗೆ ಬಿಟ್ಟುಕೊಟ್ಟಿರುತ್ತಾರಾಗಿ ತಿಳಿದು ಬರುತ್ತದೆ. (Vida the third dynesty of Vijaya Nagar by Venkatraman University Reader Madras) ಈ ಸ್ಥಾನಿಕ ಬ್ರಾಹ್ಮಣರು ಶ್ರೀ ಶೃಂಗೇರಿ ಮಠದ ಶಿಷ್ಯರು.

ದಕ್ಷಿಣ ಕನ್ನಡ ಜಿಲ್ಲೆಯು ಪಾಳೆಯಗಾರರ ಆಡಳಿತೆಗೆ ಬಂದಾಗ ಕನ್ನಡ ಜಿಲ್ಲೆಯ ಉತ್ತರದಲ್ಲಿ ಚೌಟರೂ, ದಕ್ಷಿಣದಲ್ಲಿ ಬಂಗರೂ ಆಳಿಕೊಂಡಿದ್ದರು. ಬಂಗರು ದಕ್ಷಿಣದಲ್ಲಿ ಎಂದರೆ ಬೆಳ್ತಂಗಡಿ, ಉಪ್ಪಿನಂಗಡಿ, ಪುತ್ತೂರು ಮತ್ತು ನಂದಾವರಗಳೆಂಬ ಐದು ಸ್ಥಳಗಳಲ್ಲಿ ತಮ್ಮ ಮುಖ್ಯ ಬೀಡುಗಳನ್ನು ಕಟ್ಟಿಕೊಂಡು ಆಳುತ್ತಿದ್ದರು. ಬಂಗರ ಪೈಕಿ ಬಲ್ಲಾಳರಾಯನೆಂಬವನು ಸುಬ್ರಹ್ಮಣ್ಯ ಸೀಮೆಗೆ ಒಡೆಯನಾಗಿದ್ದನು. ಅವನ ಒಂದು ಬೀಡು ಕುಳಕುಂದದಲ್ಲೂ ಮತ್ತೊಂದು ಇಂಜಾಡಿ ಎಂಬಲ್ಲೂ ಇತ್ತು. ಆ ಸ್ಥಳಗಳಲ್ಲಿ ಇವರ ಬೀಡುಗಳ ಕುರುಹುಗಳನ್ನು ನಾವು ಈಗಲೂ ಕಾಣಬಹುದು.

ಈಗಿನ ಸುಬ್ರಹ್ಮಣ್ಯ ಕ್ಷೇತ್ರವು ಇರುವ ಗ್ರಾಮಕ್ಕೆ ಈಗ ಸುಬ್ರಹ್ಮಣ್ಯ ಗ್ರಾಮವೆಂದು ಹೆಸರಿದ್ದರೂ ಮೊತ್ತಮೊದಲು ಇದಕ್ಕೆ 'ಕಸ್ಬಾ ಕುಕ್ಕೆ ಗ್ರಾಮ' ಎಂದು ಕರೆಯುತ್ತಿದ್ದರು. ಆಗ ಈ ಗ್ರಾಮ ಸೇರಿ 32 ಗ್ರಾಮಗಳ ಗುಂಪಿಗೆ ಸುಬ್ರಹ್ಮಣ್ಯ ಸೀಮೆ ಎಂಬುದಾಗಿ ಹೆಸರಿತ್ತು. ಆ 32 ಗ್ರಾಮಗಳು ಯಾವುವೆಂದರೆ : 1. ಕಸ್ಬಾ ಕುಕ್ಕೆ 2. ಸಂಕೇತ ಕುಕ್ಕೆ (ಇಂಜಾಡಿಯ ಬಲ್ಲಾಳ ರಾಯನ ಬೀಡು ಇರುವ ಸ್ಥಳ) 3. ಕಸ್ಬಾಕಿದು 4. ಕುಳಗುಂದ (ಈಗ ಜಾನುವಾರು ಸಂತೆ ಆಗುವ ಸ್ಥಳ ಮತ್ತು ಬಲ್ಲಾಳರಾಯನ ಬೀಡು ಇದ್ದ ಸ್ಥಳ) 5. ಬಾಗೆಮಲೆ 6. ಆಯಿನಕಿದು 7. ಬಿಳಿನೆಲೆ

8. ಕೊಂಬಾರು 9. ಸಿರಿಬಾಗಿಲು 10. ರೆಂಜಿಲಾಡಿ 11. ನೂಜಿಬಾಳ್ತಿಲ 12. ಕುಟ್ರಪಾಡಿ 13. ಏನೆಕಲ್ಲು 14. ಹರಿಹರ ಪಳ್ಳತಡ್ಕ 15. ಕಲ್ಮೆಕಾರು 16. ನೇರೆಂಕಿ 17. ಪುತ್ತಿಗೆ 18. ಕೋಣಾಜೆ 19. ದರ್ಭೆತಡ್ಕ 20. ನೆಕ್ಕಿಲಾಡಿ 21. ಬಂಟ್ರ 22. ಸಂಕೇತ ಕೇಪು 23. ಸಂಕೇತ ಮಟ್ಟಂಪಾಡಿ 24. ಕುತ್ಕುಂಜ 25. ಕಸ್ಬಾ ಮೀನಂಪಾಡಿ 26. ಸಂಕೆಂತ ಮೀನಂಪಾಡಿ 27. ಎಳಿಯೂರು 28 ಕೋಡಿಂಬಳ 29. ಕಡಬ 30. ಸಂಕೇತ ಕಡಬ 31. ಮಲೆಐತ್ತೂರು 32. ಬಾಳಗೋಡು. ಈ ಮೂವತ್ತೆರಡು ಗ್ರಾಮಗಳು ಸುಬ್ರಹ್ಮಣ್ಯ ಸೀಮೆ ಎಂಬ ಹೆಸರು ಪಡಕೊಂಡು ಬಲ್ಲಾಳ ರಾಯನ ಕೈಕೆಳಗೆ ಇತ್ತು. ಇವರು ಜೈನ ಮತಸ್ಥರು. ಈ ಬಲ್ಲಾಳರಾಯನ ಕಡೆಯವರಲ್ಲಿ ಒಂದು ಮನೆಯು ಈಗಲೂ ರೆಂಜಿಲಾಡಿ ಗ್ರಾಮದಲ್ಲಿದೆ. ಮೇಲೆ ಹೇಳಲ್ಪಟ್ಟ ಗ್ರಾಮಗಳು ಈಗ ಸ್ವಲ್ಪ ವ್ಯತ್ಯಾಸವಾಗಿ ಕೆಲವು ಗ್ರಾಮಗಳು ಒಂದಕ್ಕೊಂದು ಸೇರಿವೆ. ಮುಂಚಿನ ಕಸ್ಬಾಕುಕ್ಕೆ, ಸಂಕೇತಕುಕ್ಕೆ ಮತ್ತು ಕುಳಗುಂದವೆಂಬ ಈ ಮೂರು ಗ್ರಾಮಗಳೂ ಒಟ್ಟು ಸೇರಿ ಈಗ ಸುಬ್ರಹ್ಮಣ್ಯ ಗ್ರಾಮವೆಂದು ಕರೆಯಲ್ಪಡುತ್ತದೆ.

ಈ ಕ್ಷೇತ್ರವು ನಾಲ್ಕು ಸುತ್ತಲೂ ಈಗ ದರ್ಪಣ ತೀರ್ಥ, ವ ಕನ್ನಡಿ ಹೊಳೆಯೆಂದು ಕರೆಯಲ್ಪಡುವ ಹೊಳೆ ಮತ್ತು ಕುಮಾರಧಾರಾ ನದಿಯಿಂದ ಆವೃತವಾಗಿರುವುದರಿಂದ ದ್ವೀಪದಂತಿದೆ. ಈ ಕನ್ನಡಿ ಹೊಳೆಗೆ ಮೊತ್ತ ಮೊದಲು ಭೀಮನ ಹೊಳೆಯೆಂತಲೂ ಹೆಸರಿತ್ತಂತೆ. ಇದು ಕುಮಾರಧಾರಾ ನದಿಗೆ ಸಂಗಮವಾಗುವ ಸ್ಥಳಕ್ಕೆ ಮತ್ಸ್ಯತೀರ್ಥವೆಂಬ ಹೆಸರಿದೆ. ಶ್ರೀ ಸುಬ್ರಹ್ಮಣ್ಯ ದೇವರ ಶ್ರೀ ಚಂಪಾಷಷ್ಠಿ ಮಹೋತ್ಸವದ ಅವಭೃತ ಸ್ನಾನವು ಈ ಸಂಗಮ ಸ್ಥಾನದಲ್ಲಿಯೇ ನಡೆಯುತ್ತದೆ. ಕುಮಾರಧಾರೆಯ ಈ ಸ್ಥಳದ ಹೊಳೆಯಲ್ಲಿ ನಿಬಿಡವಾಗಿ ಮೀನುಗಳು ತುಂಬಿರುವುದರಿಂದ ಇಲ್ಲಿಗೆ ಮತ್ಸ್ಯತೀರ್ಥವೆಂದು ಕರೆಯುತ್ತಾರೆ. ಇಲ್ಲಿಗೆ ದೇವಸ್ಥಾನದಿಂದ ಸಾಧಾರಣ 2 ಮೈಲು ದೂರವಿದೆ. ಈ ಕನ್ನಡಿ ಹೊಳೆಯು ಕುಮಾರ ಪರ್ವತಕ್ಕೆ ಹತ್ತಿ ಹೋಗುವ ದಾರಿಯಲ್ಲಿ ಗಿರಿ ಮಠದ ಹತ್ತಿರ ಇರುವ ಒಂದು ಹಳದಿಂದ ಹರಿದು ಬರುತ್ತದೆ. ಕುಮಾರಧಾರ ನದಿಯು ಮೈಸೂರು ಪ್ರಾಂತದ ಬಿಸಿಲೇ ಘಾಟಿಯ ತೆಂಕು ದಿಕ್ಕಿನಲ್ಲಿರುವ ಕುಮಾರ ಪರ್ವತದಿಂದ ಹರಿದು ಬರುತ್ತದೆ. ಈ ಕುಮಾರ ಪರ್ವತದ ಶಿಖರದಲ್ಲೇ ತಾರಾಕಾಸುರನ ಸಂಹಾರಕ್ಕೋಸ್ಕರ, ಶ್ರೀ ಕುಮಾರಸ್ವಾಮಿಗೆ ದೇವಸೇನಾಧಿಪತಿ ಪಟ್ಟವಾಯಿತೆಂದೂ ಆ ಪಟ್ಟಾಭಿಷೇಕದ ತೀರ್ಥವೇ ಧಾರೆಯಾಗಿ ಕೆಳಗೆ ಇಳಿದು ಬಂದುದರಿಂದ ಈ ನದಿಗೆ ಕುಮಾರಧಾರಾ ನದಿಯೆಂಬ ಹೆಸರು ಬಂತೆಂದೂ ಐತಿಹ್ಯವಿದೆ. ಈ ಕುಮಾರ ಪರ್ವತವು ದೇವಸ್ಥಾನದ ಮೂಡು ದಿಕ್ಕಿನಲ್ಲಿದೆ.

ಈ ಕುಮಾರ ಪರ್ವತದ ದೃಶ್ಯವು ನೋಟಕರಿಗೆ ಪ್ರಕೃತಿ ಸೌಂದರ್ಯದ ನೆಲೆವೀಡಂತಿದ್ದು ಬಹಳ ಅಂದವಾಗಿ ಕಾಣುತ್ತದೆ. ಮೇಲೆ ಹೋಗಲು ದಾರಿ ಇದ್ದರೂ ಹತ್ತಿಕೊಂಡು ಹೋಗಲಿಕ್ಕೆ ಕಷ್ಟಸಾಧ್ಯವಾಗಿದೆ. ಕೆಲವರು ಇಲ್ಲಿ ಮಲೆಕುಡಿಯರವರ ಸಹಾಯದಿಂದ ಪರ್ವತದ ತುದಿಗೆ ಹತ್ತಿ ಬರುತ್ತಾರೆ. ಮೇಲೆ ಹತ್ತಿದರೆ ಸಿದ್ಧ, ಶೇಷ ಮತ್ತು ಕುಮಾರಗಳೆಂಬ ಮೂರು ಶಿಖರಗಳು ಕಾಣ ಸಿಕುತ್ತವೆ.

ಈ ಸುಬ್ರಹ್ಮಣ್ಯ ಕ್ಷೇತ್ರದಿಂದ ಪುತ್ತೂರಿಗೆ 35 ಮೈಲು ಮಂಗಳೂರಿಗೆ 65 ಮೈಲುಗಳ ಅಂತರವಿದೆ.

# ಕ್ಷೇತ್ರದ ಮಹಿಮೆ

ಶ್ರೀ ಕುಕ್ಕೆ ಲಿಂಗನ ಕಂಡೆವು
ಕುಮಾರಧಾರೆ ಮಿಂದೆವು
ಕೊಪ್ಪರಿಗನ್ನ ಉಂಡೆವು
ಶ್ರೀ ಅನ್ನದಾತ ಸುಬ್ಬಪ್ಪನ ಪಾದಕ್ಕೆ ನಮೋ ನಮಃ

ಈ ಕ್ಷೇತ್ರವು ಅತಿ ಪುರಾತನದ್ದಾಗಿ ಮಹಾ ಮಹಿಮೆ ಉಳ್ಳದ್ದಾಗಿದೆ. ಈ ಸುಬ್ರಹ್ಮಣ್ಯ ಕ್ಷೇತ್ರದ ಮಹಿಮೆಯು ಇಲ್ಲಿಯ ಪ್ರಧಾನ ದೇವರಾದ ಶ್ರೀ ಸುಬ್ರಹ್ಮಣ್ಯೇಶ್ವರನೆಂಬ ದೇವರ ಹೆಸರಿನ ಶಬ್ದಾರ್ಥದಿಂದಲೇ ವ್ಯಕ್ತವಾಗುತ್ತದೆ. ಅರ್ಥಃ ಸುಷ್ಟು + ಬ್ರಹ್ಮ = ಸುಬ್ರಹ್ಮ, "ಯಸ್ಮಿನ್ ಕ್ಷೇತ್ರೇಸುಬ್ರಹ್ಮ ಜ್ಞಾನಂ ಸಂವರ್ಧತೇ ತತ್‌ಕ್ಷೇತ್ರಂ ಸುಬ್ರಹ್ಮಣ್ಯಕ್ಷೇತ್ರಂಇತಿ" ಯಾವ ಕ್ಷೇತ್ರದಲ್ಲಿ ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವದ ಬ್ರಹ್ಮ ಜ್ಞಾನವು ಅಲ್ಲಿಯ ವಾಸದಿಂದಲೂ ಮತ್ತು ಅಲ್ಲಿಯ ದೇವರ ದರ್ಶನದಿಂದಲೂ ವೃದ್ಧಿಯಾಗುತ್ತದೋ ಆ ಕ್ಷೇತ್ರಕ್ಕೆ ಅದರಿಂದಾಗಿ ಸುಬ್ರಹ್ಮಣ್ಯ ಕ್ಷೇತ್ರವೆಂದೂ, ಅಲ್ಲಿಯ ದೇವರಿಗೆ ಶ್ರೀ ಸುಬ್ರಹ್ಮಣ್ಯೇಶ್ವರನೆಂದೂ ಹೆಸರು ಬಂದದ್ದಾಗಿದೆ. ಅಲ್ಲದೆ ಆ ಕ್ಷೇತ್ರದಲ್ಲಿ ಮೇಲೆ ವಿವರಿಸಲ್ಪಟ್ಟ ಭೇದಭಾವವಿಲ್ಲದ ಶುದ್ಧ ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರೂ ಋಷಿಗಳೂ ವಾಸವಾಗಿದ್ದರೆಂತಲೂ ತಿಳಿಯಬಹುದಾಗಿದೆ. ಅಂತಹ ಅನ್ವರ್ಥನಾಮವನ್ನು ಹೊಂದಿದ ಈ ಸುಬ್ರಹ್ಮಣ್ಯ ಕ್ಷೇತ್ರದ ಮಹಿಮೆಯನ್ನು ಎಷ್ಟು ಹೊಗಳಿದರೂ ಅತಿಶಯೋಕ್ತಿಯಾಗಲಾರದು.

ಇಲ್ಲಿ ವಾಸುಕಿಯು ಗರುಡನ ಭಯಕ್ಕೆ ಹೆದರಿ ಶ್ರೀಕುಮಾರ ಸ್ವಾಮಿಯ ಸಹಾಯವನ್ನು ಪಡೆದು ಅವನ ರಕ್ಷಣೆಯಲ್ಲಿ ನೆಲೆಸಿರುವುದರಿಂದ ಈ ಕ್ಷೇತ್ರವನ್ನು ವಾಸುಕಿ ಕ್ಷೇತ್ರವೆಂದೂ ಕರೆಯುತ್ತಿದ್ದರು. ಶ್ರೀ ಕುಮಾರ ಸ್ವಾಮಿಯು ತಾರಕಾಸುರನನ್ನು ಸಂಹಾರ ಮಾಡಿದ ಪ್ರಾಯಶ್ಚಿತ್ತಕ್ಕಾಗಿ ಇಲ್ಲಿ ಮೂರು ಲಿಂಗಗಳನ್ನು ಪ್ರತಿಷ್ಠಿಸಿ ತಾನು ವಾಸುಕಿಯಲ್ಲೇ ಸನ್ನಿಹಿತನಾಗಿರುವನೆಂದು ಇತಿಹಾಸವಿದೆ. ಈ ಕುಮಾರ ಸ್ವಾಮಿಯು ತನ್ನನ್ನು ನಂಬಿದ ಭಕ್ತಾದಿಗಳ ಸರ್ವ ರೋಗಗಳನ್ನೂ ನಿವೃತ್ತಿಪಡಿಸಿ ಅವರಿಗೆ ಆರೋಗ್ಯದಾತನಾಗಿಯೂ, ಸರ್ವ ಸಂಕಷ್ಟಗಳನ್ನು ಪರಿಹರಿಸುವವನಾಗಿಯೂ, ನಿರ್ಗತಿಕರಿಗೆ ಅನ್ನದಾನವನ್ನು ಮಾಡಿ ಅದರಿಂದ ಸಂತೋಷಪಡುವವನಾಗಿಯೂ ಇರುವನೆಂದು ತಿಳಿಯಬೇಕು. ಇಲ್ಲಿ ಸಂತರ್ಪಣೆ ನಡೆಯುತ್ತಿರುವಾಗ ನಾಗ ರೂಪದಿಂದ ಜನರಿಗೆ ದರ್ಶನವಿತ್ತು ಸಂತರ್ಪಣೆಯು ಸಾಂಗವಾಗಿ ನಡೆಯುತ್ತದೋ ಎಂಬ ವಿಚಾರಣೆಯನ್ನು ಕೂಡಾ ಮಾಡುತ್ತಿದ್ದನೆಂತಲೂ, ಭಕ್ತರು ನಾಗ ದರ್ಶನದಿಂದ ಹೆದರೆ 'ಅನ್ನದಾತ ಸುಬ್ಬಪ್ಪಾ' ಎಂದು ಹೇಳುತ್ತಾ ಸರ್ಪದ ಬೆನ್ನನ್ನು ಸವರುತ್ತಿದ್ದರೆಂದೂ ಪ್ರತೀತಿ ಇದೆ.

ಈ ಕ್ಷೇತ್ರವನ್ನು ಒಂದು ಕಾಲದಲ್ಲಿ ಆದಿತ್ಯ ಕ್ಷೇತ್ರವೆಂದು ಕರೆಯುತ್ತಿದ್ದರೆಂದೂ ತಿಳಿದು ಬರುತ್ತದೆ. ಏಕೆಂದರೆ ಪಾಂಡವರು ಕಾಮ್ಯಕಾ ವನದಲ್ಲಿರುವಾಗ ಸೂರ್ಯ ದೇವರು ಕೊಟ್ಟ

---

ಉಡುಪಿಯು ಶೈವ ಕ್ಷೇತ್ರ ಎಂಬುದನ್ನು ನಾನು ಈ ಮೊದಲು ಪ್ರಕಟಿಸಿದ "ಉಡುಪಿ ಕ್ಷೇತ್ರದ ನೈಜ ಚಿತ್ರ ಮತ್ತು ಚಾರಿತ್ರಿಕ ಹಿನ್ನೆಲೆ" ಎಂಬ ಪುಸ್ತಕದಲ್ಲಿ ನೋಡಿರಿ.

ಅಕ್ಷಯ ಪಾಂತ್ರವನ್ನು ಇಲ್ಲಿ ಬಿಟ್ಟಿರುವರೆಂದೂ ಆದಕಾರಣ ಆ ಸೂರ್ಯ ದೇವರ ಮಹಿಮೆಯಿಂದ ಇಲ್ಲಿ ಸಂತರ್ಪಣೆಯ ಸಮಯದಲ್ಲಿ ಅನ್ನ ಬೇಯಿಸಿ ರಾಶಿ ಹಾಕಿದ ಪಲ್ಲದಲ್ಲಿ ಅನ್ನವು ಅಕ್ಷಯವಾಗುತ್ತಿತ್ತು ಎಂದೂ ಪ್ರತೀತಿ ಇದೆ. ಆದಿ ಶಂಕರರು ಈ ಕ್ಷೇತ್ರವನ್ನು ಸಂದರ್ಶಿಸುವಾಗ ಇಲ್ಲಿ ದಿವಾಕರವಾದಿಗಳೂ ಹಿರಣ್ಯ ಗರ್ಭವಾದಿಗಳೂ ಆದ ಬ್ರಾಹ್ಮಣರು ಇದ್ದರೆಂದು ಶ್ರೀ ಶಂಕರ ವಿಜಯದಿಂದ ತಿಳಿದು ಬರುವುದರಿಂದ ಇದನ್ನು ಆಗ ಆದಿತ್ಯ ಕ್ಷೇತ್ರವೆಂದೂ ಕರೆಯುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ.

ಕುಷ್ಟ ರೋಗಿಗಳು ಕುಮಾರಧಾರ ನದಿಯಲ್ಲಿ ಸ್ನಾನ ಮಾಡಿ ಅದರ ಮೃತ್ತಿಕೆಯಿಂದಲೇ ಮೈ ತೊಳೆದು ದೇವರ ಮೂಲ ಮೃತ್ತಿಕಾ ಪ್ರಸಾದವನ್ನು ಬಿಡದೆ ಮೂರು ವರ್ಷ ಸೇವಿಸುತ್ತಾ ಬೀದಿ ಮಡೆಸ್ನಾನ ಮಡೇ ಮಡೆಸ್ನಾನ (ಎಂಜಲಿನಲ್ಲಿ ಹೊರಳಾಡುವುದು)ವನ್ನು ಮಾಡಿದರೆ ರೋಗವು ನಿವೃತ್ತಿಯಾಗುತ್ತದೆ ಎಂದು ಇಲ್ಲಿಯ ಐತಿಹ್ಯ. ಆ ಪ್ರಕಾರ ಅನೇಕರು ಹರಿಕೆ ಹೊತ್ತು ಮೇಲೆ ಹೇಳಿದಂತೆ ಹರಿಕೆಯನ್ನು ನಡಿಸಿದ್ದರಿಂದ ಮೇಲೆ ಹೇಳಿದ ರೋಗದಿಂದ ಗುಣಮುಖ ಹೊಂದುತ್ತಾರೆಂದು ತಿಳಿದು ಬಂದಿದೆ. ಅಲ್ಲದೆ ಈಗಲೂ ಅನೇಕ ಭಕ್ತರು ಹರಕೆ ಹೊತ್ತು ಇಲ್ಲಿ ಮಡೆ ಮಡೆಸ್ನಾನ, ಬೀದಿ ಮಡೆಸ್ನಾನ, ಅಂಗ ಪ್ರದಕ್ಷಿಣೆ ಇತ್ಯಾದಿಗಳನ್ನು ಪ್ರತಿ ವರ್ಷ ಮಾಡುವುದನ್ನು ಇಲ್ಲಿಯ ಚಂಪಾ ಷಷ್ಠಿ ಮಹೋತ್ಸವ ಸಮಯ ನೋಡಬಹುದು. ಈಗ ಕೆಲವು ವರ್ಷಗಳಿಂದ ಈ ರೀತಿಯ ಹರಿಕೆ ಹೊತ್ತು ಬೀದಿ ಮಡೆಸ್ನಾನ ಮಾಡುವುದು ತೀರಾ ವಿರಳವಾಗಿದೆ. ಭೀಮನು ತನ್ನ ಅಣ್ಣನಾದ ಧರ್ಮರಾಜನು ನಡೆಸಿದ ರಾಜಸೂಯ ಯಾಗದ ಶುದ್ಧಿಗೋಸ್ಕರ ಹಿಮಾಲಯದಿಂದ ಕರೆದುಕೊಂಡು ಬಂದ ಪುರುಷಾಮೃಗವು ಇಲ್ಲಿಗೆ ಬಂದಿರುವುದೆಂಬ ಐತಿಹ್ಯದಿಂದ ಇಲ್ಲಿ ಬಂದ ಭಕ್ತಾದಿಗಳು ಜಾತಿ ಭೇದವನ್ನು, ಮಡಿ ಮೈಲಿಗೆಗಳನ್ನು ಎಂಜಲು ಎಂಬ ಭಾವನೆಯನ್ನೂ ಬಿಡಬೇಕೆಂಬುದನ್ನು ತೋರಿಸುವುದಕ್ಕೆಯೇ ಇಲ್ಲಿಯ ದೊಡ್ಡ ಹರಕೆ ಎಂದರೆ ಮೇಲೆ ಹೇಳಿದ ಮಡೆ ಮಡೆಸ್ನಾನ ಮತ್ತು ಬೀದಿ ಮಡೆಸ್ನಾನ - ಬೀದಿ ಮಡೆಸ್ನಾನವೆಂದರೆ ದೇವರಲ್ಲಿ ಪ್ರಾರ್ಥನೆ ಮಾಡಿ ಕುಮಾರ ಧಾರಾನದಿಯ ಮತ್ಸ್ಯತೀರ್ಥದಲ್ಲಿ ಸ್ನಾನಮಾಡಿ ಅಲ್ಲಿಂದ ಹೊರಳಾಡಲು ಆರಂಭಿಸಿದರೆ ಎಲ್ಲಿಯೂ ಏಳದೆ ಸಾಧಾರಣ ಒಂದೂವರೆ ಯಾ ಎರಡುಮೈಲು ದೂರ ಬೀದಿಯಲ್ಲಿಯೇ ಹೊರಳಾಡಿಕೊಂಡು ದೇವಳದ ಹೊರ ಅಂಗಣಕ್ಕೆ ಬಿದ್ದು ಅಲ್ಲಿ ಒಂದು ಪ್ರದಕ್ಷಿಣೆ ಮಾಡಿ ಹಾಗೆಯೇ ಹೊರಳಾಡಿಕೊಂಡು ದೇವರ ಎದುರಲ್ಲಿ ಹರಿಯುವ ದರ್ಪಣ ತೀರ್ಥದಲ್ಲಿ ಬಿದ್ದು ಸ್ನಾನ ಮಾಡಿ ಎದ್ದು ಬಂದು ದೇವರ ಸೇವೆಯನ್ನು ಕೈಕೊಳ್ಳುವುದಾಗಿದೆ. ಮಡೆ ಮಡೆಸ್ನಾನವೆಂದರೆ ಮಹೋತ್ಸವದ ಸಮಯ ಚೌತಿ ಪಂಚಮಿ ಷಷ್ಠಿ ದಿವಸ ಬ್ರಾಹ್ಮಣ ಸಂತರ್ಪಣೆ ಆದೊಡನೆ ಹರಿಕೆ ಹೊತ್ತವರು ಸಂತರ್ಪಣೆ ನಡೆದ ಎಂಜಲಲ್ಲಿ ಹೊರಳಾಡಿ ಒಂದು ಸುತ್ತು ಬಂದು ಕನ್ನಡಿ ಹೊಳೆ ವರೇಗೆ ಹೋಗಿ ಅಲ್ಲಿ ಸ್ನಾನ ಮಾಡಿ ಬರುವುದು. ಅಂಗಪ್ರದಕ್ಷಣೆ ಎಂದರೆ ದೇವಳದ ಒಳ ಮತ್ತು ಹೊರ ಅಂಗಣದ 8 ಮೂಲೆಗಳಲ್ಲಿ ಸ್ವಲ್ಪ ಸ್ವಲ್ಪ ಹೊರಳಾಡಿ ಕನ್ನಡಿ ಹೊಳೆಯಲ್ಲಿ ಸ್ನಾನ ಮಾಡಿ ದೇವರ ಸೇವೆ ಮಾಡುವುದು.

ಅನೇಕರು ಮಕ್ಕಳಾಗದೆ ಇದ್ದವರು ಇಲ್ಲಿ ನಾಗಪ್ರತಿಷ್ಠೆಯನ್ನು ಮಾಡಿಸಿ ಭಜನೆಗೆ ಕುಳಿತುಕೊಳ್ಳುವುದರಿಂದ ಸುಪುತ್ರರನ್ನು ಪಡೆದಿದ್ದಾರೆ. ಮೈಸೂರು ಮಹಾರಾಜರೇ ತನಗೆ

ಪುತ್ರೋತ್ಸವವಾದುದಕ್ಕೆ ದೇವರಿಗೆ ಹಾಲು ನೇವೇದ್ಯಕ್ಕೆ ಚಿನ್ನದ ದೊಡ್ಡ ಬಟ್ಟಲೊಂದನ್ನು ಸೇವೆ ಸಲ್ಲಿಸಿರುವುದನ್ನು ದೇವಳದಲ್ಲಿ ಈಗಲೂ ನೋಡಬಹುದು. ಹುಟ್ಟಿದ ಮಕ್ಕಳು ಸಾಯುವುದನ್ನು ತಡೆಯಲು ಚಿನ್ನದ, ವ ಬೆಳ್ಳಿಯ ತೊಟ್ಟಿಲ ಮಗು ಮಾಡಿಸಿ ಸೇವೆ ಸಲ್ಲಿಸುತ್ತಾರೆ. ಈ ರೀತಿ ಅನೇಕತರದ ಬೆಳ್ಳಿಯ, ಚಿನ್ನದ ಹರಿಕೆಗಳು ತುಂಬಾ ಇಲ್ಲಿ ಬಂದು ಬೀಳುವುದು ಇಲ್ಲಿಯ ಮಹಿಮೆಯ ದ್ಯೋತಕವಾಗಿದೆ. ಇಷ್ಟು ಸುಪ್ರಸಿದ್ಧ ಮಹಿಮೆಯುಳ್ಳ ಕ್ಷೇತ್ರವು ನಮ್ಮ ಜಿಲ್ಲೆಯಲ್ಲಿ, ವ ನಮ್ಮ ದಕ್ಷಿಣ ಭಾರತದಲ್ಲೇ ಇದು ಒಂದು ಅಲ್ಲದೆ ಬೇರೆ ಇಲ್ಲ ಎಂದು ಹೇಳಿದರೂ ಅತಿಶಯೋಕ್ತಿಯಾಗಲಾರದು.

ಒಂದು ಕ್ಷೇತ್ರದ ಮಹಿಮೆಯು ಅಲ್ಲಿಯ ಸದಾಚಾರ ಮತ್ತು ಆಯಾಯ ದೇವತೆಗಳಿಗೆ ಆಯಾಯ ಆಗಮೋಕ್ತ ಪ್ರಕಾರ ಸಕಾಲದಲ್ಲಿ ನಡೆಯುತ್ತಿರುವ ನಿತ್ಯ ನೈಮಿತ್ತಿಕ ಪೂಜಾ ವಿನಿಯೋಗಾದಿಗಳನ್ನು ಹೊಂದಿಕೊಂಡಿದೆ ಎಂದು ತಿಳಿಯಬೇಕು. ಇದು ಸರಿಯಾಗಿ ಇಲ್ಲದಿದ್ದರೆ ಆ ದೇವಳಕ್ಕೆ ಮೌಢ್ಯ ಬಂದಂತೆ ಸರಿ.

ಈ ದೇವಳದ ಆಡಳಿತೆಯು 1845ನೇ ಇಸವಿಯಲ್ಲಿ ಅಲ್ಲಿಯ ಸ್ಮಾರ್ತ ಬ್ರಾಹ್ಮಣ ಹೆಬ್ಬಾರರ ಆಡಳಿತೆಯಿಂದ ತಪ್ಪಿ ಅಲ್ಲಿಯ ಮಾಧ್ವ ವೈಷ್ಣವ ಸ್ವಾಮಿಗಳ ಆಡಳಿತೆಗೆ ಆ ಕಾಲದ ಜಿಲ್ಲೆಯ ಕಲೆಕ್ಟರ್ ಬ್ಲಾಯರ್‌ರವರ ಸನದಿನಿಂದ ಬಂತು. ಮಾಧ್ವ ಸ್ವಾಮಿಗಳು ಶೈವ ಮತ್ತು ಸ್ಮಾರ್ತ ತತ್ವಕ್ಕೆ ವಿರೋಧಿಗಳಾಗಿದ್ದು ದೇವಳದಲ್ಲಿ ಶೈವಾಗಮ ಪ್ರಕಾರ ನಡೆಯುತ್ತಿದ್ದ ಪೂಜಾ ಕ್ರಮಗಳನ್ನು ನಿಲ್ಲಿಸಿ ವೈಷ್ಣವ (ವೈಖಾನಸ) ಆಗಮಕ್ಕೆ ಪರಿವರ್ತಿಸಿ ಸುಬ್ರಹ್ಮಣ್ಯನ ಹತ್ತಿರ ಸಾಲಿಗ್ರಾಮಗಳನ್ನು ಇಟ್ಟು ಪೂಜಿಸುವಂತೆ ಮಾಡಿ ದೇವಳದ ಮಹಿಮೆಗೆ ಮೌಢ್ಯವನ್ನು ತಂದಿರಿಸಿದರು. ಇವರ ಕಾಲದಲ್ಲಿ ದೇವಳದಲ್ಲಿ ವಂಚನೆ, ಕಳವು, ಸುಲಿಗೆ ಇತ್ಯಾದಿಗಳು ಆರಂಭವಾಗಿ ಅನಾಚಾರವು ಹೆಚ್ಚಾಯಿತು. ಈ ಮಾಧ್ವ ಸ್ವಾಮಿಗಳು ಈ ದೇವಳಕ್ಕೆ ವರ್ಷಂಪ್ರತಿ ಸರಕಾರದಿಂದ ಸಿಕ್ಕುತ್ತಿದ್ದ ರೂಪ್ಯಾ 4400 ತಸದೀಕು ಮತ್ತು ಇತರ ಉತ್ಪತ್ತಿಗೆ ಮರುಳಾಗಿ ದೇವಳದ ಆಡಳಿತೆಯನ್ನು ವಹಿಸಿಕೊಂಡು ದೇವಳದ ಸೊತ್ತನ್ನು ದುರುಪಯೋಗಪಡಿಸುತ್ತಿದ್ದುದು ಮಾತ್ರವಲ್ಲದೆ ಶ್ರೀ ಸುಬ್ರಹ್ಮಣ್ಯ ದೇವರ ಗುಡಿಯನ್ನೇ ತಮ್ಮ ಮಠದ ನರಸಿಂಹ ದೇವರ ಗುಡಿಯನ್ನಾಗಿ ಪರಿವರ್ತಿಸಲು ಪ್ರಯತ್ನಿಸಿದ್ದು ಅಲ್ಲಿಯ ಸನ್ನಿವೇಶ ಮತ್ತು ರಿಕಾರ್ಡುಗಳಿಂದ ಗೊತ್ತಾಗುತ್ತದೆ. ಆದರೆ ಅವರಿಗೆ ಅದು ಸಾಧ್ಯವಾಗದೇ ಹೋದುದರಿಂದ ಅದರ ಬದಲಿಗೆ ದೇವಳದ ಒಳ ಅಂಗಣದ ಆಗ್ನೇಯ ಮೂಲೆಯಲ್ಲಿದ್ದ ಗುಡಿಯಿಂದ ಶ್ರೀ ಸುಬ್ರಹ್ಮಣ್ಯ ದೇವರ ಪರಿವಾರ ದೇವರಾದ ಶ್ರೀ ಸಿದ್ಧಿವಿನಾಯಕ ವಿಗ್ರಹವನ್ನು ಪದಚ್ಯುತಿಗೊಳಿಸಿ ತಮ ಸ್ವಂತ ಮಠದ ನರಸಿಂಹ ದೇವರನ್ನು ಆ ಗುಡಿಯಲ್ಲಿ ಇರಿಸಿ ಆ ಗುಡಿಯನ್ನು ತಮ್ಮದನ್ನಾಗಿ ಮಾಡಿಕೊಂಡರೆಂದು ತಿಳಿದು ಬರುತ್ತದೆ.

ಆದರೆ ಕ್ಷೇತ್ರದ ಮಹಿಮೆಯಿಂದ ಅನ್ಯಾಯವೆಸಗಿದ ಅವರಿಗೆ ಆಗಿಂದಾಗಲೇ ತಕ್ಕ ಪ್ರತಿಫಲವು ಸಿಕ್ಕಿ ಅವರು ದೇವಳದ ಆಡಳಿತೆಯಿಂದ ವಿರಹಿತ ಮಾಡಲ್ಪಟ್ಟರು. ಇದರ ವಿವರವನ್ನು ''ಶ್ರೀ ಸುಬ್ರಹ್ಮಣ್ಯ ಮಠ, ಅದರ ಮಾಧ್ವ ಸ್ವಾಮಿಗಳು ಮತ್ತು ಇವರಿಂದಾಗಿ ದೇವಳಕ್ಕೆ ಒದಗಿದ ಸಂಕಷ್ಟಗಳು''- ಎಂಬ ಶೀರ್ಷಿಕೆಯ ವಿವರಣೆಯಲ್ಲಿ ಓದಬಹುದು. ದೇವಳದ ಆಡಳಿತೆಯು ಮಾಧ್ವ ಸ್ವಾಮಿಗಳಿಂದ ತಪ್ಪಿದರೂ ಅವರ ಕಾಲದಲ್ಲಿ ಸುಬ್ರಹ್ಮಣ್ಯನ ಅರ್ಚಕರಾಗಿ



ದೇವಸ್ಥಾನಕ್ಕೆ ಒಳ ಪ್ರವೇಶಿಸುವ ಹೆಬ್ಬಾಗಿಲು



1955ನೇ ಇಸವಿಯಲ್ಲಿ ಕುಮಾರಧಾರಾ ಮತ್ಸ್ಯತೀರ್ಥದಲ್ಲಿ ನಡೆದ ತೆಪ್ಪೋತ್ಸವ

ನೇಮಕಗೊಂಡ ಅವರ ಮಾಧ್ವ ಮತಸ್ಥರೇ ಆದ ಆಸ್ರಣ್ಣರು ಇಂದಿನವರೇಗೂ ಅರ್ಚಕರಾಗಿ ಇರುವುದರಿಂದ ದೇವಳದಲ್ಲಿ ಶೈವಾಗಮೋಕ್ತ ಪೂಜಾಕ್ರಮಗಳು ಇನ್ನೂ ಏರ್ಪಟ್ಟಿಲ್ಲ. ಇದು ಸರಿಯಾಗಬೇಕಾದರೆ ರಾಜಾಶ್ರಯವು ಬೇಕು. ನಮ್ಮ ದೇಶದಲ್ಲಿ ಹಿಂದೂ ಧರ್ಮದ ತತ್ವಗಳಿಗೆ ಸರಕಾರದ ಬೆಂಬಲವಿಲ್ಲದ್ದರಿಂದ ಧರ್ಮ ಸಮ್ಮತವಾದ ಪೂಜಾಕ್ರಮಗಳು ದೇವಳಗಳಲ್ಲಿ ಬರುವುದು. ಕಷ್ಟಸಾಧ್ಯವಾಗಿದೆ. ಆದರೂ ಕಾಲಕ್ರಮೇಣ ದೇವಳದಲ್ಲಿ ಆ ಸ್ಥಳದ ಮಹಿಮೆಯಿಂದ ಪೂಜಾಕ್ರಮಗಳು ಪುನರ್ವ್ಯವಸ್ಥೆ ಗೊಳಿಸಲ್ಪಟ್ಟು ಸರಿಯಾಗಬಹುದೆಂದು ಈಗಿನ ಸನ್ನಿವೇಶಗಳಿಂದ ತೋರಿಬರುತ್ತದೆ. ಇದಕ್ಕೆ ಉದಾರಣೆಯಾಗಿ ಪದಚ್ಯುತಿಗೊಳಿಸಲ್ಪಟ್ಟ ವಿನಾಯಕ ದೇವರ ಗುಡಿ ವಿಚಾರದಲ್ಲಿ 1958ರಲ್ಲಿ ಆರಂಭವಾದ ವ್ಯಾಜ್ಯಗಳು ಅಪೀಲ್‌ನಲ್ಲಿ ಈಗ ನಮ್ಮ ಜಿಲ್ಲೆಯ ನ್ಯಾಯಾಧೀಶರಲ್ಲಿ ಇರುವುದು ನಿದರ್ಶನವಾಗಿದೆ.

ಪರಮಾತ್ಮನು ಅವಿಕಾರಿಯೂ, ಅವಿನಾಶಿಯೂ ಮತ್ತು ವ್ಯಾಪಕವಾಗಿ ರುವುದರಿಂದ ರೂಪನಾಮಗಳು ಅವನಿಗೆ ಕಲ್ಪಿತಗಳಾಗಿವೆ. ಆದರೂ ನಾವು ವ್ಯಾವಹಾರಿಕ ಪ್ರಾಪಂಚಿಕಸತ್ತೆಯಲ್ಲಿರುವಾಗ ಆಯಾಯ ಅಭಿಮಾನಿ ದೇವತೆ ಗಳನ್ನು ಅರ್ಚಿಸುವುದು ಧರ್ಮಸಮ್ಮತ. ಸರಕಾರವು ಒಂದೇ ಆಗಿದ್ದರೂ, ನ್ಯಾಯಾಂಗದವರು ಆಡಳಿತ ವರ್ಗದಲ್ಲೂ ಆಡಳಿತ ವರ್ಗದವರು ನ್ಯಾಯಾಂಗ ದಲ್ಲೂ ಕೆಲಸ ಮಾಡಿದರೆ ಸರಿಯಾದೀತೇ? ಅದು ಸಾಧ್ಯವಿಲ್ಲ. ಆಯಾಯ ವಿಭಾಗಗಳು ತಮ್ಮ ತಮ್ಮ ತತ್ವಗಳನ್ನು ಅನುಸರಿಸಿ ಕರ್ತವ್ಯ ನಡೆಸಿದರೇನೇ ರಾಜಾಡಳಿತವು ಉತ್ತಮ ರೀತಿಯಲ್ಲಿ ನಡೆದೀತು. ಅದರಂತೆ ಸರ್ವವ್ಯಾಪಿ ಪರಮಾತ್ಮನು ಒಬ್ಬನೇ ಆದರೂ ಅವನ ಅಂಶವಾದ ಶಿವ, ವಿಷ್ಣು ದುರ್ಗಾ, ಗಣಪತಿ ಇತ್ಯಾದಿ ದೇವತೆಗಳಿಗೆ ಆಯಾಯ ಆಗಮೋಕ್ತ ಪ್ರಕಾರ ಸಮಯವರಿತು ವಿನಿಯೋಗಗಳನ್ನು ಭಕ್ತಿಯಿಂದ ಸಲ್ಲಿಸಿದರೇನೇ ಅಲ್ಲಿಯ ಮಹಿಮೆಯು ಹೆಚ್ಚುವುದಲ್ಲದೆ ಬರೇ! ಹಣದ ಆಶೆಗಾಗಿ ತಮ್ಮ ತತ್ವಕ್ಕೆ ಸಂಬಂಧಪಡದ ದೇವಳಗಳಲ್ಲಿ ಅರಿವಿಲ್ಲದ ಜನರಿಗೆ ತಾವು ಅರ್ಚಕರೆಂದು ತೋರಿಸಿಕೊಂಡು ವಿಧಿ ತಪ್ಪಿ ಯದ್ವಾತದ್ವಾ ಮಾಡಿ ಜನರನ್ನು ವಂಚಿಸಿ ಕರ್ತವ್ಯ ಮಾಡುವುದು ದೇವಳದ ವ ಕ್ಷೇತ್ರದ ಮಹಿಮೆಗೇನೇ ಕುಂದು ತಂದತ್ತಾಗುತ್ತದೆ. ಆದುದರಿಂದ ಸರಕಾರದಿಂದ ನೇಮಿಸಲ್ಪಟ್ಟ ಧರ್ಮದರ್ಶಿಗಳು ಆಯಾಯ ದೇವಳಗಳ ಈ ರೀತಿಯ ಕುಂದು ಕೊರತೆಗಳನ್ನು ಸರಕಾರದ ಗಮನಕ್ಕೆ ತಂದು ಸರಿಪಡಿಸುವುದು ಅತ್ಯವಶ್ಯವಾಗಿದೆ. ಅಲ್ಲದೆ ಸರಕಾರದವರು ಕೂಡಾ ಧರ್ಮದರ್ಶಿಗಳನ್ನು ನೇಮಿಸುವಾಗ ಆಯಾಯ ದೇವಳಗಳ ಹಿತಚಿಂತಕರಾದ ಅವುಗಳ ಭಜಕರನ್ನೇ ನೇಮಿಸುವುದು ದೇವಳಗಳ ಹಿತದೃಷ್ಟಿಯಿಂದ ಅತ್ಯಗತ್ಯವಾಗಿದೆ. ಹಾಗೆ ದೇವಳದ ಹಿತಚಿಂತಕರನ್ನು ನೇಮಕ ಮಾಡದೇ ಇದ್ದುದರಿಂದ ಮತ್ತು 1953ರ ವರೆಗೆ ಮಾಧ್ವರಲ್ಲೇ ಹೆಚ್ಚಿನ ಅಧಿಕಾರವು ಇದ್ದುದರಿಂದಲೇ ಈ ದೇವಳದಲ್ಲಿ ನಡೆದ ಶ್ರೀ ಸಿದ್ಧಿವಿನಾಯಕ ದೇವರ ವಿಗ್ರಹದ ಸ್ಥಾನಚ್ಯುತಿಯ ವಿಷಯವನ್ನು ಯಾರೂ ಈ ವರೆಗೆ ಹೊರಹಾಕದೆ ಇರಲು ಕಾರಣವಾಗಿದೆ. ಅದೂ ಅಲ್ಲದೆ ಶಾರೀರಿಕ ವೇದನೆಗಳನ್ನು ಸಹಿಸಿಕೊಂಡು ಅಂತರ್ಭಕ್ತಿಯಿಂದ ಮಾಡಲ್ಪಡುವ ಮೇಲೆ ಹೇಳಲ್ಪಟ್ಟ ರೀತಿಯ ಬೀದಿ ಮಡೆ ಸ್ನಾನ ಹರಕೆಗಳು ಭಕ್ತಿ ಶ್ರದ್ಧೆಗಳಿಂದ ಮಾಡಲ್ಪಡಬೇಕಾದ ಆಗಮೋಕ್ತ ಪೂಜೆಗಳ ನ್ಯೂನತೆಯಿಂದ ಈಗ ಪೂರ್ಣ ವಿರಾಮವನ್ನು ಹೊಂದಿವೆ - ಎಂದು ಹೇಳಿದರೆ ತಪ್ಪಾಗಲಾರದು.

# ಈ ಕ್ಷೇತ್ರದಲ್ಲಿ ಗಮನಿಸತಕ್ಕ ಮತ್ತು ವಿಮರ್ಶಣೀಯ ಕೆಲವು ಸ್ಥಳಗಳು

**1. ಶ್ರೀ ಸುಬ್ರಹ್ಮಣ್ಯ ದೇವರು :** ಈ ದೇವರೇ ಈ ಕ್ಷೇತ್ರದ ಪ್ರಧಾನ ದೇವರು. ಈ ದೇವರಿಗೆ ಮೊದಲು ಶ್ರೀ ಸುಬ್ರಹ್ಮಣ್ಯೇಶ್ವರನೆಂಬ ಹೆಸರಿತ್ತು. ಈ ದೇವರನ್ನು ಈಗ., ಅಂದರೆ ದೇವಸ್ಥಾನಕ್ಕೆ ಮಾಧ್ವ ಸ್ವಾಮಿಗಳ ಆಡಳಿತೆ ಬಂದ ನಂತರ, ಶ್ರೀ ಸುಬ್ರಹ್ಮಣ್ಯ ಸ್ವಾಮಿ ಎಂಬ ಹೆಸರಿನಿಂದ ಕರೆಯುವ ವಾಡಿಕೆ ಆಗಿದೆ. ಈ ಸುಬ್ರಹ್ಮಣ್ಯ ಸ್ವಾಮಿ ಎಂಬ ಹೆಸರು ಈ ಕ್ಷೇತ್ರದಲ್ಲಿರುವ ಮಾಧ್ವ ಮಠದ ಸ್ವಾಮಿಗಳಿಗೂ ಇರುವುದರಿಂದ ಅವರ ಆಡಳಿತೆ ಕಾಲದಲ್ಲಿ ಶ್ರೀ ಸುಬ್ರಹ್ಮಣ್ಯ ಸ್ವಾಮಿಗೆ ಎಂದು ದೇವಸ್ಥಾನಕ್ಕೆ ಬಂದ ವಂತಿಗೆ ವರಾಡಗಳನ್ನು ಆಗಿನ ಸ್ವಾಮಿ ಗಳು ತಮ್ಮ ಮಠಕ್ಕೆ ಬಂದದ್ದೆಂದು ಮಾಡಿಕೊಂಡು ಅವುಗಳನ್ನು ತಾನು ತೆಗೆದುಕೊಂಡು ತಮ್ಮ ಮಠವನ್ನು ಊರ್ಜಿತಕ್ಕೆ ತಂದುದೆಂದು ಇಲ್ಲಿಯ ದಾಖಲೆ ಗಳಿಂದ ತಿಳಿದು ಬರುತ್ತದೆ. ದೇವಳಕ್ಕೆ ಅವರ ಆಡಳಿತೆ ತಪ್ಪಿದ ನಂತರವೂ ಈಗಲೂ ಮಠದ ಸ್ವಾಮಿಯವರ ಹೆಸರೂ ಸುಬ್ರಹ್ಮಣ್ಯ ದೇವರ ಹೆಸರೂ ಶ್ರೀ ಸುಬ್ರಹ್ಮಣ್ಯ ಸ್ವಾಮಿ ಎಂಬ ಒಂದೇ ಹೆಸರಲ್ಲಿ ಇರುವುದರಿಂದ ಕೆಲವು ಸಲ ದೇವಸ್ಥಾನಕ್ಕೆ ಕಳುಹಿಸಲ್ಪಟ್ಟ ವಂತಿಗೆ, ಕಾಣಿಕೆಗಳು ಅವರ ಮಠಕ್ಕೆ ಹೋಗುವುದೂ ಉಂಟು. ಆದುರಿಂದ ಈ ಅವಾಂತರವನ್ನು ತಪ್ಪಿಸಲು ಈಗಿನ ಧರ್ಮದರ್ಶಿಗಳು ಶ್ರೀ ಸುಬ್ರಹ್ಮಣ್ಯನಿಗೆ ಮುಂಚಿನ ಹೆಸರಾದ ಶ್ರೀ ಸುಬ್ರಹ್ಮಣ್ಯೇಶ್ವರನೆಂಬ ಹೆಸರು ಇರಿಸಿ ಅದನ್ನು ಪ್ರಕಟಿಸಿ ಭಕ್ತಾದಿಗಳಿಗೆ ಅನುಕೂಲವಾಗುವಂತೆ ಮಾಡುವುದು ಅಗತ್ಯವಾಗಿದೆ.

ಈ ಸುಬ್ರಹ್ಮಣ್ಯ ದೇವರ ಗರ್ಭಗುಡಿಯು ದೇವಸ್ಥಾನದ ಒಳ ಅಂಗಣದ ಮಧ್ಯದಲ್ಲಿ ಪೂರ್ವದಿಕ್ಕಿಗೆ ಮುಖ ಮಾಡಿ ಇದೆ. ಈ ಗುಡಿಯ ಎದುರಿಗೆ ಮುಖ ಮಂಟಪ; ಅದರಲ್ಲಿ ಕಂಚಿನ ದೀಪಸ್ಥಂಬ; ಮಂಟಪದ ಎದುರಿಗೆ ಮಹಾದ್ವಾರ; ಈ ಪ್ರಕಾರ ಇದೆ.

ಈ ದೇವರ ಗರ್ಭಗುಡಿಯು ಗೋಮುಖ ಆಕಾರದ್ದಾಗಿ ಹೊರ ಮಂಟಪ, ನಡು ಮಂಟಪ ಮತ್ತು ಮೂಲ ಸ್ಥಾನಗಳೆಂಬ ಮೂರು ವಿಭಾಗಗಳಿಂದ ಕೂಡಿದ್ದಾಗಿದೆ. ಇಲ್ಲಿಯ ಪದ್ಧತಿ ಪ್ರಕಾರ ಈ ಗರ್ಭಗುಡಿಯ ಹೊರಮಂಟಪಕ್ಕೆ ದ್ರಾವಿಡ ಬ್ರಾಹ್ಮಣ ವರ್ಗದವರು ಯಾರೂ ಪ್ರವೇಶಿಸಬಹುದು. ನಡು ಮಂಟಪಕ್ಕೆ ಅಂದರೆ ಮೂಲ ಸ್ಥಾನಕ್ಕೆ ತಾಗಿ ಇರುವ ಭಾಗಕ್ಕೆ ಮಡಿಗೆ ಸ್ನಾನ ಮಾಡಿಸಿ 'ಒಳಗುಟ್ಟನ್ನು ಹೊರ ಹಾಕುವುದಿಲ್ಲ'ವೆಂದು ಪ್ರಮಾಣ ಮಾಡಿ ಪ್ರಸಾದ ತೆಗೆದುಕೊಂಡ ಸ್ಮಾರ್ತರಾದ ಸ್ಥಾನಿಕ ಶಿವ ಬ್ರಾಹ್ಮಣರೂ ಮತ್ತು ಮಾಧ್ವ, ವೈಷ್ಣವ, ಶಿವಳ್ಳಿ ಬ್ರಾಹ್ಮಣರೂ ಮಾತ್ರ ಪ್ರವೇಶಿಸುವ ಪದ್ಧತಿ. ಇವೆರಡು ಬ್ರಾಹ್ಮಣ ವರ್ಗದವರಲ್ಲದೆ ಇತರ ಬ್ರಾಹ್ಮಣ ವರ್ಗದ ಯಾರನ್ನೂ ಮಡಿಗೆ ಸ್ನಾನ ಮಾಡಿಸುವ ಪದ್ಧತಿ ಇಲ್ಲಿ ಇಲ್ಲ. ದೇವರ ಮೂಲಸ್ಥಾನಕ್ಕೆ ಅಲ್ಲಿಯ ಮಾಧ್ವ ಸ್ವಾಮಿಗಳಿಂದ ಮಡಿಗೆ ಸ್ನಾನ ಮಾಡಿಸಲ್ಪಟ್ಟು 'ಒಳಗುಟ್ಟನ್ನು ಹೊರ ಹಾಕುವುದಿಲ್ಲ' (Oath of Secrecy)ವೆಂದು ಪ್ರಮಾಣ ಮಾಡಿಸಲ್ಪಟ್ಟು ಪ್ರಸಾದವನ್ನು ತೆಗೆದುಕೊಂಡ ಮಾಧ್ವ, ವೈಷ್ಣವ, ಶಿವಳ್ಳಿ ಬ್ರಾಹ್ಮಣರ ಎರಡು ಕುಟುಂಬದ ತಂತ್ರಿ ಮತ್ತು ಅರ್ಚಕರು ಮಾತ್ರ ಒಳ ಪ್ರವೇಶಿಸಬಹುದು. ಇತರ ಮಾಧ್ವರಿಗೂ ಪ್ರವೇಶವಿಲ್ಲ. ಅಲ್ಲಿಯ ಮಾಧ್ವ ಸ್ವಾಮಿಗಳು ಮಾತ್ರ ಯಾವ ಒಂದು ಪ್ರಮಾಣ ಸ್ವೀಕಾರ ಇಲ್ಲದೆ ಮೂಲಸ್ಥಾನಕ್ಕೆ

ಹೋಗಬಹುದು. ಈ ಕುಹಕ ಪದ್ಧತಿಯು ಸಾಧಾರಣ ನೂರು ಅಥವಾ ನೂರೈವತ್ತು ವರ್ಷಗಳಿಂದ ಬಂದಿರಬಹುದು. ಇದಕ್ಕೆ ಕಾರಣ 1845ರಿಂದ ಈ ದೇವಳವು ಇಲ್ಲಿಯ ಮಾಧ್ವ ಸ್ವಾಮಿಗಳ ಆಡಳಿತೆಗೆ ಬಂದ ನಂತರ ಈ ದೇವಳದ ಗರ್ಭಗುಡಿಯೊಳಗೆ ಅವರಿಂದ ಮಾಡಲ್ಪಟ್ಟ ಅಪಚಾರಗಳು ಇತರರಿಗೆ ತಿಳಿಯದಂತೆ ಮಾಡಿದ ಕುಶಲ ವಿದ್ಯೆಯಾಗಿರಬೇಕು.

ಮೂಲ ಸ್ಥಾನದಲ್ಲಿ ಶೇಷ ಮತ್ತು ವಾಸುಕಿ ಇವರ ಹೆಡೆಗಳೂ ಇವುಗಳ ಮೇಲ್ಭಾಗದಲ್ಲಿ ಮಯೂರ ವಾಹನ ಶ್ರೀ ಷಣ್ಮುಖ ದೇವರ ವಿಗ್ರಹವೂ ಇದೆ. ಈ ವಿಗ್ರಹಗಳ ಎಡಭಾಗದಲ್ಲಿ ಒಂದು ವಿನಾಯಕ ದೇವರ ವಿಗ್ರಹವು ಇತರರ ಕಣ್ಣಿಗೆ ಬೀಳದಂತೆ ಇರಿಸಲ್ಪಟ್ಟಿದೆ. ಇದಕ್ಕೆ ಸರಿಯಾದ ಪೂಜೆ ನಡೆಯುವುದಿಲ್ಲ. (ಇದರ ವಿಚಾರ ಮುಂದಕ್ಕೆ ಓದಬಹುದು.)

ಮೇಲೆ ಹೇಳಿದ ವಾಸುಕಿಯ ಹೆಡೆಯ ಕೆಳಗೆ ಒಂದು ಶಿವಲಿಂಗವು ಪೂಜಿಸಲ್ಪಡುತ್ತಿತ್ತೆಂದು ತಿಳಿದು ಬರುತ್ತದೆ. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ವಿರಚಿತ ತತ್ವನಿಧಿಯ ಲಲಿತಾಗಮ ಘಟಿಲದಲ್ಲಿ ನಮ್ಮ ಭಾರತದಲ್ಲಿರುವ 108 ದಿವ್ಯ ಲಿಂಗಗಳ ಪೈಕಿ ಈ ಸುಬ್ರಹ್ಮಣ್ಯ ಕ್ಷೇತ್ರದಲ್ಲಿ 'ಸುಬ್ರಹ್ಮಣ್ಯೇ ಅಹಿಪೇಶ್ವರಃ' ಎಂದು ವರ್ಣಿಸಲ್ಪಟ್ಟ ಪ್ರಕಾರ ಅಹಿಪೇಶ್ವರಃ ಅಂದರೆ ವಾಸುಕಿ ಲಿಂಗವು ಇರಬೇಕಿತ್ತೆಂದು ವ್ಯಕ್ತವಾಗುತ್ತದೆ. ಈ ಕ್ಷೇತ್ರಕ್ಕೆ ಕುಕ್ಕೆ ಪಟ್ಟಣವೆಂಬ ಹೆಸರು ಇದ್ದುದರಿಂದ ಅದನ್ನು ಕುಕ್ಕೆ ಲಿಂಗವೆಂದೂ ಮುಂಚಿನವರು ಕರೆಯುತ್ತಿದ್ದರು. ಶ್ರೀ ಶಂಕರ ಭಗವತ್ಪಾದರು ಈ ಕ್ಷೇತ್ರಕ್ಕೆ ಆಗಮಿಸಿದ ಸಂದರ್ಭದಲ್ಲಿ ರಚಿಸಿದ ಶ್ರೀ ಸುಬ್ರಹ್ಮಣ್ಯ ಭುಜಂಗ ಪ್ರಯಾತ ಸ್ತೋತ್ರದಲ್ಲಿಯೂ,

ದ್ವಿಷಟ್ಟಂಕಜಾಕ್ಷಂ ಮಹಾಶಕ್ತಿಯುಕ್ತಂ ತ್ರಿಲೋಕ ಪ್ರಶಸ್ತಂ **ಸಕುಕ್ಕೇ** ಪುರಸ್ಥಂ ॥೭॥<br>
ವಿಚಿಂತ್ಯಂ ಶುಭಾಂಗಂ ವಿಕೃತ್ತಾಸುರಾಂಗಂ ಭವವ್ಯಾಧಿಭಂಗಂ ಭಜೇ **ಕುಕ್ಕಲಿಂಗಂ** ॥೧೫॥<br>
ಭುಜಂಗೇಶ ಭೂತೇಶ ಭೃಂಗೇಶ ತುಭ್ಯಂ ನಮಃ **ಕುಕ್ಕಲಿಂಗಾಯ** ತಸ್ಮೈ ನಮಸ್ತೇ ॥೨೦॥

ಈ ಪ್ರಕಾರ ಕುಕ್ಕೆ ಲಿಂಗನ ಹೆಸರು ಉಲ್ಲೇಖಿಸಲ್ಪಟ್ಟದ್ದರಿಂದಲೂ ಕುಕ್ಕೆ ಲಿಂಗನೆಂಬ ವಾಸುಕಿ ಲಿಂಗವು ಒಂದು ನಾಗರ ಹೆಡೆಯ ಕೆಳಗೆ ಇಲ್ಲಿ ಇದ್ದಿರಬೇಕೆಂದು ನಿಶ್ಚಯಿಸಬಹುದಾಗಿದೆ. ಆದರೆ ಗರ್ಭಗೃಹದಲ್ಲಿ ಲಿಂಗವು ಈಗ ಕಾಣುವುದಿಲ್ಲ. ಒಂದು ಲಿಂಗವು ಭಿನ್ನಬಂದು ಒಳ ಅಂಗಣದ ಸೋಮ ಸೂತ್ರದ ಬದಿಯಲ್ಲಿ ಬಿದ್ದಿರುವುದನ್ನು ನಾವು ನೋಡಬಹುದು. ಅದನ್ನು ಈಗಲೂ ಹೊರಗಿನ ಭಕ್ತಾದಿಗಳು ಬಂದರೆ ಕುಕ್ಕೆಲಿಂಗ! ಎಂದು ಹೇಳಿಕೊಂಡು ಅದನ್ನು ಸವರಿ ಹೋಗುವ ವಾಡಿಕೆ ಈಗಲೂ ಇರುವುದರಿಂದ ಅದೇ ಲಿಂಗವು ಒಂದು ಕಾಲದಲ್ಲಿ ಮೂಲ ಸ್ಥಾನದಲ್ಲಿ ಅನುಗ್ರಹ ಲಿಂಗವಾಗಿ ಮೆರೆಯುತ್ತಿದ್ದಿರ ಬೇಕು. ಇಲ್ಲಿಯ ಮಾಧ್ವ ಸ್ವಾಮಿಗಳು 1845ರ ನಂತರ ಈ ದೇವಸ್ಥಾನದ ಆಡಳಿತೆಯನ್ನು ವಹಿಸಿಕೊಂಡ ಮೇಲೆ ಅವರಿಗೆ ಅವರ ಮತ ಪ್ರಕಾರ ಲಿಂಗ ಪೂಜೆಯು ನಿಷೇಧವಾಗಿರುವುದರಿಂದ ಈ ಲಿಂಗವನ್ನು ಭಿನ್ನಗೊಳಿಸಿ ಹೊರ ಹಾಕಿರಲೂಬಹುದು ಎಂದು ತಿಳಿಯಬೇಕಾಗುತ್ತದೆ.

ಈ ಸುಬ್ರಹ್ಮಣ್ಯ ದೇವರ ಗುಡಿಯ ಮುಖ ಮಂಟಪಕ್ಕೆ ಬಸವನ ಮಂಟಪ ಎಂಬ ಹೆಸರಿತ್ತೆಂದು ಹಳೆ ದಾಖಲೆಗಳಿಂದ ತಿಳಿದು ಬರುತ್ತದೆ. ಇದರಿಂದಾಗಿ ಒಳಗಿನ ಅಹಿಪೇಶ್ವರ (ವಾಸುಕಿ) ಲಿಂಗಕ್ಕೆ ಎದುರಿನಲ್ಲಿ ಬಸವನ ವಿಗ್ರಹವು ಇದ್ದಿರಬೇಕು. ಈ ಬಸವನ ವಿಗ್ರಹವು ಕೂಡ ಭಿನ್ನ ಬಂದು ಈ ಸುಬ್ರಹ್ಮಣ್ಯನ ಗರ್ಭಗುಡಿಯ ಎಡೆನಾಳಿಯಲ್ಲಿ ಬಿದ್ದಿರುತ್ತದೆ.*

ಈ ಸುಬ್ರಹ್ಮಣ್ಯ ಗುಡಿಯ ಒಳ ಮಂಟಪದ ದ್ವಾರದ **ಸುತ್ತಲೂ ಹಿತ್ತಾಳೆ** ಯಿಂದ ಮಾಡಿಸಿದ ನರಸಿಂಹನ ಮುಖವನ್ನು ಮಡಾಯಿಸಿದ್ದು **ಕಾಣುತ್ತ**ದೆ. ಇದರಿಂದಾಗಿ ಈ ಗುಡಿಯನ್ನೇ ತಮ್ಮ ನರಸಿಂಹ ದೇವರ ಗುಡಿಯನ್ನಾಗಿ ಮಾರ್ಪಡಿಸಬೇಕೆಂಬ ದುರಾಗ್ರಹವು ಆಗ ದೇವಳದ ಆಡಳಿತೆಯನ್ನು ವಹಿಸಿಕೊಂಡ ಆಗಿನ ಮಾಧ್ವ ಸ್ವಾಮಿಗಳಿಗೆ ಇತ್ತೆಂದು ಊಹಿಸಬೇಕಾಗುತ್ತದೆ. ಆದರೆ ಲಿಂಗವನ್ನೂ ಬಸವನನ್ನೂ ಭಿನ್ನಪಡಿಸಿ ಹೊರಹಾಕಿದ ಸ್ವಾಮಿಗಳಿಗೆ ಶ್ರೀ ಸುಬ್ರಹ್ಮಣ್ಯನ ಗುಡಿಯನ್ನೆ ನರಸಿಂಹ ಗುಡಿಯನ್ನಾಗಿ ಮಾರ್ಪಡಿಸುವುದು ಅಸಾಧ್ಯವಾಗುತ್ತಿರಲಿಲ್ಲ. ಆದರೆ ಕ್ಷೇತ್ರದ ಮಹಿಮೆಯಿಂದಾಗಿ ಏನೋ ಅವರಿಗೆ ಆವಾಂತರಗಳು ಬಂದು ಅವರ ದುರಾಗ್ರಹಕ್ಕೆ ಆತಂಕವು ಬಂದಿರಬಹುದು. ಇದರಿಂದಾಗಿ ಸುಬ್ರಹ್ಮಣ್ಯ ಕ್ಷೇತ್ರವನ್ನೇ ನರಸಿಂಹ ಕ್ಷೇತ್ರವನ್ನಾಗಿ ಮಾಡುವ ಅವರ ಪ್ರಯತ್ನವು ಬಿದ್ದು ಹೋದುದರಿಂದ ಈಗ ಸುಬ್ರಹ್ಮಣ್ಯ ಕ್ಷೇತ್ರವು ಶ್ರೀ ಸುಬ್ರಹ್ಮಣ್ಯ ಕ್ಷೇತ್ರವಾಗಿಯೇ ಉಳಿಯಿತು. ಈ ವಿಷಯದಲ್ಲಿ ತಾ. 21-2-1940ರಲ್ಲಿ ಮದ್ರಾಸ್ ಹಿಂದೂ ರಿಲೀಜಿಯಸ್ ಎಂಡೋಮೆಂಟ್ ಕಮಿಶನರ್ ಶ್ರೀ ಸಿ. ಕಾಮೇಶ್ವರ ರಾವ್ ಯಂ.ಎ.ಬಿ.ಯಲ್. ರವರು ಈ ದೇವಸ್ಥಾನವನ್ನು ಸಂದರ್ಶಿಸಿ ಇಲ್ಲಿಯ ಸ್ಥಿತಿಗತಿಗಳನ್ನು ನೋಡಿ ಇನ್ಸ್‌ಪೆಕ್ಷನ್ ರಿಪೋರ್ಟಿನಲ್ಲಿ ಬರೆದ ವಿಷಯಗಳು ಗಮನಾರ್ಹವಾಗಿದೆ.

"There is a small shrine to God Narasimha where worship is offered by Madhwa priests paid by Madhwa Matt authorities. This seems to have been introduced in the time of Madhwacharya who was unable to make an impression on the predominantly shaivite character of the temple firmly established by that time. In Udupi, on the other hand, though originally a Shiva temple, the predominance has entirely gone to Shri Krishna Temple established by Madhwacharya. Indeed the name of Udupi is a name of Shiva as Chandra moulishwara".

**ತಾತ್ಪರ್ಯ** : "ದೇವಸ್ಥಾನದ ಒಳಗೆ ಸಣ್ಣ ನರಸಿಂಹ ಗುಡಿಯೊಂದು ಇದೆಯೆಂದೂ, ಅದರಲ್ಲಿ ಮಾಧ್ವ ಸ್ವಾಮಿಗಳು ಪೂಜೆ ಮಾಡುತ್ತಾರೆಂದೂ, ಇದರ ಖರ್ಚು ವಗೈರೆ ಮಾಧ್ವ ಮಠವೇ ನೋಡಿಕೊಳ್ಳುತ್ತದೆ ಎಂದೂ ಈ ಶಿವ ಸಂಬಂಧವಾದ ದೇವಾಲಯದ ಒಳಗೆ ಈ ಮಾಧ್ವ ಮಠವು ಮಧ್ವಾಚಾರ್ಯರ ನಂತರ ಬಂದಿರಬೇಕೆಂದೂ, ಇಲ್ಲಿ ಶ್ರೀ ಸುಬ್ರಹ್ಮಣ್ಯೇಶ್ವರ ನಿಗಿಂತಲೂ, ಶ್ರೀ ನರಸಿಂಹನನ್ನೇ ಪ್ರಧಾನ ದೇವತೆಯಾಗಿ ಪರಿವರ್ತಿಸಲ್ಲು ಮಾಧ್ವರು ಪ್ರಯತ್ನಿಸಿ ಸಫಲವಾಗದೆ ಒಂದು ಗುಡಿಯನ್ನು ಮಾತ್ರ ತನ್ನದನ್ನಾಗಿ ಮಾಡಿಕೊಂಡಿರ ಬೇಕೆಂದೂ ತಿಳಿಸಿರುತ್ತಾರೆ. ಅಲ್ಲದೆ ಅದರ ಬದಲು ಉಡುಪಿಯಲ್ಲಿ ಮಧ್ವಾಚಾರ್ಯರು ಅಲ್ಲಿಯ ಅನಂತೇಶ್ವರ ಚಂದ್ರಮೌಳೀಶ್ವರ ದೇವಸ್ಥಾನಗಳೆಂಬ ಶೈವಾಲಯಗಳ ಪೂರ್ಣ ಪ್ರಶಸ್ತಿಯನ್ನು ತೆಗೆದು ತನ್ನ ಕೃಷ್ಣನಿಗೇನೇ ಪ್ರಶಸ್ತಿ ಬರುವಂತೆ ಮಾಡಿದ ಪ್ರಯತ್ನವು ಸಫಲವಾಯಿತೆಂದೂ ತಿಳಿಸಿರುವರು. ಹಾಗಿದ್ದರೂ 'ಉಡುಪಿ' ಎಂಬ ಚಂದ್ರಮೌಳೀಶ್ವರನಾದ ಶಿವನ ಹೆಸರು ಹಾಗೆಯೇ

---

* The Sthaniks and their Historical impotence by Dr B A Salethoore M A PH.D. Director of National Archives Govt. of India Page 65.

ಉಳಿದಿದೆ''. ಎಂದು ಉಲ್ಲೇಖಿಸಿ ಮಾಧ್ವ ಸ್ವಾಮಿಗಳ ದೇವಾಲಯದಲ್ಲಿ ಮಾಡಿದ ಅಕ್ರಮಗಳನ್ನು ವಿವರಿಸಿರುತ್ತಾರೆ.

ಮೊದಲಿನ ಸ್ವಾಮಿಗಳ ಈ ಪ್ರಯತ್ನವು ವಿಫಲಗೊಂಡ ನಂತರ ಅವರ ನಂತರದ ಸ್ವಾಮಿಗಳು ಸಾಧಾರಣ 1880-82ರಲ್ಲಿ ಅಲ್ಲಿಯ ಸ್ಥಳೀಯ ಸ್ಮಾರ್ತ ಬ್ರಾಹ್ಮಣ ಮಣೆಗಾರರನ್ನು ಹೊರಹಾಕಿ ಶ್ರೀ ಸುಬ್ರಹ್ಮಣ್ಯ ದೇವರ ಬಲ ಭಾಗದಲ್ಲಿದ್ದ ಸುಬ್ರಹ್ಮಣ್ಯನ ಪರಿವಾರ ದೇವರಾದ ಶ್ರೀ ಸಿದ್ಧಿ ವಿನಾಯಕನ ಗುಡಿಯಿಂದ ಆ ವಿಗ್ರಹವನ್ನು ಸ್ಥಾನ ಚ್ಯುತಿಗೊಳಿಸಿ ಆ ಗುಡಿಯನ್ನು ತಮ್ಮ ನರಸಿಂಹ ಗುಡಿಯನ್ನಾಗಿ ಮಾಡಿಕೊಂಡು ವಿಚಾರವನ್ನು ಇದರೊಂದಿಗೆ ಇರುವ ಸ್ಥಾನ ಚ್ಯುತಿಗೊಳಿಸಲ್ಪಟ್ಟ ಸಿದ್ಧಿ ವಿನಾಯಕ ದೇವರ ವಿಚಾರದಲ್ಲಿ ಬರೆದ ವಿವರಣೆ ಯಲ್ಲಿ ಓದಬಹುದು.

ಶ್ರೀ ಸುಬ್ರಹ್ಮಣ್ಯ ದೇವರಿಗೆ ಸಂಬಂಧಪಟ್ಟ ಶೈವಾಗಮೋಕ್ತ ಪೂಜೆ ನಡೆಯುವುದಿಲ್ಲ. ಪೂಜೆ ಮತ್ತು ತಂತ್ರ ನಡೆಸುವವರು ವೈಷ್ಣವ ಮಾಧ್ವ ಶಿವಳ್ಳಿ ಬ್ರಾಹ್ಮಣರು. ಇವರು ಶ್ರೀ ಸುಬ್ರಹ್ಮಣ್ಯ ದೇವರ ಹತ್ತಿರ ಸಾಲಿಗ್ರಾಮಗಳನ್ನು ಇಟ್ಟು ವೈಷ್ಣವ (ವೈಖಾನಸ) ಆಗಮ ಪ್ರಕಾರ ನಾವು ಪೂಜೆ ಮಾಡುವುದೆಂದು ಹೇಳುತ್ತಾರೆ. ಪೂಜಾ ಕಾಲದಲ್ಲಿ ಮಂತ್ರೋಚ್ಚಾರಣೆ ಮಾಡುವ ಕ್ರಮ ತೀರಾ ಕಮ್ಮಿ. ಮಂತ್ರಗಳನ್ನು ಉಚ್ಚರಿಸುವುದಿಲ್ಲವೇಕೆ? ಎಂದು ಕೇಳಿದರೆ ಇಲ್ಲಿ ಮೌನ ಪೂಜಾ ಪದ್ಧತಿ ಎಂದು ಹೇಳಿ ತಪ್ಪಿಸಿಕೊಳ್ಳುತ್ತಾರೆ ಶ್ರೀ ಸುಬ್ರಹ್ಮಣ್ಯನಿಗೆ ಪ್ರಿಯವಾದ ವಿಭೂತಿ ಮತ್ತು ಬಿಲ್ವಪತ್ರೆಗಳನ್ನು ಉಪಯೋಗಿಸುವುದಿಲ್ಲ. ಭಕ್ತಾದಿಗಳಿಗೆ ತುಳಸಿ, ಗಂಧ ಪ್ರಸಾದವನ್ನೇ ಕೊಡುವುದಾಗಿದೆ. ಇಲ್ಲಿ ಮಹಾ ಪೂಜಾ ನಂತರ ಶಂಖತೀರ್ಥ ಪ್ರೋಕ್ಷಣೆ ಮಾಡುವುದು ವೈಷ್ಣವ ಪದ್ಧತಿ. ಈ ಎಲ್ಲಾ ಕೃತ್ರಿಮ ಪದ್ಧತಿ ಪೂಜೆಯು ಈ ದೇವಳದ ಆಡಳಿತೆಯು ಮಾಧ್ವ ಸ್ವಾಮಿಗಳಿಗೆ ಬಂದ ನಂತರವೇ ಬಂದದ್ದಾಗಿದೆ ಎಂದು ತಿಳಿದು ಬರುತ್ತದೆ.

**2. ಉಮಾಮಹೇಶ್ವರ ದೇವರು** : ಈ ದೇವರ ಗುಡಿಯು ದೇವಸ್ಥಾನದ ಒಳ ಅಂಗಣದಲ್ಲಿ ಶ್ರೀ ಸುಬ್ರಹ್ಮಣ್ಯ ದೇವರ ಗುಡಿಯ ಎಡ ಪಾರ್ಶ್ವದಲ್ಲಿ ಈಶಾನ್ಯ ದಿಕ್ಕಿನಲ್ಲಿದೆ. ಇಲ್ಲಿ ಶಿವ ಪಂಚಾಯತನ ಕ್ರಮದಲ್ಲಿ ಆದಿತ್ಯ, ಅಂಬಿಕಾ, ವಿಷ್ಣು, ಗಣನಾಥ ಮಹೇಶ್ವರರೆಂಬ ಐದು ದೇವತೆಗಳ ವಿಗ್ರಹಗಳಿವೆ. ಮಧ್ಯದಲ್ಲಿ ಉಮಾಮಹೇಶ್ವರ ವಿಗ್ರಹವಿದೆ. ಇವುಗಳೊಂದಿಗೆ ಒಂದು ಶಿವ ಲಿಂಗವೂ ಇದೆ. ರುದ್ರಾಭಿಷೇಕ ಹರಿಕೆಯು ಬಂದರೆ ಈ ಲಿಂಗವನ್ನು ಅದೇ ಗುಡಿಯ ಒಳಗಿನ ಆಗ್ನೇಯ ಮೂಲೆಯ ಎಡೆನಾಳಿಗೆ ತಂದು ಅಲ್ಲಿ ಇಟ್ಟು ಅಭಿಷೇಕ ಮಾಡಿ ಅದನ್ನು ಮೊದಲಿನ ಸ್ಥಾನದಲ್ಲಿ ಇರಿಸುತ್ತಾರೆ. ಇದು ಕೃತ್ರಿಮ ಪದ್ಧತಿ. ದೇವಾಲಯಗಳಲ್ಲಿ ಚಲನಗಳಲ್ಲಿರುವ ಲಿಂಗ ಪೂಜಾ ಕ್ರಮವಿರುವುದಿಲ್ಲ. ಈ ದೇವಳಕ್ಕೆ ಮಾಧ್ವರ ಪ್ರವೇಶ ಆದ ನಂತರವೇ ಇದು ಬಂದುದಾಗಿದೆ ಎಂದು ತಿಳಿಯಬೇಕು. ಈ ದೇವರಿಗೂ ಬಿಲ್ವ ಮತ್ತು ವಿಭೂತಿಗಳನ್ನು ಉಪಯೋಗಿಸುವುದಿಲ್ಲ. ಶ್ರೀ ನಟ್ಟಿಬೈಲು ವೆಂಕಪ್ಪ ರೈಗಳೆಂಬುವರು ಈ ದೇವಳದ ಟ್ರಸ್ಟಿಗಳಾದ ನಂತರ ಅವರ ಒತ್ತಾಯದಿಂದ ಈಗ ಈ ಗುಡಿಯಲ್ಲಿ ವಿಭೂತಿ ಪ್ರಸಾದ ಕೊಡಬೇಕೆಂದು ಕೇಳಿದವರಿಗೆ ಈಗ ವಿಭೂತಿ ಕೊಡುವ ಕ್ರಮ ಇಟ್ಟುಕೊಂಡಿದ್ದಾರೆ. ಈ ಗುಡಿಯಲ್ಲೂ ಮಾಧ್ವ ಶಿವಳ್ಳಿ ಬ್ರಾಹ್ಮಣರೇ ಅರ್ಚಕರು.

ಆದಿ ಶಂಕರಾಚಾರ್ಯರು ಈ ಸುಬ್ರಹ್ಮಣ್ಯ ಕ್ಷೇತ್ರಕ್ಕೆ ಚಿತ್ತೈಸಿದ ಸಮಯದಲ್ಲಿ ಆಗ ಕ್ಷೇತ್ರದಲ್ಲಿ ಇರುತ್ತಿದ್ದ, ಹಿರಣ್ಯ ಗರ್ಭವಾದಿಗಳೂ, ಮತ್ತು ಗಾಣಪತ್ಯರೆಂಬ ಬ್ರಾಹ್ಮಣ

ವರ್ಗದವರನ್ನು ವಾದದಲ್ಲಿ ಜೈಸಿ ದೇವತ ಆರಾಧನೆಯಲ್ಲಿ ಉಚ್ಚ ನೀಚ ಭಾವನೆಯನ್ನು ಇಟ್ಟುಕೊಳ್ಳಬಾರದೆಂತಲೂ ಎಲ್ಲಾ ದೇವರುಗಳು ಒಂದೇ ಪರಬ್ರಹ್ಮದ ಪ್ರಭೇದಗಳೆಂತಲೂ, ತಿಳಿಯಲೋಸುಗ ಭೇದ ಭಾವನೆಗಳಿಂದ ಕೂಡಿದ ಆ ಬ್ರಾಹ್ಮಣ ವರ್ಗದವರನ್ನು ಸರಿಪಡಿಸಲು ಪಂಚ ಪೂಜಾ ವಿಧಾನದಿಂದ 'ಏಕಮೇವ ಅದ್ವಿತೀಯ'ನಾದ ಪರಮಾತ್ಮನನ್ನು ಏಕರೂಪದಿಂದ ಅರ್ಚಿಸುವ ಕ್ರಮವನ್ನು ಏರ್ಪಡಿಸಿ ಬ್ರಾಹ್ಮಣರೊಳಗೆ ಐಕಮತ್ಯವನ್ನು ಉಂಟುಮಾಡಿ ಈ ಉಮಾಮಹೇಶ್ವರ ಗುಡಿಯಲ್ಲಿ ಆದಿತ್ಯ, ಅಂಬಿಕಾ, ವಿಷ್ಣು, ಗಣನಾಥ ಮತ್ತು ಮಹೇಶ್ವರರೆಂಬ ಐದು ವಿಗ್ರಹಗಳ ಪೂಜೆಯನ್ನು ಏರ್ಪಡಿಸಿ ಅದ್ವೈತವನ್ನು ಬೋಧಿಸಿ ಹೋಗಿರುತ್ತಾರೆಂದು ತಿಳಿದು ಬರುತ್ತದೆ. ಇವರು ಬಂದು ಹೋದ ಗುರುತಿಗಾಗಿ ಇಲ್ಲಿಯ ಸ್ಥಳೀಯ ಸ್ಮಾರ್ತ ಬ್ರಾಹ್ಮಣರು ಅವರ ಶಿಷ್ಯತ್ವವನ್ನು ಒಪ್ಪಿಕೊಂಡು ಈ ಗುಡಿಯ ಎದುರಿಗೆ ಹೊರ ಅಂಗಣದ ಮೂಡು ಈಶಾನ್ಯ ಮೂಲೆಯಲ್ಲಿ ಶ್ರೀ ಶೃಂಗೇರಿಗೆ ಸಂಬಂಧಪಟ್ಟ ಒಂದು ಶಾಖಾಮಠವನ್ನು ಕೂಡ ಕಟ್ಟಿಸಿದ್ದುದನ್ನು ನಾವು ಈಗಲೂ ಕಾಣಬಹುದು. ಶ್ರೀ ಆದಿಶಂಕರರು ಈ ಕ್ಷೇತ್ರಕ್ಕೆ ಚಿತ್ತೈಸಿದ ವಿವರಣೆಯ ಸ್ವಲ್ಪ ಅಂಶವನ್ನು ಮುಂದಕ್ಕೆ ಶ್ರೀ ಶೃಂಗೇರಿಶಾಖಾ ಮಠದ ವಿವರಣೆಯಲ್ಲಿ ಓದಬಹುದು.

## ಈಗಿನ ಸಂಪುಟ ನರಸಿಂಹ ದೇವರ ಗುಡಿ

ಈ ಗುಡಿಯು ಶ್ರೀ ಸುಬ್ರಹ್ಮಣ್ಯ ದೇವರ ಗುಡಿಯ ಬಲ ಭಾಗದಲ್ಲಿ ದೇವಳದ ಒಳ ಅಂಗಣದ ಆಗ್ನೇಯ ಮೂಲೆಯಲ್ಲಿದೆ. ಈ ಗುಡಿಯು ಕೆಲವು ವರ್ಷಗಳ ಹಿಂದೆ ಶ್ರೀ ಸುಬ್ರಹ್ಮಣ್ಯ ದೇವರ ಪರಿವಾರ ದೇವರಾದ ವಿನಾಯಕ ದೇವರ ಗುಡಿಯಾಗಿತ್ತು. ಈ ವಿನಾಯಕ ದೇವರ ಗುಡಿಯನ್ನು ಈ ಕ್ಷೇತ್ರದಲ್ಲಿ ಸುಬ್ರಹ್ಮಣ್ಯ ಮಠವೆಂದು ಕರೆಯಲ್ಪಡುವ ಮಠದ ವೈಷ್ಣವ ಮಾಧ್ವ ಸ್ವಾಮಿ ಗಳೊಬ್ಬರು 1845ರಿಂದ ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ಆಡಳಿತೆಯು ತಮಗೆ ಸಿಕ್ಕಿದ ನಂತರ ಗುಡಿಯೊಳಗಿನ ವಿನಾಯಕ ದೇವರ ವಿಗ್ರಾಹವನ್ನು ಸ್ಥಾನ ತಪ್ಪಿಸಿ ತಮ್ಮ ಸಂಪುಟ ನರಸಿಂಹ ದೇವರ ಗುಡಿಯನ್ನಾಗಿ ಮಾರ್ಪಡಿಸಿಕೊಂಡಿರುತ್ತಾರೆಂದು ತಿಳಿದು ಬರುತ್ತದೆ. ಇದರಿಂದಾಗಿ ಈ ಗುಡಿಯ ಹೆಸರು ಈ ಮೊದಲು ವಿನಾಯಕ ಗುಡಿಯೆಂಮ ಇದ್ದರೂ, ಈಗ ಅದು ಸಂಪುಟ ನರಸಿಂಹ ಗುಡಿಯಾಗಿ ಪರಿಣಮಿಸಿದೆ. ಈ ಗುಡಿಯ ತೆಂಕು ಪೌಳಿಯಲ್ಲಿದ್ದ ಶ್ರೀ ಸುಬ್ರಹ್ಮಣ್ಯೇಶ್ವರನ ಅರಿಕ್ಕುಟ್ಟಿಲನ್ನು (ದೇವರಿಗೆ ನೈವೇದ್ಯ ಬೇಯಿಸುವ ಸ್ಥಳ) ಸ್ವಾಮಿಗಳು ತಮ್ಮ ಸಂಪುಟ ನರಸಿಂಹ ದೇವರ ಅರಿಕುಟ್ಟಿಲನ್ನಾಗಿ ಮಾಡಿಕೊಂಡು ಅದರಲ್ಲಿ ಸ್ವಲ್ಪ ಅಂಶವನ್ನು ತಮ್ಮ ಪ್ರಾಣ ದೇವರ (ಹನುಮಂತ ದೇವರ) ಗುಡಿಯನ್ನಾಗಿ ಮಾರ್ಪಡಿಸಿ ದೇವಳದ ಆಗ್ನೇಯ ಮೂಲೆಯ ವಿನಾಯಕ ಗುಡಿಯನ್ನು ಮಾತ್ರವಲ್ಲದೆ ಪೌಳಿಯ ಆಗ್ನೇಯ ಮೂಲೆಯನ್ನೇ ಆಕ್ರಮಿಸಿ ತಮ್ಮದನ್ನಾಗಿ ಮಾಡಿಕೊಂಡು ಒಂದು ಮನೆಯೊಳಗೆ ಎರಡು ಬಿಡಾರಗಳಿದ್ದಂತೆ ದೇವಳಕ್ಕೆ ಹಿಂಸೆ ಕೊಡುವುದು ಪ್ರೇಕ್ಷಕರಿಗೆ ವ್ಯಕ್ತವಾಗುತ್ತದೆ.

ಈ ಗುಡಿಯಲ್ಲಿ ವಿನಾಯಕ ದೇವರ ವಿಗ್ರಹವು ಇರುವಾಗ ಈಶಾನ್ಯ ಮೂಲೆಯ

ಉಮಾಮಹೇಶ್ವರ ಗುಡಿಯಲ್ಲಿದ್ದಂತೆ ಮೂಲಸ್ಥಾನ ಮತ್ತು ಅದಕ್ಕೆ ತಾಗಿದ ಹೊರ ಮಂಟಪವೆಂಬ 2 ಭಾಗಗಳು ಮಾತ್ರ ಇತ್ತು. ಈ ಗುಡಿಯನ್ನು ಮಾಧ್ವ ಸ್ವಾಮಿಗಳು ಆಕ್ರಮಿಸಿದ ನಂತರ ಶ್ರೀ ವಿನಾಯಕ ವಿಗ್ರಹವಿದ್ದ ಭಾಗವನ್ನು ಮಧ್ಯಭಾಗವನ್ನಾಗಿ ಮಾರ್ಪಡಿಸಿ ಅದರ ಹಿಂದೆ ತಾಗಿ ಸ್ವಲ್ಪ ಅಂಶದಲ್ಲಿ ಹೊಸತೊಂದು ಕೋಣೆಯನ್ನು ಕಟ್ಟಿಸಿ ಅದರಲ್ಲಿ ಸ್ವಾಮಿಗಳು ತಮ್ಮ ಸಂಪುಟ ನರಸಿಂಹ ದೇವರು ಇವರ ಈಗಿನ ವಾಸ್ತವ್ಯ ಮಠದಲ್ಲೇ ಇದ್ದಿರಬೇಕು. ಮೊದಲಿನ ಸ್ವಾಮಿಗಳು ದೇವಸ್ಥಾನದ ಆಡಳಿತೆ ತಮ್ಮ ಸ್ವಾಧೀನವಿದ್ದಾಗ ತಾವು ಸರ್ವತಂತ್ರ ಸ್ವತಂತ್ರರಾಗಿ ನಿರಂಕುಶ ಪ್ರಭುತನದಿಂದ ತಮ್ಮ ಮಠದಲ್ಲಿದ್ದ ತಮ್ಮ ದೇವರನ್ನು ದೇವಸ್ಥಾನದ ಒಳಗಿದ್ದ ವಿನಾಯಕ ದೇವರ ಗುಡಿಯಲ್ಲಿಟ್ಟು ದೇವಸ್ಥಾನಕ್ಕೆ ಬರುತ್ತಿದ್ದ ಭಕ್ತಾದಿಗಳಿಂದ ತನ್ನ ಮಠಕ್ಕೂ ಶ್ರೀ ಸುಬ್ರಹ್ಮಣ್ಯನಿಗೆ ಸೇವೆ ಸಲ್ಲಿಸಿದಂತೆ ಸೇವೆ ಸಲ್ಲಿಸಬೇಕೆಂದು ಬಲಾತ್ಕರಿಸುತ್ತಿದ್ದರೆಂದು ತಿಳಿದು ಬರುತ್ತದೆ.

ಈ ಗುಡಿಯ ದ್ವಾರದಲ್ಲಿ ಆನೆಕಲ್ಲುಗಳು ಇವೆ. ಇದರಿಂದ ಇಗು ಶಿವ ಸಂಬಂಧವಾದ ಗುಡಿಯೆಂದು ಸ್ಪಷ್ಟವಾಗುತ್ತದೆ. ಆ ಆನೆಕಲ್ಲುಗಳ ಸೊಂಡಿಲು ಗಳ ರೂಪವನ್ನು ಮರೆಮಾಚಲು ಪ್ರಯತ್ನಪಟ್ಟಿದ್ದು ಕಾಣುತ್ತದೆ. ಈ ಗುಡಿಯು ಶ್ರೀ ಸುಬ್ರಹ್ಮಣ್ಯ ದೇವರ ಎಡಭಾಗದಲ್ಲಿರುವ ಉಮಾಮಹೇಶ್ವರ ಗುಡಿಯ ಸಾದೃಶ್ಯದಲ್ಲಿ ಇದ್ದು ಸಾಧಾರಣ ಸಮಾನಾಂತರ ದೂರದಲ್ಲಿದೆ. ಈ ಗುಡಿಗೆ ಸೇರಿಸಿದ ಕೋಣೆಗೆ ತಾಗಿ ಒಂದು ಕುರುಬಾಗಿಲು ತೆಂಕು ಭಾಗದಲ್ಲಿದೆ. ಯಾವ ದೇವಾಲಯಗಳಲ್ಲೂ ಗರ್ಭಗುಡಿಗಳಿಗೆ ತೆಂಕು ಭಾಗದಲ್ಲಿ ಬಾಗಿಲು ಇರುವ ಕ್ರಮವಿಲ್ಲ. ಅಲ್ಲದೆ ಎರಡು ದ್ವಾರಗಳಿರುವುದು ವಿಚಿತ್ರವಾಗಿದೆ. ಈ ಗುಡಿಗೆ ಹೆಚ್ಚಿನ ಕೋಣೆಯನ್ನು ಗುಡಿಯ ಹಿಂಬದಿಗೆ ಸೇರಿಸಿದ್ದನ್ನು ನೋಡುವಾಗ ಎದುರಿನ ಭಾಗದ ಕಟ್ಟೋಣಕ್ಕೂ ಹಿಂಬದಿಯ ಕಟ್ಟೋಣಕ್ಕೂ ಕಟ್ಟುವಿಕೆಯಲ್ಲಿ ಹೆಚ್ಚಿನ ತಾರತಮ್ಯಗಳು ಕಾಣುವುದರಿಂದ ಇದು ಆ ಮೇಲೆ ಸೇರಿಸಿದ್ದೆಂದು ಸ್ಪಷ್ಟವಾಗುತ್ತದೆ.

1882ನೇ ಇಸವಿ ವರೆಗೆ ದೇವಳದ ಊಳಿಗ ಪುಸ್ತಕದಲ್ಲಿ 'ವಿನಾಯಕ ದೇವರ ಅಮಾನತು' ಎಂಬ ಲೆಖ್ಖ ಇದ್ದುದರಿಂದ ಅಷ್ಟರ ವರೆಗೆ ವಿನಾಯಕ ದೇವರ ವಿಗ್ರಹವು ಅದರ ಪೂರ್ವ ಸ್ಥಳದಲ್ಲಿದ್ದಿರಬೇಕು. ಹೊಸದಾಗಿ ಹಿಂಬದಿಯಲ್ಲಿ ಸೇರಿಸಿದ ಕೋಣೆಯಲ್ಲಿ ಇವರ ಸಂಪುಟ ನರಸಿಂಹನನ್ನು ಇಟ್ಟು ತೆಂಕು ದ್ವಾರದಿಂದ ಹೊರ ಹೋಗುತ್ತಾ ಇದ್ದಿರಬೇಕು. ದೇವಳದ ಅಧಿಕಾರವು ಪೂರ್ಣ ಸ್ವಾಮಿಗಳಿಗೆ ಬಂದ ನಂತರ ಅವರ ಮತದವರೇ ಆದ ಮಾಧ್ವ ಅರ್ಚಕ ಮತ್ತು ತಂತ್ರಿಗಳನ್ನು ಒಳಕ್ಕೆ ಮಾಡಿಕೊಂಡು ವಿನಾಯಕ ವಿಗ್ರಹವನ್ನು ಆ ಗುಡಿಯಿಂದ ತಪ್ಪಿಸಿ ಶ್ರೀ ಸುಬ್ರಹ್ಮಣ್ಯೇಶ್ವರನ ಮೂಲ ಸ್ಥಾನದಲ್ಲಿ ಇರಿಸಿರ ಬೇಕೆಂದು ತಿಳಿಯಬೇಕಾಗುತ್ತದೆ.

ಈ ಗುಡಿಯ ಎದುರಿನಲ್ಲಿ ಹೊರ ಅಂಗಣಕ್ಕೆ ಬರಲು ಒಂದು ದ್ವಾರವು ಮೊತ್ತಮೊದಲು ಇರಲಿಲ್ಲ. ಈ ಮಾಧ್ವ ಮಠವು ತನ್ನ ದೇವರನ್ನು ಆ ಗುಡಿಯಲ್ಲಿ ಪ್ರತಿಷ್ಠಿಸಿದ ನಂತರ ದೇವಳದ ಒಂದು ಮೂಲೆಯನ್ನೇ ತಮ್ಮದನ್ನಾಗಿ ಮಾಡಿಕೊಳ್ಳಲು ತಮ್ಮ ಹೊರಗಿನ ವಸತಿ ಮಠಕ್ಕೆ ಹೋಗಲೂ ಅನುಕೂಲವಾಗುವಂತೆಯೂ ಬಾಗಿಲನ್ನು ತೆಗೆಸಿ ಗುಡಿಯ ಎದುರಿನ ಅಂಬಲವನ್ನು ತಮ್ಮ ನರಸಿಂಹ ಅಂಬಲ ವನ್ನಾಗಿ ಮಾಡಿಕೊಂಡದ್ದಾಗಿದೆ. ದೇವಳದ ಅರ್ಚಕ ತಂತ್ರಿಗಳು ರಾತ್ರಿ ಕಾಲದ ಭೋಜನವನ್ನು ಆ ಅಂಬಲದಲ್ಲಿ ಮಾಡುವುದು ಮತ್ತು ದೇವಳಕ್ಕೆ ಬೇಕಾದ ಎಣ್ಣೆ ವಗೈರೆ ಶೇಖರಿಸಿಡುವ ಪದ್ಧತಿಯು ಮೊದಲು ಇರುತ್ತಿತ್ತು.

# ಕುಕ್ಕೆ ಲಿಂಗ

ಶ್ರೀ ಸುಬ್ರಹ್ಮಣ್ಯ ದೇವರ ಮೂಲಸ್ಥಾನದ ಹಿಂಬದಿಯ ಎಡೆನಾಳಿಯ ಪಡುಗೋಡೆ ಮಧ್ಯದಲ್ಲಿ ಪಡುಮುಖ ಮಾಡಿ ಒಂದು ಲಿಂಗವನ್ನು ಇಟ್ಟು ಅದನ್ನು ಕುಕ್ಕೆ ಲಿಂಗನೆಂದು ಪೂಜಿಸುತ್ತಾರೆ. ಈ ಸ್ಥಳದಲ್ಲಿ ಲಿಂಗ ಇಟ್ಟು ಪೂಜಿಸುವ ಕ್ರಮವು ಇತ್ತೀಚೆಗೆ ಆರಂಭಿಸಿದ್ದೆಂದು ತಿಳಿದು ಬರುತ್ತದೆ. ಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ಕುಕ್ಕೆ ಲಿಂಗ ಎಲ್ಲಿದೆ? ಎಂದು ಯಾರಾದರೂ ಹೊರಗಿನ ಭಕ್ತಾದಿಗಳು ಬಂದು ಕೇಳಿದರೆ ಈ ಲಿಂಗವನ್ನು ತೋರಿಸಿ ಅವರಿಂದ ಕಾಣಿಕೆ ದಕ್ಷಿಣೆಗಳನ್ನು ಸ್ವೀಕರಿಸುತ್ತಾರೆ. ಮೂಲ ಸ್ಥಾನದಲ್ಲಿದ್ದ ಅನುಗ್ರಹ ಮೂರ್ತಿಯಾದ ಕುಕ್ಕೇ ಲಿಂಗವು ಇದಲ್ಲವೆಂದು ಲಿಂಗವನ್ನು ನೋಡುವಾಗಲೇ ನಿಶ್ಚಯಿಸಬಹುದು. ಇದರ ಹತ್ತಿರ ಎಡೆನಾಳಿಯಲ್ಲಿ ಭಿನ್ನಬಂದ ಬಸವನ ವಿಗ್ರಹವೂ ಬಿದ್ದಿದೆ.

ಕುಕ್ಕೆ ಲಿಂಗನ ಕಂಡೆವು, ಕುಮಾರಧಾರೆ ಮಿಂದೆವು, ಕೊಪ್ಪರಿಗನ್ನ ಉಂಡೆವು. ಶ್ರೀ ಸುಬ್ಬಪ್ಪನ ಪಾದಕ್ಕೆ ನಮೋ ನಮಃ ಎಂಬ ಜನರ ಅಂಬೋಣದಿಂದಲೂ, ಶ್ರೀ ಸುಬ್ರಹ್ಮಣ್ಯನು ತಾರಕಾಸುರ ಸಂಹಾರ ಪ್ರಾಯಶ್ಚಿತ್ತಕ್ಕಾಗಿ ಸ್ಥಾಪಿಸಿದ ಮೂರು ಲಿಂಗಗಳಲ್ಲಿ ಪ್ರಥಮ ಲಿಂಗವೇ ಕುಕ್ಕೇ ಲಿಂಗನೆಂದು ತಿಳಿಯ ಬೇಕಾಗುತ್ತದೆ. ಈ ಲಿಂಗವು, ಅಲ್ಲದೆ ಪುರಾಣೋಕ್ತ ಪ್ರಕಾರ ಗರುಡನ ಭಯದಿಂದ ವಾಸುಕಿಯ ರಕ್ಷಣೆಗಾಗಿ ಅವನ ಹೆಡೆಯಲ್ಲೂ ಲಿಂಗದಲ್ಲೂ ಶ್ರೀ ಷಣ್ಮುಖನು ತಾನೇ ವಾಸವಾಗಿರುತ್ತೇನೆಂದು ಕೊಟ್ಟ ವಾಗ್ದಾನವು ಇಲ್ಲಿ ಗ್ರಾಹ್ಯವಾಗಿದೆ. ಆದುದರಿಂದಲೇ ಈ ಕ್ಷೇತ್ರವು 'ತತ್ವನಿಧಿ' ಎಂಬ ಪುಸ್ತಕದಲ್ಲಿ ವರ್ಣಿಸಲ್ಪಟ್ಟ ಪ್ರಕಾರ 108 ದಿವ್ಯ ಶಿವಸ್ಥಳಗಳಲ್ಲಿ ಒಂದಾಗಿದ್ದು ಇಲ್ಲಿ ಅಹಿಪೇಶ್ವರ ಲಿಂಗ (ವಾಸುಕಿಯ ಲಿಂಗವು) ಇರಬೇಕಾಗಿತ್ತು. ಈಗ ಮೂಲ ಸ್ಥಾನದಲ್ಲಿ ಲಿಂಗವಿಲ್ಲ. ಮೇಲೆ ಹೇಳಿದಂತೆ ಹೊರ ಬದಿಯಲ್ಲಿ ಕುಕ್ಕೆ ಲಿಂಗನೆಂದು ಪೂಜಿಸುವುದು ವಿಚಿತ್ರವಾಗಿದೆ. ಅದು ಅಲ್ಲವೆ ಒಳ ಅಂಗಣದ ಬಡಗು ದಿಕ್ಕಿನಲ್ಲಿ ಸೋಮ ಸೂತ್ರದ ಹತ್ತಿರ ಭಿನ್ನವಾಗಿ ಬಿದ್ದ ಲಿಂಗ ಒಂದನ್ನು ಹೊರಗಿನಿಂದ ಬಂದ ಭಕ್ತಾದಿಗಳು 'ಕುಕ್ಕೇಲಿಂಗ' ಎಂದು ಸಂಬೋಧಿಸುವುದರಿಂದ ಮೂಲಸ್ಥಾನದಲ್ಲಿದ್ದ ಲಿಂಗವು ಯಾವುದೆಂದು ನಿಶ್ಚಯಿಸುವುದು ಕಷ್ಟವಾಗಿದೆ. ಆಬರೂ ಲಿಂಗಗಳ ತಾರತಮ್ಯವನ್ನು ಪರೀಕ್ಷಿಸುವಾಗ ಸೋಮಸೂತ್ರದ ಹತ್ತಿರದ ಲಿಂಗವೇ ಅನುಗ್ರಹ ಲಿಂಗವಾಗಿರಬಹುದೆಂದು ನಿರ್ಣಯಿಸ ಬಹುದಾಗಿದೆ.

ಕುಕ್ಕೇ ಲಿಂಗ ಪದಕ್ಕೆ ಅನೇಕರು ಅನೇಕ ತರದ ಅರ್ಥ ಕಲ್ಪಿಸಿ ಈ ಮೊದಲಿನ ಕ್ಷೇತ್ರ ವರ್ಣನೆಗಳಲ್ಲಿ ಬರೆದಿರುತ್ತಾರೆ. ಈ ದೇವಳವು ಲಿಂಗ ಪೂಜೆಯನ್ನು ನಿಷೇಧಿಸುವ ಮಾಧ್ವರ ಆಡಳಿತೆಗೆ ಬಂದನಂತರ ಕುಕ್ಕೆ ಲಿಂಗವೆಂದರೆ ಕುಕ್ಕೆ ಕೌಚಿಹಾಕಿ ಅಡಗಿಸಿಟ್ಟ ಲಿಂಗಗಳೆಂದು ವಿಪರೀತಾರ್ಥ ಕಲ್ಪಿಸಿರುವುದು ನಿಂದಾಸ್ಪದವಾಗಿದೆ. ಕೆಲವರು ಕುಕ್ಕೆ ಲಿಂಗವೆಂದರೆ ಗುಹೆದ್ವಾರದಲ್ಲಿ ಪ್ರತಿಷ್ಠಿಸಿರುವ ಲಿಂಗವೆಂದೂ ಹೇಳಿರುವುದು ಇಲ್ಲಿ ಅಷ್ಟು ಸಮಂಜಸವಾಗಿ ಕಂಡುಬರುವುದಿಲ್ಲ. ನನ್ನ ಅಭಿಪ್ರಾಯ ಪ್ರಕಾರವೂ ಇಲ್ಲಿಯ ಸನ್ನಿವೇಶಗಳಿಂದಲೂ ಶಬ್ದ ಮಣಿದರ್ಪಣ, ಕಿಟೆಲ್ ಡಿಕ್ಷನೆರಿಯಲ್ಲೂ 'ಕುಕ್ಕೆ' ಪದಕ್ಕೆ 'ಕುಕ್ಷಿ' ಎಂಬ ಸಂಸ್ಕೃತ ಶಬ್ದದ ತದ್ಭವವೆಂದೂ ಹೇಳಿದ ಪ್ರಕಾರವೂ,



ಭಿನ್ನಗೊಂಡ ಶ್ರೀ ಕುಕ್ಕೆ ಲಿಂಗ



ಮರೆಯಾದ ಶ್ರೀ ಸಿದ್ಧಿ ವಿನಾಯಕ ದೇವರ ಗುಡಿ

'ಕುಕ್ಷೆ' ಎಂಬ ಪದಕ್ಕೆ ಹೊಟ್ಟೆ (Cavity) ಎಂದು ಅರ್ಥವಾಗುತ್ತದೆ. 'ಕುಕ್ಕೆ ಪಟ್ಟಣ'ವೆಂಬ ಮುಂಚಿನ ಹೆಸರಿಗೆ ಹೊಟ್ಟೆ ತುಂಬಿಸುವ ಪಟ್ಟಣವೆಂದೂ, ಕುಕ್ಕೆ ಲಿಂಗವೆಂದರೆ ಜನರ ಹೊಟ್ಟೆ ತುಂಬಿಸುವ ದೇವರೆಂದೂ ತಿಳಿಯಬಹುದಾಗಿದೆ. ಈ ಮೇಲೆ ಹೇಳಿದ ಜನರ ಅಂಬೋಣದಂತೆ 'ಕೊಪ್ಪರಿಗನ್ನ ಉಂಡೆವು' 'ಅನ್ನದಾತ ಸುಬ್ಬಪ್ಪ' ಎಂಬ ಪದಗಳಿಗೂ ಅನ್ವರ್ಥ ಸರಿಬೀಳುತ್ತದೆ. ಇದರಿಂದಲೇ ಇಲ್ಲಿ ಅನ್ನದಾನವೂ, ಮಡೆ, ಮಡೆಸ್ನಾನವೂ ಹೆಚ್ಚು ಪ್ರಶಸ್ತಿ ಆಗಿದೆ. ಅದೂ ಅಲ್ಲದೆ ಇನ್ನೊಂದು ದೃಷ್ಟಾಂತವಾಗಿ ಇಲ್ಲಿಯ ಶಾಲಿವಾಹನ ಶಕ 1587ರ ತಾಂಬ್ರ ಶಾಸನ ಒಂದರಲ್ಲಿ 'ಅನೇಕ ವರಪ್ರದ **ನಿತ್ಯಾನ್ನದಾನ ವಿನೋದಿ ಕುಕ್ಕೆಲಿಂಗ ಬಿರುದಾಂತ ಸುಬ್ರಹ್ಮಣ್ಯೇಶ್ವರನಿಗೆ'** ಎಂದು ಉಲ್ಲೇಖಿಸಿ ಇರುವುದರಿಂದಲೂ, ಇಲ್ಲಿಯ ದೇವರಿಗೆ 'ಅನ್ನದಾತ ಸುಬ್ಬಪ್ಪ' ಎಂಬ ಬಿರುದು ಇರುವುದು ಕೂಡಾ ನೋಡುವಾಗ ಇಲ್ಲಿ ಅನಾದಿ ಕಾಲದಿಂದಲೂ ಅನ್ನದಾನವು ಬಹಳ ವಿಶೇಷವಾಗಿತ್ತು ಎಂದು ತಿಳಿಯಬೇಕಾಗುತ್ತದೆ.

ಶ್ರೀ ಶಂಕರಭಗವತ್ಪಾದರು ರಚಿಸಿದ ಶ್ರೀ ಸುಬ್ರಹ್ಮಣ್ಯ ಭುಜಂಗ ಪ್ರಯಾತ ಸ್ತೋತ್ರದಲ್ಲಿ 'ಲಪನ್ದೇವ ಸೇನೇಶ ಭೂತೇಶ ಶೇಷಸ್ವರೂಪಾಗ್ನಿಭೂ ಕಾರ್ತಿಕೇಯಾನ್ನದಾತಃ' ಎಂಬಲ್ಲಿ ಅನ್ನದಾತನೆಂತಲೂ 15ನೇ ಶ್ಲೋಕದಲ್ಲಿ 'ಭಜೆ ಕುಕ್ಕೆ ಲಿಂಗಂ' ೩೦ನೇ ಶ್ಲೋಕದಲ್ಲಿ 'ನಮಃ ಕುಕ್ಕೆ ಲಿಂಗಾಯ ತಸ್ಮೈ ನಮಸ್ತೆ' ಎಂದು ಉಲ್ಲೇಖಿಸಿದುದನ್ನು ಕಾಣುವಾಗ ಆದಿಶಂಕರಾಚಾರ್ಯರ ಕಾಲದ ಹಿಂದೆಯೇ ಈ ಕ್ಷೇತ್ರವು ಅನ್ನದಾನಕ್ಕೆ ಪ್ರಸಿದ್ಧ ಪಟ್ಟ ಸ್ಥಳವಾಗಿತ್ತೆಂದು ವ್ಯಕ್ತವಾಗುತ್ತದೆ.

ಅದೂ ಅಲ್ಲದೆ ಈ ಕ್ಷೇತ್ರವು ಅನ್ನದಾನಕ್ಕೆ ಪ್ರಸಿದ್ಧ ಪಟ್ಟ ಸ್ಥಳವೆಂದು ವಿಷದೀಕರಿಸಲು ಇಲ್ಲಿ ಅಕ್ಷಯ ಪಾತ್ರವೆಂಬ ಒಂದು ಚಿನ್ನದ ಹಿಡಿಯುಳ್ಳ ಒಂದು ಸಟ್ಟುಗ ಇದೆ. ಇದನ್ನು ನಿತ್ಯದಲ್ಲೂ ಮಹಾ ಸಂತರ್ಪಣೆ ಕಾಲದಲ್ಲೂ ದೇವಳದ ಮಣೆಗಾರನು ವಿಧಿಯುಕ್ತವಾಗಿ ಪೂಜಿಸಿ ಅದಕ್ಕೆ 10 ಹಾನೆ ಅಕ್ಕಿ (ಹಾನೆ ಅಂದರೆ 1 ಸೇರಿಗೆ ಸ್ವಲ್ಪ ಕಮ್ಮಿ) ನೈವೇದ್ಯ ಮಾಡುವ ಪದ್ಧತಿ ಇತ್ತು. ಸಾಧಾರಣ 1882ರ ವರೆಗೆ ಇಲ್ಲಿಯ ಮಣೆಗಾರರು ಸ್ಥಳೀಯ ಸ್ಮಾರ್ತ ಬ್ರಾಹ್ಮಣರಾಗಿದ್ದರು. ಆ ಹತ್ತು ಹಾನೆ ಅಕ್ಕಿಯ ನೈವೇದ್ಯವು ದೇವಸ್ಥಾನದ ಮೂಲ ಪುರುಷರಾದ ಅಲ್ಲಿಯ ಸ್ಮಾರ್ತ ಸ್ಥಾನಿಕ ಬ್ರಾಹ್ಮಣರಿಗೆ ಸಲ್ಲುತ್ತಿತ್ತು. 1882ರಲ್ಲಿ ದೇವಸ್ಥಾನದ ಆಡಳಿತೆ ವ್ಯಾಸತೀರ್ಥ ಸ್ವಾಮಿಯರಿಗೆ ಬಂದನಂತರ ಸ್ಥಳೀಯ ಸ್ಮಾರ್ತ ಬ್ರಾಹ್ಮಣರಿಗೆ ಇದ್ದ ಮಣೆಗಾರ (ಮೆನೇಜರ್) ತನವು ನಿಂತುಹೋಯಿತು. ಮೇಲೆ ಹೇಳಿದ 10 ಹಾನೆ ಅಕ್ಕಿ ನೈವೇದ್ಯವಲ್ಲದೆ ಮತ್ತು 30 ಹಾನೆ ಅಕ್ಕಿ ನೈವೇದ್ಯವು ದೇವರಿಗೆ ಆಗುತ್ತಿತ್ತು. ಅದರಿಂದ ಹೊರಗಿಂದ ಬಂದವರಿಗೂ ಊರಿನವರಿಗೂ ಸಂತರ್ಪಣೆ ಆಗುತ್ತಿತ್ತು. ಅಂತೂ ಆ ಸಮಯದಲ್ಲಿ ನಿತ್ಯ 40 ಹಾನೆ ಅಕ್ಕಿಯ ನೈವೇದ್ಯದ ಸಂತರ್ಪಣೆ ನಡೆಯುತ್ತಿತ್ತೆಂದು ತಿಳಿದು ಬರುತ್ತದೆ.

ಮಹಾ ಸಂತರ್ಪಣೆ ವೇಳೆ ಅನ್ನವನ್ನು ಪಲ್ಲವಾಗಿ ರಾಶಿ ಹಾಕಿ ಭಕ್ಷ್ಯ ಭೋಜ್ಯಗಳಿಂದ ಅಲಂಕರಿಸಿ ದೇವಳದ ಊರ ಮೊಕ್ತೇಸರ ಸ್ಮಾರ್ತ ಬ್ರಾಹ್ಮಣ ಹೆಬ್ಬಾರನು ಇತರ ಊರ ಮಹಾಜನರನ್ನು ಸೇರಿಸಿಕೊಂಡು ಅನ್ನವು ತೆಗೆದಂತೆ ಅಕ್ಷಯವಾಗಲೆಂದು ಪ್ರಾರ್ಥನೆ ಮಾಡಿ ಮೇಲೆ ಹೇಳಿದ ಅಕ್ಷಯ ಪಾತ್ರವೆಂಬ ಚಿನ್ನದ ಹಿಡಿಯುಳ್ಳ ಸಟ್ಟುಗವನ್ನು ಅನ್ನದ ಪಲ್ಲದ ಮೇಲೆ ಕುತ್ತಬೇಕು. ಹಾಗೆ ಪ್ರಾರ್ಥನೆ ಮಾಡಿ ಪಲ್ಲಪೂಜೆ ಮಾಡಿದ ನಂತರ ಆ ಅನ್ನದ ಪಲ್ಲದಿಂದ ತೆಗೆದಷ್ಟು ಅನ್ನವು ಕಮ್ಮಿಯಾಗದೆ ಅಕ್ಷಯವಾಗುತ್ತಿತ್ತೆಂಬ ನಂಬಿಕೆ ರೂಢಿಯಲ್ಲಿತ್ತು. ಈ ಪದ್ಧತಿಯು

ಈಗಲೂ ನಡೆದು ಬರುತ್ತಿದೆ. ಆದರೆ ಈ ದೇವಳವು ಮಾಧ್ವ ವೈಷ್ಣವರ ಆಡಳಿತೆಗೆ ಬಂದನಂತ ಸ್ಥಾನಿಕ ಹೆಬ್ಬಾರರ ಬದಲಿಗೆ ಹೆಬ್ಬಾರ ಉದ್ಯೋಗವೆಂದು ಮಾಡಿಕೊಂಡು ಆ ಮಾಧ್ವರೇ ಮೇಲಿ ಕರ್ತವ್ಯಗಳನ್ನು ಮಾಡಿಕೊಂಡು ಬರುತ್ತಾರೆ.

ಮೇಲಿನ ಈ ವಿಷಯಗಳಲ್ಲದೆ ಇಲ್ಲಿಯ ಅನ್ನದಾನದ ವೈಶಿಷ್ಟ್ಯವನ್ನು ಕಂಡು 1802ರಲ್ಲಿ ಮೈಸೂರು ಮಹಾರಾಜರು 'ಬಾರಾಹಜಾರ್ ಸಂತರ್ಪಣೆ' ಎಂಬ ಹೆಸರಿನಿಂದ 12,000 ಜನರಿಗೆ ಚಂಪಾಷಷ್ಠಿ ಮಹೋತ್ಸವ ಕಾಲದಲ್ಲಿ ದೇವರ ಸನ್ನಿಧಿಯಲ್ಲಿ ಸಂತರ್ಪಣೆಯನ್ನು ನಡೆಸಲು ಪ್ರತಿ ವರ್ಷವೂ ಹಾಸನ ಜಿಲ್ಲೆಯ ಮಂಜಿರಾಬಾದು ತಾಲೂಕಿನಿಂದ ಮಹಾರಾಜರ ಕಡೆಯಿಂದ ಪಾರು ಪತ್ಯಗಾರರು ಸಂತರ್ಪಣೆಗೆ ಬೇಕಾದ ಅಕ್ಕಿ ವಗೈರೆ ಎಲ್ಲಾ ಸಾಮಾನುಗಳನ್ನು ಸಾಗಿಸಿಕೊಂಡು ಈ ಕ್ಷೇತ್ರಕ್ಕೆ ಬಂದು ಉತ್ಸವ ಮುಗಿಯುವ ವರೆಗೆ ಇದ್ದು ಕ್ರಮ ಪ್ರಕಾರ ಸಂತರ್ಪಣೆಯನ್ನು ಜರಗಿಸಿ ಹೋಗುತ್ತಿದ್ದರು. 'ಕಾಲಾಯ ತಸ್ಮೈ ನಮಃ' ಎಂಬಂತೆ ಇದೇ ಕಳೆದ 1958ರ ವರೆಗೆ ಸಾಂಗವಾಗಿ ನಡೆಯುತ್ತಿದ್ದ ಮತ್ತು ಈ ಸಂತರ್ಪಣೆಗೆ ಬರುತ್ತಿದ್ದ ಹಣ, ಸಾಮಾನುಗಳನ್ನು ತಮ್ಮ ಈಗಿನ ಕಾಂಗ್ರೆಸು ಸರಕಾರವು ನಿಲ್ಲಿಸಿ ಬಿಟ್ಟಿತು. ಒಂದು ಕಾಲದಲ್ಲಿ ಅನ್ನದಾನುವ ನಡೆಯಬೇಕೆಂಬ ಇಚ್ಛೆಯಿಂದ ದಾನಮಾಡಿದ ಮಹಾರಾಜರ ಇಚ್ಛೆಯನ್ನು ನಿಲ್ಲಿಸಿ ಬಿಟ್ಟದ್ದು ದಾತೃವಿನ ಉದ್ದೇಶವನ್ನೇ ನಾಶ ಪಡಿಸಿದಂತಾಗಿ ಮುಂಚಿನ ಮಹಾರಾಜರ ಮನೆತನಕ್ಕೆ ಒಂದು ಕುಂದನ್ನು ತಂದದ್ದು ಮಾತ್ರವಲ್ಲದೆ ಈಗಿನ ಮೈಸೂರು ಸರಕಾರದ ಮುಖಂಡರ ಸಂಕುಚಿತ ಭಾವನೆಯನ್ನು ಜನತೆಗೆ ತೋರಿಸಿ ಕೊಟ್ಟು ಈಗಿನ ಸರಕಾರವು ತನ್ನ ದೈವಿಕ ಬೆಂಬಲವನ್ನು ಕಳಕೊಂಡಿತು ಎಂದು ಹೇಳಿದರೆ ತಪ್ಪಾಗಲಾರದು. ಮನುಷ್ಯನನ್ನು ತೃಪ್ತಿಪಡಿಸಲು ಅನ್ನದಾನದಿಂದ ಮೇಲ್ಪಟ್ಟ ದಾನಗಳಿಲ್ಲ. ಶತಮಾನಗಳಿಂದ ನಡೆದು ಬಂದ ಸಂತರ್ಪಣೆ ನಿಲ್ಲಿಸಿ ದಾನ ಮಾಡಿದವರ ತತ್ವಕ್ಕೆ ವಿರೋಧಿಸಿ ವರ್ತಿಸುವುದು ಹುಚ್ಚುತನ. ಆ ಮೈಸೂರಿನ ಹಣ ಬಾರದಿದ್ದರೂ ಶ್ರೀ ಸುಬ್ರಹ್ಮಣ್ಯನ ಮಹಿಮೆಯಿಂದ ಮತಭೇದವಿಲ್ಲದೆ ಸಂತರ್ಪಣೆಯು ಮುಂಚಿನಿಂದಲೂ ಈಗ ಇಮ್ಮಡಿಯಾಗಿ ಈಗಿನ ಆಡಳಿತದಾರರಿಂದ ನಡೆಸಲ್ಪಡುವುದು ಸ್ತೋತ್ರಾರ್ಹವಾಗಿದೆ.

ಈ ಎಲ್ಲಾ ಮೇಲಿನ ಕಾರಣಗಳಿಂದ ಕುಕ್ಕೇ ಲಿಂಗನೆಂದರೆ ಹೊಟ್ಟೆ ತುಂಬಿಸುವ ದೇವರು ಎಂಬ ಅರ್ಥವು ಸಮಂಜಸವಾಗಿಯೂ ಅನ್ವರ್ಥ ವಾಗಿಯೂ ಇದೆ.

## ಶ್ರೀ ಶೃಂಗೇರಿ ಶಾಖಾ ಮಠ

ಈ ಶಾಖಾ ಮಠವು ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ಹೊರ ಅಂಗಣದ ಈಶಾನ್ಯ ಮೂಡುದಿಕ್ಕಿನಲ್ಲಿದೆ. ಈ ಮಠವನ್ನು ಈ ಕ್ಷೇತ್ರದಲ್ಲಿ ಶೃಂಗೇರಿ ಮಠವೆಂದೇ ಕರೆಯುತ್ತಾರೆ. ಇದು ಇರುವ ಸ್ಥಳದ ಸರ್ವೆ ನಂಬ್ರ 82-10 ಆಗಿದೆ. ಇದು ಅನಾದಿಯಿಂದ ಶೃಂಗೇರಿ ಮಠಕ್ಕೆ ಸೇರಿದ್ದಾಗಿದೆ. ಈ ಮಠಕ್ಕೆ ಸುತ್ತು ಪೌಳಿಗಳಿದ್ದು ಮಧ್ಯದಲ್ಲಿ ಶ್ರೀ ಚಂದ್ರಮೌಳೇಶ್ವರ ದೇವರ ಗುಡಿ ಪಡು ಮುಖ ಮಾಡಿ ಇದೆ. ಈಗ ಮಠದ ವಿನಿಯೋಗಾದಿಗಳು ಶ್ರೀ ಸುಬ್ರಹ್ಮಣ್ಯ ದೇವರ



ಆದಿಶಂಕರ ಉಪದೇಶ ಪ್ರಕಾರ
ಪಂಚಪೂಜಾ ಕ್ರಮದಲ್ಲಿರುವ
ಪಂಚಾಯತನ ಉಮಾಮಹೇಶ್ವರ
ದೇವರ ಗುಡಿ.



ಶ್ರೀ ಕ್ಷೇತ್ರದ ಶೃಂಗೇರಿ ಮಠ

ಆಡಳಿತೆಯವರಿಂದಲೇ ನಡೆದು ಬರುತ್ತದೆ. ಇದರಿಂದ ಈ ಮಠಕ್ಕೂ, ಶ್ರೀ ಸುಬ್ರಹ್ಮಣ್ಯ ದೇವಸ್ಥಾನಕ್ಕೂ ಬಹಳ ಅನಾದಿಯಿಂದಲೇ ಸಂಪರ್ಕವಿತ್ತೆಂದು ನಿಶ್ಚಯಿಸಬಹುದಾಗಿದೆ. ಈ ಶಾಖಾ ಮಠದ ವಿಚಾರದಲ್ಲಿ ಬರೆಯುವಾಗ ಶ್ರೀ ಆದಿಶಂಕರರು ಮತ್ತು ಅವರ ಶೃಂಗೇರಿ ಮಠದ ಸ್ವಲ್ಪ ವಿವರಣೆಯು ಇಲ್ಲಿ ಪ್ರಸ್ತಾಪಿಸಲ್ಪಟ್ಟಿದೆ.

ಒಂದು ಕಾಲದಲ್ಲಿ ಈ ಭರತ ಖಂಡದಲ್ಲಿ ಹಿಂದುಗಳೊಳಗೆ ಶೈವರು, ವೈಷ್ಣವರು, ಶಾಕ್ತೇಯರು ದಿವಾಕರವಾದಿಗಳು ಮತ್ತು ಗಾಣಪತ್ಯರು ಎಂಬೀತ್ಯಾದಿ ಅನೇಕ ಭೇದಗಳು ಏರ್ಪಟ್ಟು ಪರಸ್ಪರ ಜಗಳಗಳು ಉದ್ಭವಿಸಿದ್ದುವು. ಇದರಿಂದಾಗಿ ಹೆಚ್ಚಿನ ಜನರು ಹಿಂದೂ ಧರ್ಮವನ್ನು ಬಿಟ್ಟು ಜೈನ ಮತ್ತು ಬೌದ್ಧ ಮತಕ್ಕೆ ಸೇರಿದುದರಿಂದ ಈ ದೇಶದಲ್ಲಿ ವೇದಧರ್ಮವಾದ ಹಿಂದೂ ಸನಾತನ ಧರ್ಮವೇ ನಶಿಸುತ್ತಿರುವ ಸಂದಿಗ್ಧ ಸಮಯದಲ್ಲಿ ಧರ್ಮ ರಕ್ಷಣೆಗಾಗಿ ಪರಮ ಶಿವನು ಕೇರಳದಲ್ಲಿ ನಂಬೂದರಿ ಬ್ರಾಹ್ಮಣರಾದ ಶಿವಗುರುವಿಗೆ ಆರ್ಯಾಂಬೆ ಎಂಬ ಧರ್ಮಪತ್ನಿಯ ಗರ್ಭದಲ್ಲಿ ಶಂಕರನೆಂಬ ಹೆಸರಿನಿಂದ ಅವತರಿಸಿದನು. ಶಂಕರನು ಬಾಲ್ಯದಲ್ಲೆ ಸನ್ಯಾಸದೀಕ್ಷೆ ವಹಿಸಿ ತನ್ನ ಎಳೆಪ್ರಾಯದಲ್ಲೇ ಶಟ್ಶಾಸ್ತ್ರ ಪಾರಂಗತನಾಗಿ ಶ್ರೀ ಶಂಕರಾಚಾರ್ಯರೆಂಬ ಹೆಸರಿನಿಂದ ದೇಶದಲ್ಲಿ ತುಂಬದ ಕುಮತಗಳನ್ನು ತನ್ನ ಅಮೋಘ ಪಾಂಡಿತ್ಯದಿಂದ ಖಂಡಿಸಿದರು. ಅವರು ತನ್ನ ಅಗಾಧ ತತ್ವಜ್ಞಾನದಿಂದ ಜನತೆಗೆ ಕರ್ಮಯೋಗ, ಭಕ್ತಿಯೋಗಗಳು, ಜ್ಞಾನ ಯೋಗದ ಸೋಪಾನಗಳೆಂದೂ 'ನಹಿ ಜ್ಞಾನೇನ ಸದೃಶಂ ಪವಿತ್ರ ಮಿಹವಿದ್ಯತೆ ।' ಎಂಬ ಗೀತೋಕ್ತಿಯಂತೆ ಅವ್ಯಕ್ತನಾದ ಪರಮಾತ್ಮನನ್ನು ತಿಳಿಯಲು ಜ್ಞಾನವೇ ಸಾಧನವೆಂದೂ ಅಂತಹ ಪರಮಾತ್ಮನು 'ಏಕವೇಮ ಅದ್ವಿತೀಯಂ' ಎರಡಾಗಿರದೆ ಒಬ್ಬನೇ ಆಗಿದ್ದಾನೆಂದೂ, ಶಿವ, ವಿಷ್ಣು, ದುರ್ಗಾ, ಗಣಪತಿ, ಆದಿತ್ಯ ಇತ್ಯಾದಿ ದೇವತೆಗಳು ಆ ಪರಮಾತ್ಮನ ಅಂಶಗಳೆಂದೂ, ಆ ಅದ್ವಿತೀಯ ಬ್ರಹ್ಮನ ಪೂಜೆಯನ್ನು ಪಂಚಪೂಜಾ ಕ್ರಮಗಳಿಂದ ಶ್ರುತಪಡಿಸಿ ಜನರಲ್ಲಿ ತೋರಿ ಬಂದ ಉಚ್ಚ ನೀಚ ಭಾವನೆಯನ್ನು ತೊಲಗಿಸಿ, ಶಿವ, ವಿಷ್ಣು, ಗಣಪತಿ-ದುರ್ಗಾ ಇತ್ಯಾದಿ ದೇವತೆಗಳಲ್ಲಿ ಅಭೇದ ಭಾವನೆಯನ್ನು ಇಟ್ಟುಕೊಳ್ಳುವಂತೆಯೂ, ಜನರು ಹಿಂಸಾ ವೃತ್ತಿಯನ್ನು ಬಿಡುವಂತೆಯೂ, ತನ್ನ ಬೋಧನೆಯಿಂದ ತೋರಿಸಿಕೊಟ್ಟು ಜನರೊಳಗೆ ಐಕಮತ್ಯವನ್ನು ಉಂಟು ಮಾಡಿದ್ದರು. ಆ ಸಂದರ್ಭದಲ್ಲಿ ಅವರ ಅವತಾರವಾಗದೇ ಇರುತ್ತಿದ್ದರೆ ನಾವೆಲ್ಲರೂ ಜೈನರಾಗಿಯೋ ಬೌದ್ಧರಾಗಿಯೋ ಅಥವ ಆಮೇಲೆ ನಮ್ಮ ದೇಶಕ್ಕೆ ಬಂದ ಮುಸಲ್ಮಾನ್ ವಾ, ಕ್ರೈಸ್ತರಾಗಿಯೋ ಇರಬೇಕಿತ್ತು. ನಮ್ಮ ಸನಾತನ ಧರ್ಮದ ಸನಾತನೆಯು ಅವರು ಉಪದೇಶಿಸಿದ ಅಭೇದವನ್ನು ಸಾರುವ ಅದ್ವೈತ ತತ್ವದಿಂದಲೇ ಉಳಿಯಿತು.

ಆದಿಶಂಕರರು ಸುಬ್ರಹ್ಮಣ್ಯ ಕ್ಷೇತ್ರವನ್ನು ಸಂದರ್ಶಿಸಿ ಅಲ್ಲಿಯ ಸ್ಥಳೀಯ ಮತ್ತು ಹೊರಗಿನಿಂದ ಬಂದ ಹಿರಣ್ಯಗರ್ಭವಾದಿ, ದಿವಾಕರವಾದಿ ಮೊದಲಾದ ಬ್ರಾಹ್ಮಣರನ್ನು ವಾದದಲ್ಲಿ ಗೆದ್ದು ಅವರನ್ನೆಲ್ಲಾ ತನ್ನ ಶಿಷ್ಯರನ್ನಾಗಿ ಮಾಡಿಕೊಂಡರೆಂದೂ ಶ್ರೀ ವಿದ್ಯಾರಣ್ಯ ವಿರಚಿತ ಶ್ರೀ ಶಂಕರ ವಿಜಯದ ಧನಪತಿ ಸೂರಿ ವಿರಚಿತ 'ಡಿಂಡಿಮಾಖ್ಯ' ಟೀಕೆಯ ಪುಟ ಸಂಖ್ಯೆ 544ರಲ್ಲಿ ವ್ಯಕ್ತವಾಗುತ್ತದೆ. ಅಲ್ಲದೆ ಆನಂದಗಿರಿ ವಿರಚಿತ ಶ್ರೀ ಶಂಕರ ವಿಜಯದಲ್ಲೂ ಅದೇ ವಿವರಣೆಯನ್ನು ವ್ಯಕ್ತಪಡಿಸಿರುತ್ತಾರೆ. ಮಾಧವೀಯ ಶಂಕರ ವಿಜಯದ ಸ್ವಲ್ಪ ಅಂಶವನ್ನು ಇಲ್ಲಿ ಪ್ರಕಟಿಸಲ್ಪಟ್ಟಿದೆ.

"ಸ್ನಾತ್ವಾ ಕುಮಾರಧಾರಾಯಾಂ ನದ್ಯಾಂ ಶಿಷ್ಯ ಸಮನ್ವಿತಃ ।
ಭಕ್ತ್ಯಾ ಸಂಪೂಜಯಾಮಾಸ ಷಣ್ಮುಖಂ ಶೇಷರೂಪಿಣಂ ॥
ಕಾಷಾಯ ವಸ್ತ್ರ ದಂಡಾಢ್ಯಃ ಕಮಂಡಲು ಲಸತ್ಕರಃ ।
ಭೂತಿ ಭೂಷಿತ ಸರ್ವಾಂಗೋ ಬಭೌರುದ್ರ ಇವಸ್ವಯಂ ॥
ನಾನಾ ದೇಶಸ್ಥ ವಿಪ್ರೌಘಾಃ ಸುಬ್ರಹ್ಮಣ್ಯಂ ಸಮಾಗತಾಃ ॥
ದೃಷ್ಟ್ವಾತಂ ಶಂಕರಾಚಾರ್ಯಂ ಇದಮೂಚುಃ ಸುವಿಸ್ಮಿತಾಃ ॥"

ದ್ವಿಜಾಃ ವಯಂ ಬ್ರಹ್ಮಕುಲೋದ್ಭವಾಃ ಪ್ರಭೋ ಮನುಪ್ರಭೃತ್ಯುಕ್ತ ಸುಕರ್ಮ ತತ್ಪರಾಃ ಹಿರಣ್ಯ ಗರ್ಭ ಅರ್ಚನ ಲಬ್ಧ ಮಾನಸ ಪ್ರಶುದ್ಧಯಃ ಸ್ಥೈರ್ಯ ಮುಪಾಗತಾಸ್ತಥಾಹಿ ॥೨೩॥ "ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃಪತಿರೇಕ ಆಸೀತ್ । ಸದಾಧಾರ ಪ್ರಥಿವೀಂ ದ್ಯಾಮುತೇಮಾಂ ಕಸ್ಮೈ ದೇವಾಯ ಹವಿಷಾವಿಧೇಮ" ॥೨೪॥ ಇತ್ಯಾದಿ ಮಂತ್ರಾತ್ಸಕಲಸ್ಯ ಕರ್ತಾ ಬ್ರಹ್ಮಾ ತಥಾಪಾಲಕಃ ಏಷ ಏವ ॥ ಲಯಸ್ಯ ಕರ್ತಾ ನಿಖಿಲೋತ್ತಮಶ್ಚ ಸರ್ವಾಧಿಕಾನಂದಕ ರೂಪ ಉಕ್ತಃ ॥೨೫॥ ಸಏವಸೃಷ್ಟ್ವಾ ನಿಖಿಲಂ ಜಗತ್ಪ್ರಭು ಪ್ರವಿಶ್ಯ ಸರ್ವಾತ್ಮತಯಾ ಸ್ಥಿತೋವೈ ॥ ತದೈಕ್ಷತೇತ್ಯಾದಿವಚೋಭರೀರಿತಃ ಕರೋತಿ ಏಷ್ಟುಂಚ ಶಿವಂ ಭುಜಾಭ್ಯಾಂ ॥೨೬॥ ತದೀಯ ಭಕ್ತಾಃ ಕಿಲಯೋ ಗನಿಷ್ಠಾಃ ಕರ್ಮಸ್ಥಿತಾಃ ಕೂರ್ಚಕಮಂಡಲು ಶ್ರಿತಾಃ ॥ ವಯಂ ಯತಿಂ ವೀಕ್ಷ್ಯ ಭವಂತ ಮದ್ಧಾ ಜಾತಾಃ ಕೃತಾರ್ಥಾಃ ಶ್ರುಣು ಭೋಸ್ತಥಾಽಪಿ ॥೨೭॥ ವಚೋಽಸ್ಮದೀಯಂ ಭಗವನ್ ಪ್ರಯೋಜನಂ ಕಿಮಸ್ಯಭೇದೇನ ಯತಶ್ಚತುರ್ಮುಖಾತ್ ॥ ಜನಿಂಗತೋ ಜೀವಗಣಾಃ ಸ್ವಕರ್ಮಣಾ ಪುನಃ ಪುನಃ ಸಂಸೃತಿ ಮೇತಿ ದುಃಖದಾಂ ॥೨೮॥ ತತೋಲಯೇ ಬ್ರಹ್ಮಣ ಏವ ಕುಕ್ಷೌ ಲಯಂ ಪ್ರಯಾತ್ಯೇಷಲಯಸ್ಯ ಕಾಲೇ । ಮೋಕ್ಷೋಽನ್ಯಥಾ ಬ್ರಹ್ಮವಿದೇಷ-ಯಾತಿ ಪರಂಪದಂ ಬ್ರಹ್ಮಣ ಏವಲೋಕಂ ॥೨೯॥ ತಸ್ಮಾದ್ಭವಾನ್ದಂಡ ಕಮಂಡುಲುಶ್ರಿತಸ್ತಲ್ಲೋಕ ಯೋಗ್ಯೋಯತಿ ಶೇಖರೋಗುರುಃ ॥ ಇತ್ಯುಕ್ತ ಆಚಾರ್ಯ ಉವಾಚ ಶಂಕರೋ ಬ್ರಹ್ಮಾದಿ ಭೂತಾನಿಯತೋ ಭವಂತಿ ತಂ ॥೩೦॥ ಜ್ಞಾತ್ವಾ ವಿಮುಕ್ತಿರ್ಭವತೀತಿ ಹಿ ಶ್ರುತೌ ಪ್ರೋಕ್ತಂತತಸ್ತಸ್ಯ ವಿಬೋಧಕಾರಣಂ ॥ ವೇದಾಂತ ವಾಕ್ಯ ಶ್ರವಣಾದಿಕಂ ಸದಾಕಾರ್ಯಂ ವಿಮೋಕ್ಷೋಹಿ ಲಯೋನ ಕೀರ್ತಿತಃ ॥೩೧॥ ಸುಷುಪ್ತಿ ತುಲ್ಯೋ ನಚಲಭ್ಯತೇ ಪರಃ ಕಾರ್ಯಸ್ಯಹಿ ಬ್ರಹ್ಮಣ ಏವ ಸೇವನಾತ್॥ ಶ್ರುತ್ವೇವಮಾಚಾರ್ಯ ಮುಖಾದ್ವಿಹಾಯ ತೆ ಚಿಹ್ನಾನಿ ಶುದ್ಧಾತ್ಮ ವಿಬೋಧ ತತ್ಪರಾಃ ॥ ಶಿಷ್ಯಾ ಬಭೂವುಸ್ತತ ಆಗತಾಸ್ತಂ ಪ್ರೋಚುರ್ಗುರುಂ ವಹ್ನಿಮತಾನುವರ್ತಿನಃ ॥ ಇತ್ಯಾದಿ ಮಾಧವಿಯ ಅಂದರೆ ವಿದ್ಯಾರಣ್ಯ ವಿರಚಿತ ಸಂಕರ ವಿಜಯದಲ್ಲೂ ಅಲ್ಲದೆ ಶ್ರೀ ಸುಬ್ರಹ್ಮಣ್ಯಕ್ಕೆ ಆದಿಶಂಕರರು ಬಂದ ವಿಷಯ ಶ್ರೀ ಶೃಂಗೇರಿ ಮಠೀಯ ಕಾಶೀ ಶ್ರೀ ಲಕ್ಷ್ಮಣ ಶಾಸ್ತ್ರಿಗಳವರಿಂದ ವಿರಚಿತ ಗುರುವಂಶ ಕಾವ್ಯವೆಂಬ ಗ್ರಂಥದಲ್ಲೂ :-

ತತಃ ಸುಬ್ರಹ್ಮಣ್ಯಾದ್ಯಮರ ನಿಲಯೇಷು ಪ್ರವಿಚರನ್ ।
ತತಃ ಸ್ವೈರಂ ಹರ್ಷಾದಪಿ ಜನಪದಾನ್ ತೌಲವಮುಖಾನ್
ಪವಿತ್ರೀ ಕುರ್ವಾಣಃ ಪರಶಿವ ಇವಾಶೇಷ ವಿನುತೋ ।
ಮತಿಃ ಶ್ರೀ ಸಾಮ್ರಾಜ್ಯೆ ವ್ಯಜಯತ ಮಹಾನ್ ಶಂಕರಗುರುಃ ॥

ತೌಲವ ದೇಶದ ಸುಬ್ರಹ್ಮಣ್ಯ ಮೊದಲಾದ ಸ್ಥಳಗಳಲ್ಲಿ ಶ್ರೀ ಶಂಕರ ಗುರುಗಳು

ಪರಶಿವನಂತೆ ಸಂಚರಿಸಿದರೆಂತಲೂ ಉಲ್ಲೇಖಿಸಿರುವುದರಿಂದ ಆದಿ ಶಂಕರರು ಆ ಕ್ಷೇತ್ರಕ್ಕೆ ಬಂದು ಆ ಕ್ಷೇತ್ರದಲ್ಲಿ ಆಗ ವಾಸವಾಗಿದ್ದ ಮತ್ತು ಹತ್ತಿರದ ಸ್ಥಳಗಳಿಂದ ಅಲ್ಲಿಗೆ ಬಂದಿದ್ದ ಬ್ರಾಹ್ಮಣರನ್ನು ತನ್ನ ಶುದ್ಧಾದ್ವೈತ ಜ್ಞಾನ ಬೋಧನೆಯಿಂದ ಅದ್ವೈತಿಗಳನ್ನಾಗಿ ಮಾಡಿದರೆಂದೂ, ಅಲ್ಲದೆ ಅವರು ಸ್ಮಾರ್ತಾಚಾರ ಪ್ರಕಾರದ ಪಂಚಪೂಜಾವಿಧಿಯನ್ನು ಒಪ್ಪಿಕೊಂಡು ಅವರು ಆದಿಶಂಕರರ ಶಿಷ್ಯರಾದರೆಂದೂ ಸ್ಪಷ್ಟವಾಗುತ್ತದೆ. ಇದಕ್ಕೆ ನಿದರ್ಶನವಾಗಿ ಶ್ರೀ ಸುಬ್ರಹ್ಮಣ್ಯ ದೇವರ ಒಳ ಅಂಗಣದ ಎಡಭಾಗದಲ್ಲಿ ಅಂದರೆ ಶ್ರೀ ಶೃಂಗೇರಿ ಶಾಖಾ ಮಠಕ್ಕೆ ಎದುರಾಗಿ ಇರುವ ಉಮಾಮಹೇಶ್ವರ ಗುಡಿಯಲ್ಲಿ ಈಗಲೂ ಆದಿತ್ಯ, ಅಂಬಿಕಾ, ವಿಷ್ಣು, ಗಣನಾಥ ಮತ್ತು ಮಹೇಶ್ವರರೆಂಬ ಐದು ದೇವತೆಗಳ ವಿಗ್ರಹಗಳನ್ನು ಪಂಚ ಪೂಜಾ ವಿಧಾನದಿಂದ ಅರ್ಚಿಸುವುದನ್ನು ನಾವು ಈಗಲೂ ಕಾಣಬಹುದು. ಅಲ್ಲದೆ ಈ ಶಾಖಾ ಮಠದಲ್ಲಿ ಯತಿಗಳೊಬ್ಬರು ಪೂರ್ವದಲ್ಲಿ ಇದ್ದರೆಂದೂ ಪ್ರತೀತಿ ಇದೆ.

ಅಭೇದವನ್ನು ಸಾರುವ ಈ ಸನಾತನ ಹಿಂದೂ ಧರ್ಮವು ಶ್ರೀ ಶಂಕರ ಭಗವತ್ಪಾದರಿಂದ ಉದ್ಧರಿಸಲ್ಪಟ್ಟು ಅದು ಸ್ಥಾಯಿಯಾಗಿ ನಿಲ್ಲುವಂತೆಯೂ ಅಜ್ಞಾನದಿಂದ ಜನರು ಅದನ್ನು ಮರೆತು ಪುನಃ ಭೇದವಾದಿಗಳಾದಾಗ ಅಂಥವರಿಗೆ ಅಭೇದವನ್ನು ಸಾರುವ ಅದ್ವೈತ ತತ್ವವನ್ನು ಪುನಃ ಬೋಧಿಸಿ ಆಸ್ತಿಕತೆಯನ್ನು ಜನತೆಯಲ್ಲಿ ಜಾಗೃತಿಗೊಳಿಸುವಂತೆ ಮಾಡಿ ದೇಶದಲ್ಲಿ ಐಕಮತ್ಯವನ್ನು ಉಂಟುಮಾಡುವುದಕ್ಕಾಗಿ ಆದಿಶಂಕರರು ನಮ್ಮ ಭಾರತದ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ವೇದಗಳನ್ನೂ ನಾಲ್ಕು ಮಹಾ ವಾಕ್ಯಗಳನ್ನೂ ಅನುಸರಿಸಿ ನಾಲ್ಕು ತೀರ್ಥ ಸ್ಥಳಗಳಲ್ಲಿ ನಾಲ್ಕು ಮಠಗಳನ್ನೂ ಸ್ಥಾಪಿಸಿ ತನ್ನ ಮುಖ್ಯ ನಾಲ್ಕು ಶಿಷ್ಯರುಗಳನ್ನು ಅವುಗಳಲ್ಲಿ ಇರಿಸಿ ತಮ್ಮ ಉದ್ದೇಶಗಳು ವ್ಯವಸ್ಥಿತ ರೀತಿಯಲ್ಲಿ ನೆರವೇರುವಂತೆ ಮಾಡಿದರು. ಈ ನಾಲ್ಕು ದಿಕ್ಕುಗಳಲ್ಲಿ ಸ್ಥಾಪಿಸಲ್ಪಟ್ಟ ನಾಲ್ಕು ಪೀಠಗಳಲ್ಲಿ ಮೊದಲನೇದಾದ, ತೆಂಕು ದಿಕ್ಕಿನ ಪೀಠವೇ ವಿಭಾಂಡಕರೂ ಋಷ್ಯ ಶೃಂಗರೂ ತಪಸ್ಸು ಮಾಡಿಕೊಂಡಿದ್ದ ತುಂಗಭದ್ರಾ ದಡದಲ್ಲಿರುವ ಶ್ರೀ ಶೃಂಗೇರಿ ಪೀಠವು. ಇಲ್ಲಿ ಅವರ ಮೊದಲಿನ ಶಿಷ್ಯರಾದ ಶ್ರೀ ಸುರೇಶ್ವರಾ ಚಾರ್ಯರನ್ನು ಇರಿಸಿ ಶ್ರೀ ಶಾರದಾ ಮಾತೆಯನ್ನು ಮಠಾದಿ ದೇವತೆಯನ್ನಾಗಿ ಮಾಡಿ ದಕ್ಷಿಣ ಭಾರತದ ಶ್ರೀ ಕಾಂಚೀ, ರಾಮೇಶ್ವರ, ತೌಳವ, ಕೇರಳ ಮೊದಲಾದ ಕನ್ಯಾಕುಮಾರಿ ಪರ್ಯಂತದ ಎಲ್ಲಾ ಸ್ಥಳಗಳ ಆಚಾರ ವಿಚಾರ ಮತ್ತು ಧರ್ಮಾಧಿ ಕಾರವನ್ನು ಅವರಿಗೆ ಬಿಟ್ಟುಕೊಟ್ಟು ಸನಾತನ ಧರ್ಮದ ರಕ್ಷಣೆಯನ್ನು ಕೈಕೊಂಡರು. (ನಾಲ್ಕು ಮಠಗಳ ವಿವರಣೆಯನ್ನು ಮುಂದಿನ ಪುಟದ ತಖ್ತೆಯಲ್ಲಿ ನೋಡಬಹುದು.)

------

| ವಿವರಣೆ | ಪಶ್ಚಿಮ ಆಮ್ನಾಯ | ಉತ್ತರ ಆಮ್ನಾಯ | ಪೂರ್ವ ಆಮ್ನಾಯ | ದಕ್ಷಿಣ ಆಮ್ನಾಯ |
|---|---|---|---|---|
| ಸ್ಥಳ | ದ್ವಾರಕಾಕಾಳಿಕಾ ಮಠ (ಇದನ್ನೇ ದ್ವಾರಕಾ ಶಾರದಾ ಕರೆಯುವ ವಾಡಿಕೆ ಇದೆ) | ಬದರಿಕಾಶ್ರಮ, ಜ್ಯೋತಿರ್ಮಠ | ಗೋವರ್ಧನ ಮಠ | ಶ್ರೀ ಶೃಂಗೇರಿ ಶ್ರೀ ಶಾರದಾ ಮಠ, ಋಷ್ಯ, ಶೃಂಗ ಆಶ್ರಮ |
| ದೇವತೆ | ಸಿದ್ಧೇಶ್ವರ ಭದ್ರಕಾಳೀ | ಶ್ರೀಮನ್ನಾರಾಯಣ ಶಕ್ತಿ ಪೂರ್ಣಗಿರಿ | ಜಗನ್ನಾಥ ಸ್ವಾಮಿ ಶಕ್ತಿ ವಿಶಾಲಾದೇವೀ | ವಿಭಾಂಡಕ ಋಷಿಯ ಪೂಜಿಸಿದ ಲಿಂಗ, ವರಾಹ ದೇವತಾ ಶ್ರೀ ರಾಮಕ್ಷೇತ್ರ ಶಕ್ತಿ ಶ್ರೀ ಶಾರಾದಾ ದೇವೀ |
| ತೀರ್ಥ | ಗೋಮತೀ | ಅಲಕನಂದಾ ಗಂಗಾ | ಮಹೋದಧಿ (ಬಂಗಾಳ ಕೊಲ್ಲಿ) | ತುಂಗಭದ್ರಾ |
| ವೇದ | ಸಾಮವೇದ | ಅಥರ್ವವೇದ | ಋಗ್ವೇದ | ಯಜುರ್ವೇದ |
| ಆಚಾರ್ಯರು | ಶ್ರೀ ಪದ್ಮಪಾದಾಚಾರ್ಯ | ಶ್ರೀ ತೋಟಕಾಚಾರ್ಯ | ಶ್ರೀ ಹಸ್ತಾಮಲಕಾಚಾರ್ಯ | ಬಹ್ಮವಿದ್ಯಾವಿಶಾರದ ಬಹ್ಮವತಾರ ಮೂರ್ತಿ ಶ್ರೀ ಸುರೇಶ್ವರಾಚಾರ್ಯ |
| ಸಂಪ್ರದಾಯ | ಕಿತವಾಲ | ನಂದವಾಲ | ಭಗವಾಲ | ಭುರಿವಾಲ |
| ಮಹಾವಾಕ್ಯ | ತತ್ವಮಸಿ | ಅಯಮಾತ್ಮಾಬ್ರಹ್ಮ | ಪ್ರಜ್ಞಾನಂಬ್ರಹ್ಮ | ಅಹಂಬ್ರಹ್ಮಾಸ್ಮಿ |
| ಬಿರುದುಗಳು | ತೀರ್ಥ, ಆಶ್ರಮ | ಗಿರಿ, ಪರ್ವತ, ಸಾಗರ | ಅರಣ್ಯ, ವನ | ಸರಸ್ವತೀ, ಪುರಿ, ಭಾರತೀ, ಅರಣ್ಯ, ತೀರ್ಥ, ಗೀರ, ಆಶ್ರಮ |

ಶ್ರೀ ಆದಿಶಂಕರರಿಗೆ 'ಶ್ರೀ ಶಂಕರಾಚಾರ್ಯರು' ಎಂಬ ಹೆಸರು ಅನ್ವರ್ಥ ವಾಗಿಯೇ ಬಂದಿರುತ್ತದೆ. ಹೇಗೆಂದರೆ ಭಾರತದಲ್ಲಿ ಇವರೇ ಮೊತ್ತಮೊದಲಿನ ಸನ್ಯಾಸಿಗಳಾಗಿ ಮಠಗಳನ್ನು ಸ್ಥಾಪಿಸಿ ವೈದಿಕ ಧರ್ಮ ಪ್ರಚಾರವನ್ನು ಕೈಕೊಂಡವರಾಗಿರುತ್ತಾರೆ. ಇವರು ತನ್ನ ಎಂಟನೇಯ ವರ್ಷದಲ್ಲಿ ಪೂರ್ಣಾ ನದಿಯಲ್ಲಿ ಸ್ನಾನ ಮಾಡುತ್ತಿರುವಾಗ ಇವರ ಕಾಲನ್ನು ಮೊಸಳೆಯು ಹಿಡಿದ ಸಂಕಷ್ಟ ಕಾಲದಲ್ಲಿ ತನ್ನ ತಾಯಿಯ ಒಪ್ಪಿಗೆ ಪ್ರಕಾರ ಆತುರ ಸನ್ಯಾಸವನ್ನು ಕೈಕೊಂಡದ್ದಾಗಿದೆ. ಆತುರ ಸನ್ಯಾಸಕ್ಕೆ ವಿಧಿಗಳಿಲ್ಲ. ಮನಸ್ಸಿನಲ್ಲೇ ಮಂತ್ರೋಚ್ಚಾರಣೆ ಮಾಡಿ ಆ ಮಂತ್ರದ ಪ್ರಕಾರ ತಾನು ಇನ್ನು ತನ್ನ ಜಡ ಶರೀರವು ಬೀಳುವ ವರೆಗೆ ಅನುಷ್ಠಾನದಲ್ಲಿ ಇರುತ್ತೇನೆ ಎಂಬ ಪ್ರಮಾಣ ವಚನ ಮಾಡುವುದಾಗಿದೆ. ''ಆತುರಾಣಾಂ ವಿಶೇಷೋಽಸ್ತಿ ನ ವಿಧಿರ್ನೈವಚಾಕ್ರಿಯಾಃ । ಪ್ರೇಷ ಮಾತ್ರಸ್ತು ಸನ್ಯಾಸಃ ಆತುರಾಣಾಂ ವಿಧೀಯತೆ ॥ ಉತ್ಪನ್ನೇ ಸಂಕಟೆ ಘೋರೆ ಚೋರ ವ್ಯಾಘ್ರಾದಿ ಗೋಚರೇ । ಭಯ ಭೀತಸ್ಯ ಸನ್ಯಾಸಮಂಗಿರಾಮುಖಿ ರಬ್ರವೀತ್''॥

ಮೇಲಿನ ಶ್ಲೋಕದಲ್ಲಿ ವಿವರಿಸಿದ ಅಂಗೀರಸ ಮುನಿಗಳ ಮಾತಿನ ಪ್ರಕಾರ ಶ್ರೀಶಂಕರರು ತನ್ನ ಕಷ್ಟಕಾಲದಲ್ಲಿ '**ಅಭಯಂ ಸರ್ವ ಭೂತೇಭ್ಯೋ ಮತ್ತಃ ಸ್ವಾಹಾ**' ಎಂಬ ಮಂತ್ರವನ್ನು ಉಚ್ಚರಿಸಿ (ಮಂತ್ರಾರ್ಥ : ;ಪ್ರಪಂಚದಲ್ಲಿರುವ ಸಮಸ್ತ ಭೂತಗಳಿಗೂ ಅಂದರೆ ಜೀವರಾಶಿಗಳಿಗೂ ತನ್ನಿಂದ ಅಭಯವು ಕೊಡಲ್ಪಟ್ಟಿದೆ.) ಅದರ ಅರ್ಥವನ್ನು ಅನುಷ್ಠಾನದಲ್ಲಿ ಇರಿಸಿ ತನ್ನ ಪ್ರಮಾಣ ವಚನ ಪ್ರಕಾರ ತನ್ನ ಅಂತ್ಯದವರೆಗೂ ಆಚರಿಸಿಕೊಂಡು ಬಂದವರಾದುದರಿಂದ ಅವರಿಗೆ '**ಆಚಾರ್ಯ**' ಎಂಬ ಹೆಸರು ಬಂದದ್ದಾಗಿದೆ.

'ಆಚಿನೋತಿ ಚ ಶಾಸ್ತ್ರಾರ್ಥಮಾಚಾರೇ ಸ್ಥಾಪಯತ್ಯಪಿ ।
ಸ್ವಯಮಪ್ಯಾಚರೇದ್ಯಸ್ತು ಸ **ಆಚಾರ್ಯ** ಇತಿಸ್ಮೃತಃ ।
ಕೃತೇತು ಭಗವಾನ್ ಸತ್ಯಸ್ತ್ರೇತಾಯಾಂ ದತ್ತ ಏವಚ ॥
ದ್ವಾಪರೇ ಭಗವಾನ್ ವ್ಯಾಸಃ ಕಲೌ ಶ್ರೀ ಶಂಕರ ಸ್ವಯಂ ॥'

ವೈದಿಕ ಧರ್ಮಶಾಸ್ತ್ರಾರ್ಥ ಪ್ರಕಾರ ಕೃತ, ತ್ರೇತಾ, ದ್ವಾಪರದಲ್ಲಿ, ಸತ್ಯ, ದತ್ತಾತ್ರೇಯ, ವ್ಯಾಸರು ವೈದಿಕ ಧರ್ಮಾಚರಣೆಯನ್ನು ಅನುಷ್ಠಾನದಲ್ಲಿಟ್ಟು ಕೊಂಡಿದ್ದಂತೆ, ಕಲಿಯುಗದಲ್ಲಿ ಶ್ರೀ ಶಂಕರರು ತನ್ನ ಸನ್ಯಾಸ ಧರ್ಮದ ಆಚರಣೆಯನ್ನು ಶಾಸ್ತ್ರೀಯವಾಗಿ ಅಕ್ಷರಶಃ ತ್ರಿಕರಣ ಶುದ್ಧದಿಂದ ಪರಿಪಾಲಿಸಿ ಕೊಂಡು ಬಂದದ್ದರಿಂದ ಅವರಿಗೆ ಆಚಾರ್ಯರೆಂಬ ಬಿರುದು ಬಂದದ್ದಾಗಿದೆ. ಅದೂ ಅಲ್ಲದೆ 'ಶಂ-ಕರೋತೀತಿ ಶಂಕರಃ' ಎಂಬ ಪದದ ಅರ್ಥದಂತೆ ಅವರ ಅಲ್ಪ ಜೀವಮಾನವನ್ನು ಜನತೆಯ ಕಲ್ಯಾಣಕ್ಕಾಗಿಯೇ ವ್ಯಯಿಸಿದವರಾಗಿರುತ್ತಾರೆ. ಜ್ಯೋತಿಷ್ಯ ಶಾಸ್ತ್ರ ಪ್ರಕಾರವೂ ಶಂಕರ ಎಂಬ ಅವರ ಹೆಸರು, ರ=೨. ಕ=೧, ಶ=೫ ಅಂದರೆ ಎರಡನೇ ಮಾಸವಾದ ವೈಶಾಖದಲ್ಲಿ ಮೊದಲನೇ ಶುಕ್ಲಪಕ್ಷದ ಐದನೇ ಪಂಚಮಿ ತಿಥಿಯಲ್ಲಿ ಅವರ ಜನನವು ಆಗಿರುತ್ತದೆ ಎಂಬುದನ್ನು ಸೂಚಿಸುತ್ತದೆ. ಈ ಎಲ್ಲಾ ಕಾರಣಗಳಿಂದ ಅವರ '**ಶ್ರೀ ಶಂಕರಾಚಾರ್ಯ**' ಎಂಬ ಹೆಸರು ಅನ್ವರ್ಥವಾಗಿಯೇ ಇದೆ ಎಂಬುದನ್ನು ನಾವು ತಿಳಿದುಕೊಳ್ಳಬಹುದು.

ಈ ರೀತಿ ಅಭೇದವನ್ನು ಸಾರುವ ಅದ್ವೈತ ಪ್ರತಿಪಾದಕ ತತ್ವವನ್ನು ಭಾರತದಾದ್ಯಂತ ಜನತೆಗೆ ಬೋಧಿಸಿ ಭಾರತದಲ್ಲಿ ಶಾಂತಿಯನ್ನು ನೆಲೆಗೊಳಿಸಿದ ಆದಿಶಂಕರ ಭಗವತ್ಪಾದರಿಗೆ ಆಗಿನ

ಸರ್ವಮತದವರೂ ಅವರನ್ನು ಜಗದ್ಗುರು ಎಂಬ ಬಿರುದನ್ನು ಕೊಟ್ಟು ಅಭಿನಂದಿಸಿದ್ದರು. ಜಗದ್ಗುರು ಎಂಬ ಬಿರುದು ಇವರು ಸಾರುವ ತತ್ವಕ್ಕೆ ಅನ್ವರ್ಥವಾಗಿರುತ್ತದೆ. ಹೇಗೆಂದು **'ಜಗ ತಾಂ ಗುರುಃ ಜಗದ್ಗುರುಃ'** ಅಂದರೆ 'ಜಗತ್' (ಜ+ಗತ್)='ಜ' ಅಂದರೆ ಹುಟ್ಟುವುದು 'ಗತ್' ಅಂದರೆ ಹೋಗುವುದು ಅಂದರೆ ನೀರಿನಲ್ಲಿ ಹುಟ್ಟುವ ನೀರ್ಗುಳ್ಳೆಗಳಂತೆಯೂ, ಸಮುದ್ರದ ಬಂದು ಹೋಗುವ ಅಲೆಗಳಂತೆಯೂ ಕಂಡು, ಒಡನೆ ಕಾಣದೆ ಹೋಗುವುದು ಎಂದರ್ಥ. ಬ್ರಹ್ಮಾಂಡದಲ್ಲಿ ಕಾಣುವ ನಾಮ ರೂಪಕವಾದ ಸರ್ವಚರಾಚರ ವಸ್ತುಗಳೂ ಕಂಡು ಕಾಣದ ಹೋಗುವುವುಗಳೂ, ಅಂದರೆ ನಿರ್ವಿಕಲ್ಪ ಬ್ರಹ್ಮದಲ್ಲಿ ಈ ವಿಶ್ವದ ಚರಾಚರ ವಸ್ತುಗಳು ರೂಪನಾಮಗಳಿಂದ ಭ್ರಮಿಸಲ್ಪಡುವ ಮಿಥ್ಯೆಯು. ಈ ಮಿಥ್ಯೆಯೇ ಜಗತ್ ರೂಪವಾಗಿ ನಾಮ ರೂಪವನ್ನು ಹೊಂದಿದ ಮನುಷ್ಯರಿಂದ ಭ್ರಮಿಸಲ್ಪಡುತ್ತದೆ. ಯಥಾರ್ಥವಾಗಿ ಪರ್ಯಾಲೋಚಿಸಿದರೆ ಬ್ರಹ್ಮದಲ್ಲಿ ಜಗತ್ ಎಂಬ ಭ್ರಮೆಯೇ ಹೊರತು ಬ್ರಹ್ಮ ಒಂದಲ್ಲದೆ ಬೇರೆ ವಸ್ತುವು ಇಲ್ಲ ಎಂಬ ಅರ್ಥವನ್ನೇ **'ಜಗತ್'** ಎಂಬ ಪದವು ತೋರಿಸಿಕೊಡುತ್ತದೆ. ಇಂತಹ ಭ್ರಮೆಯನ್ನು **'ತತ್ವಮಸಿ'**, **'ಅಯಮಾತ್ಮಾಬ್ರಹ್ಮ'**, **'ಪ್ರಜ್ಞಾನಂಬ್ರಹ್ಮ'**, **'ಅಹಂಬ್ರಹ್ಮಾಸ್ಮಿ'** ಎಂಬ ನಾಲ್ಕು ಮಹಾ ವಾಕ್ಯಗಳ ತಾತ್ವಿಕವಾದ ಅರ್ಥ ಬೋಧನೆಯಿಂದ ನಿರಸನ ಮಾಡಿ ಮಾನವನ ಮನಸ್ಸಿಗೆ ಶಾಂತಿ ತರುವವನೇ 'ಜಗದ್ಗುರುವು' ಈ ಜಗದ್ಗುರು ಎಂಬ ಪದದ ಅರ್ಥವನ್ನು ಶ್ರೀ ಶಂಕರರು ತನ್ನ ಗುರು ಶ್ರೀ ಗೋವಿಂದ ಭಗವತ್ಪಾದರನ್ನು ಪ್ರಥಮ ದರ್ಶನ ಮಾಡಿದ ಸಮಯದಲ್ಲಿ ಶ್ರೀ ಗೋವಿಂದ ಭಗವತ್ಪಾದರರು "ನೀನು ಯಾರು?" ಎಂದು ಶ್ರೀ ಶಂಕರರನ್ನು ಪ್ರಶ್ನಿಸಿದುದಕ್ಕೆ ಶ್ರೀ ಶಂಕರರು "ದಶಶ್ಲೋಕೀ" ಎಂಬ ನಿರ್ವಾಣ ದಶಕವೆಂಬ ಶ್ಲೋಕಗಳಿಂದ ನಾನು ಯಾರು? ಎಂಬುದನ್ನು ಈ ರೀತಿ ವಿವರಿಸಿರುತ್ತಾರೆ.

"ನ ಭೂಮಿ ರ್ನತೋಯಂ ನತೇಜೋ ನವಾಯು
ರ್ನಖಂ ನೇಂದ್ರಿಯಂ ವ ನ ತ್ವೇಷಾಂ ಸಮೂಹಃ ॥
ಅನ್ಯೈ ಕಾಂತಿ ಕತ್ವಾತ್ ಸುಶುಪ್ತ್ಯೈಕಸಿದ್ಧಃ ।
ತದೇಕೋವಶಿಷ್ಟಃ ಶಿವಃ ಕೇವಲೋಹಂ ॥
ಮನೋಬುದ್ಧ್ಯಹಂಕಾರ ಚಿತ್ತಾನಿನಾಹಂ ॥
ನಚಶ್ರೋತ್ರ ಜಿಹ್ವೆ ನಚಘ್ರಾಣನೇತ್ರೆ ।
ನಚವ್ಯೋಮ ಭೂಮಿ ರ್ನತೇಜೋ ನವಾಯುಃ
ಚಿದಾನಂದ ರೂಪಃ ಶಿವೋಹಂ, ಶಿವೋಹಂ"

ಅಂದರೆ ಪಂಚಭೂತಗಳು ನಮ್ಮ ಪಂಚಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಬುದ್ಧಿ, ಅಹಂಕಾರಿಗಳು ನಾನಲ್ಲ. ನಾನು ಸುಷುಪ್ತಿ ಕಾಲದಲ್ಲಿ ಸಿದ್ಧಿಸಲ್ಪಡುವ ನಿರಾಕಾರನಾದ ಶಿವನೇ ನಾನು ಎಂದೂ, ಮಿಥ್ಯ ಜಗತ್ತು ನಾನಲ್ಲ ನಿತ್ಯ ವಸ್ತುವಾದ ನಿರಾಕಾರ ಬ್ರಹ್ಮವೇ ನಾನೆಂದೂ ತಿಳಿಸಿರುವು ದರಿಂದ 'ಜಗದ್ಗುರು' ಎಂಬ ಪದದ ಅರ್ಥವನ್ನು ವ್ಯಕ್ತಪಡಿಸಿರುತ್ತಾರೆ.

ಈ ಅರ್ಥ ಬೋಧನೆಯು ಬರೇ ಹಿಂದುಗಳಿಗೆ ಮಾತ್ರವಲ್ಲ ಈ ಮಿಥ್ಯಾ ಜಗತ್ತಿನಲ್ಲಿ ಇರುವ ಮುಸಲ್ಮಾನ್, ಕ್ರೈಸ್ತ, ಮೊದಲಾದ ಸರ್ವ ಮತದ ಮಾನವರಿಗೂ ಅನ್ವಯಿಸುವುದರಿಂದ



ಶ್ರೀ ಶೃಂಗೇರಿ ಮಠದ ಈಗಿನ ಜಗದ್ಗುರುಗಳಾದ
ಶ್ರೀಮದಭಿನವ ತೀರ್ಥ ಮಹಾ ಸ್ವಾಮಿಗಳವರು

ಶ್ರೀ ಆದಿ ಶಂಕರರು ಮತಭೇದವಿಲ್ಲದೆ ಜಗತ್ತಿನ ಎಲ್ಲಾ ಮಾನವರಿಗೂ ಗುರುಗಳಾಗಲು ಅರ್ಹರಾದರು. ಆದುದರಿಂದ ಅವರಿಗೆ ಆ ಜಗದ್ಗುರು ಎಂಬ ಬಿರುದು ಬಂದದ್ದಾಗಿದೆ. ಇದರಿಂದಾಗಿ ಆಗಿನ ರಾಜಾಧಿರಾಜರುಗಳು 'ಜಗದ್ಗುರು'ಗಳೆಂಬ ಅವರ ಅಂಕಿತದ ಅರಿವು ಜನತೆಗೆ ಉಂಟಾಗುವಂತೆ ಮೇಲಿನ ನಾಲ್ಕು ಮಠಗಳ ಪರಂಪರಾಗತ ಯತಿವರ್ಯರಿಗೆ ಅಡ್ಡಪಾಲಕಿ, ಮಕರ ತೋರಣ, ಹಗಲು ದೀವಟಿಗೆ ಮೊದಲಾದ ಅನೇಕ ಬಿರುದುಬಾವಲಿಗಳನ್ನು ಕೊಟ್ಟದ್ದು ಮಾತ್ರವಲ್ಲದೆ ಕ್ರೈಸ್ತ ಪೋಪು ಗುರುಗಳಿಗೆ ವೆಟಿಕಾನ್ ಎಂಬ ಜಹಂಗೀರ್ ಇದ್ದಂತೆ ಶೃಂಗೇರಿ ಜಗದ್ಗುರುಗಳಿಗೆ ಶೃಂಗೇರಿ ತಾಲೂಕನ್ನೇ ಜಹಗೀರಿಯಾಗಿ ಬಿಟ್ಟಿದ್ದರು. ಆದರೆ ದೇಶದಲ್ಲಿ ರಾಮರಾಜ್ಯ ದಂತಹ ಪ್ರಜಾಹಿತವನ್ನು ಉಂಟುಮಾಡುವ ರಾಜ್ಯವನ್ನು ಸ್ಥಾಪಿಸಬೇಕೆಂದು ದೇಶಕ್ಕಾಗಿ ಮಡಿದ ಗಾಂಧೀಜಿಯವರ ಹೆಸರನ್ನು ಬಾಯಲ್ಲಿ ಉಚ್ಚರಿಸಿಕೊಂಡು ಅವರ ತತ್ವಗಳನ್ನು ಕೊಲೆಮಾಡಿಕೊಂಡು ಪ್ರಜಾಹಿತವನ್ನು ಬಿಟ್ಟು ಪ್ರಜಾಪ್ರಭುತ್ವ ಸಮಾಜವಾದದ ನೆಪದಿಂದ ಜಾತ್ಯಾತೀತ (Secular), ಧರ್ಮಾತೀತ, ನೀತ್ಯಾತೀತ ತತ್ವದಿಂದ ದೇಶವನ್ನು ಲಂಚ, ಕೊಲೆ, ಸುಲಿಗೆಯ ದೇಶವನ್ನಾಗಿ ಮಾರ್ಪಡಿಸಿ ಮತ್ತು ಅಧಿಕಾರಕ್ಕಾಗಿ ಮತ ಸಂಗ್ರಹ ಮತ್ತು ಧನ ಸಂಗ್ರಹಗಳೆಂಬ ಸ್ವಾರ್ಥಕ್ಕೆ ಬಲಿಬಿದ್ದ ಈಗಿನ ರಾಜಕಾರಣಿಗಳು ಶೃಂಗೇರಿಯಂತಹ ವಿಶಾಲ ಧ್ಯೇಯದ, ಜಗತ್ತಿಗೆ ಆದರ್ಶವಾದ ಧರ್ಮ ಸಂಸ್ಥಾಪನೆಯ ಮಠದ ಜಹಗೀರುಗಳನ್ನು ಸ್ವಾಧೀನಪಡಿಸಿದುದು ನಮ್ಮ ದೇಶದ ದುರದೃಷ್ಟವೆಂದೇ ಹೇಳಬೇಕು. ಹಿಟ್ಲರ್, ಮುಸಲೋನಿಯಂತಹ ಫೆಸಿಸ್ಟ್ ಮುಖಂಡರ ಆಳ್ವಿಕೆ ಕಾಲದಲ್ಲೂ, ಕ್ರೈಸ್ತರ ಧರ್ಮಬೋಧಕ ಸ್ಥಳವಾದ ವೆಟಿಕಾನ್‌ನ ಜಹಗೀರಿಯು ಅವರ ಸರ್ಕಾರದವರಿಂದ ಸ್ವಾಧೀನಪಡಿಸಿಕೊಳ್ಳಲ್ಪಡಲಿಲ್ಲ. ಅವರಲ್ಲಿದ್ದ ಧರ್ಮಶ್ರದ್ಧೆಯ ಸ್ವಲ್ಪ ಅಂಶವೂ ನಮ್ಮ ಭಾರತದ ಈಗಿನ ರಾಜಕಾರಣಿಗಳಲ್ಲಿ ಇಲ್ಲದೇ ಇದ್ದುದು ವ್ಯಸನಾಸ್ಪದವಾಗಿದೆ. ಅದರ ಬದಲಿಗೆ ಈ ನಾಲ್ಕು ಜಗದ್ಗುರು ಮಠಗಳ ಸ್ಥಾನಮಾನಗಳನ್ನು ಕಾಪಾಡಿ ಜಗತ್ತಿಗೆ ಆದರ್ಶ ಮಠಗಳನ್ನಾಗಿ ಮಾಡಿ ಆ ಮಠಗಳ ಮುಖಾಂತರ ಈ ಜಗತ್ತಿನಲ್ಲಿರುವ ಜಾತಿ ಭೇದಗಳನ್ನೂ ಮತ ಭೇದಗಳನ್ನೂ ಗಡಿ ವ್ಯತ್ಯಾಸಗಳನ್ನೂ ಕಟ್ಟಿಕೊಂಡು ಅದಕ್ಕಾಗಿ ಹೊಡೆದಾಡಿಕೊಂಡು ತಮ್ಮ ನಾಶದ ಕಡೆಗೆ ಹೋಗುವ ಜನಾಂಗಕ್ಕೆ ಅಭೇದವಾದ ತತ್ವವನ್ನು ಸಾರಿ ಈ ಭೂಮಿಯಲ್ಲಿ ಹುಟ್ಟಿದ ಎಲ್ಲರಲ್ಲೂ ಮಾನವೀಯತೆಯ ಧರ್ಮದಿಂದ ಪ್ರೇಮವನ್ನು ಬೆಳೆಸುವಂತೆ ಮಾಡಿ ಐಕಮತ್ಯದಿಂದ ಜಗಳಾಡಿಕೊಳ್ಳದಂತೆ ಮಾಡಿಸಿ ಭಾರತಕ್ಕೆ ಒಂದು ದೊಡ್ಡ ಕೀರ್ತಿಯನ್ನೇ ತರಬಹುದಾಗಿತ್ತು. ಶ್ರೀ ಶಂಕರರ ಅದ್ವೈತವು ಭಾರತದಲ್ಲಿ ಮಾತ್ರವಲ್ಲ ಇತರ ದೇಶಗಳಲ್ಲೂ ಕೀರ್ತಿಯನ್ನು ಗಳಿಸಿದ್ದು ಸರ್ವವಿದಿತವಾಗಿದೆ ಎಂಬುದು ಅವರಿಗೆ ಗೊತ್ತಿದೆ. ಈ ಧರ್ಮಬುದ್ಧಿಯು ನಮ್ಮ ರಾಜಕಾರಣಿಗಳಿಗೆ ಇನ್ನಾದರೂ ಬರುವಂತೆ ಭಾರತ ಮಾತೆಯು ಪ್ರೇರೇಪಿಸಲಿ!

ಈಗ ಈ ಜಗದ್ಗುರುಗಳೆಂಬ ಹೆಸರು ಮನೆಮಾತಾಗಿದೆ. ಕಾಂಗ್ರೆಸ್ ಆಳ್ವಿಕೆ ಬಂದ ನಂತರ ಸಣ್ಣ ಮಠಾಧಿಪತಿಗಲೂ ಕೂಡ ಅವರ ಅಧಿಕಾರಕ್ಕೆ ಒಳಪಡದ 'ಜಗದ್ಗುರು' ಸರ್ವಜ್ಞ ಪೀಠವೆಂಬ ಅಂಕಿತಗಳನ್ನು ಹಾಕಿಕೊಂಡು ಮೇಲಿನ ಬಿರುದಾವಳಿಗಳನ್ನು ಉಪಯೋಗಿಸಿಕೊಂಡು ತಿರುಗುವುದು ಎಲ್ಲೆಲ್ಲಿಯೂ ಕಂಡುಬರುತ್ತದೆ. ಮೈಸೂರು ರಾಜ್ಯಾಧಿಪತ್ಯವು ಬೀಳುವ ವರೆಗೆ ಮುಂಚಿನ ರಾಜರುಗಳು ಶೃಂಗೇರಿ ಮಠಕ್ಕೆ ಸಲ್ಲತಕ್ಕ ಮೇಲಿನ ಬಿರುದು ಬಾವಲಿಗಳನ್ನು ಇತರ

ಮಠದವರು ಅನುಕರಿಸಿದರೆ ಅಂತಹ ಮಠದವರಿಂದ ಆ ಬಿರುದುಬಾವಲಿಗಳನ್ನು ಆಗಿ ರಾಜರುಗಳು ತೆಗೆಸಿ ಅದನ್ನು ಶೃಂಗೇರಿ ಮಠಕ್ಕೆ ಕೊಡಿಸುತ್ತಿದ್ದರು. ಆ ರೀತಿ ವರ್ತಿಸಿದವರನ್ನು ಈ ಧರ್ಮಾತೀತ ರಾಜ್ಯವಾದು ದರಿಂದ ಕೇಳುವವರಿಲ್ಲವೆಂದಾಗಿದೆ. ದೃಷ್ಟಾಂತವಾಗಿ, ಮುಮ್ಮಡಿ ಕೃಷ್ಣರಾಜ ಒಡೆಯರವರು 1828ರಲ್ಲಿ ಕಿಲ್ಲೆದಾರರಿಗೆ ಬರೆದ ಪತ್ರದಲ್ಲಿ ಅನಧಿಕೃತ ಬಿರುದು ಬಾವಲಿಗಳನ್ನು ಉಪಯೋಗಿಸಿದ ಹರಿಹರಪುರ, ರಾಮಚಂದ್ರಾಪುರ, ಹೊನ್ನೆಹಳ್ಳಿ, ತೀರ್ಥಹಳ್ಳಿ ಮೊದಲಾದ ಮಠಗಳು ಶೃಂಗೇರಿ ಮಠದ ಉಪಮಠಗಳೆಂದೂ ಶೃಂಗೇರಿ ಮಠದ ಬಿರುದುಬಾವಲಿಗಳನ್ನು ಅನುಕರಿಸುವ ಅಧಿಕಾರ ಅವರಿಗಿಲ್ಲವೆಂದೂ ಆ ಕಾರಣದಿಂದ ಅವರು ಉಪಯೋಗಿಸಿದ ಬಿರುದುಬಾವಲಿಗಳನ್ನು ಅವರ ಮಠದಿಂದ ತೆಗೆದು ಶೃಂಗೇರಿ ಮಠಕ್ಕೆ ಕೊಡಿಸಿದ ವಿಚಾರವನ್ನು ಈ ಕೆಳಗಿನ ಮೈಸೂರು ಆರ್ಕಿಯಲೋಜಿ ಕಲ್ ರಿಪೋರ್ಟು ಮತ್ತು ಆಗಿನ ಮೈಸೂರು ಮಹಾರಾಜ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಪತ್ರದಿಂದ ತಿಳಿದುಬರುತ್ತದೆ.

## ANNEXURE-II (ದಾಖಲೆಗಳು)

**1. The following are those extracted from certain old records Mysore Acrheological Report, 1916. (Page 81-82)**

No. 145.... Two records of 1823 and 1828 direct the officers of Govern ment to see that the Swamis of certain minor Mutts do not use unauthorized insignia. The earlier one enjoins that incase, the Swami of the Hariharapura Mutt moves about with any new insignia to which he is not entitled, he should be stopped atonce. A similar order about this Swami was issued by Purniah in 1807 (Para 140); The other directs the Amildars concerned to inform the Swamis of the minor Mutts, such as those of Ramachandrapura, Honnehally, Thirthahalli, Harihaapura, and Mulubagilu that they are subordinate to the Sringeri Swami and have to obey his orders and that incase they presumed to use unauthorized insignia, the latter would be seized and handed over to the Sringeri Mutt. There are only three more records of his reign that have yet to be noticed. One of them dated 1814 tells us that Car formerly presented by the palace for the Godess Sharada was burnt and a new car was ordered to be prepared.

2. ಶೃಂಗೇರಿ ಮಠೀಯ ಪ್ರಾಕ್ತನ ಲೇಖನಮಾಲಾಪುಸ್ತಕದ ಪುಟ : 144-145

### 134. ಲೇಖನ ಸರ್ವಧಾರಿ, ಕ್ರಿ.ಶ. 1828-29

ಸರ್ವಧಾರಿ ಸಂವತ್ಸರದ ಜ್ಯೇಷ್ಠ ಬ. ೮ ಗುರುವಾರದಲ್ಲು ಶ್ರೀಮತು ಅರಮನೆಸೀಮೆ ಗಡಿಗಳ ಅಮಿಲ, ಕಿಲ್ಲೇದಾರರಿಗೆ ಬರಸಿ ಕಳುಹಿಸಿದ ನಿರೂಪ ಆದಾಗಿ :-

ಶೃಂಗೇರಿ ಮಠದ ಶ್ರೀ ಸ್ವಾಮಿಗಳವರ ಆಜ್ಞಾನುಸಾರವಾಗಿ ನಡೆದು ಕೊಳ್ಳತಕ್ಕ

ರಾಮಚಂದ್ರಪುರ, ಹೊನ್ನೆಹಳ್ಳಿ, ತೀರ್ಥಹಳ್ಳಿ, ಪರಿಹರಪುರ, ಮುಳುಬಾಗಿಲು, ಮುಂತಾದ ತುಂಡು ಮಠದವರು ಬಿರುದುಬಾವಲಿ, ಶ್ವೇತಛತ್ರ, ಮಕರತೋರಣ ಮೊದಲಾದ ಹೆಚ್ಚುಕಟ್ಲೆ ಬಿರುದುಗಳು ಹೆಚ್ಚು ವ್ಯಾಸಂಗ ಮಾಡಿಕೊಂಡು ತಿರುಗುವದರಿಂದ ರಾಮಚಂದ್ರಪುರದ ಮಠದ, ಬಿರುದುಬಾವಲಿ, ಶೃಂಗೇರಿ ಮಠಕ್ಕೆ ತೆಗೆದುಕೊಂಡು ಇರುವದು ಸರಿಯಷ್ಟೆ. ಆ ಬಿರುದು, ಬಾವಲಿಗಳು ಶ್ರೀ ಶೃಂಗೇರಿ ಮಠಕ್ಕೆ ಸಲ್ಲತಕ್ಕದ್ದೇ ಹೊರತು ಸದರಿ ಬಿರುದು ಇರುವ ತುಂಡು ಮಠಕ್ಕೆ ಎಂದೂ ಸಲ್ಲತಕ್ಕದ್ದಲ್ಲ. ಶ್ರೀ ಶೃಂಗೇರಿ ಮಠದ ಶ್ರೀಪಾದ ಪೀಠಕ್ಕೆ ಕಾಣಿಕೆ, ಕಪ್ಪ, ಕೊಟ್ಟು ಅಲ್ಲಿನ ಆಜ್ಞಾನುಸಾರ ನಡೆಯುತ್ತಾ ಇರುವಲ್ಲಿ ಈಗ ನೂತನ ಪದ್ಧತಿ ನಡೆಸಬಾರದಲ್ಲಾ. ಇನ್ನು ಯಾರಾದರೂ ಈ ತುಂಡು ಮಠದ ಸನ್ಯಾಸಿಗಳು ತಮ್ಮ ತಮ್ಮ ಆಶ್ರಮ ಧರ್ಮದಲ್ಲಿ ವಿಹಿತವಾಗಿ ಇರದೆ ಇಲ್ಲದ ಹವ್ಯಾಸ, ಬಿರುದು, ಬಾವಲಿಗಳು ಮಾಡಿಕೊಂಡು ಮನಸ್ವಿ ನಡೆದಲ್ಲಿ ಸ್ರೀ ಮಠದವರು ವಿಚಾರಿಸಿ ಆದಕ್ಕೆ ತಕ್ಕ ಬಂದೋಬಸ್ತು ಮಾಡಿಸಿಯಾರು. ಈ ವಿಚಾರವಾಗಿ ಶ್ರೀ ಮಠದವರು ನಿಮ್ಮ ನಿಮ್ಮ ಸಂಗಡ ಹೇಳಿದಲ್ಲಿ ಇದಕ್ಕೆ ತಕ್ಕ ಬಂದೋಬಸ್ತು ಮಾಡಿಸಿಕೊಟ್ಟು ಆ ಬಗ್ಗೆ ಹೆಚ್ಚು ಕಟ್ಟಡ ಬಿರುದು, ಬಾವಲಿಗಳ ಶ್ರೀ ಮಠಕ್ಕೆ ಕೊಡಿಸಿಕೊಟ್ಟು ಮುಂದೆ ಇಂಥಾ ಹವ್ಯಾಸ ಪದ್ಧತಿ ನಡೆಯದೆ ಶ್ರೀ ಮಠದ ಅಪ್ಪಣೆ ಪ್ರಕಾರ ನಡೆದುಕೊಳ್ಳುವಂತೆ ಹೇಳುವುದು.

ತಾರೀಕು ೫ನೇ ಮಾಹೆ ಜೂ ೯, ಸ೯ 1828ನೇ ಇಸವಿ.

ಶ್ರೀ ಆದಿಶಂಕರರು ಸಂಚರಿಸಿದ ಈ ಭಾರತದ ಹೆಚ್ಚಿನ ದೊಡ್ಡ ಕ್ಷೇತ್ರಗಳಲ್ಲಿ ಅಲ್ಲಿಯ ದೇವತೆಗಳ ಶಕ್ತಿಗೆ ಸರಿಯಾಗಿ ಅಲ್ಲಿಯ ಮಹಿಮೆಯು ಹೆಚ್ಚುವಂತೆ ಅಲ್ಲಲ್ಲಿ ಶ್ರೀಚಕ್ರ, ಶಿವಚಕ್ರ, ಆಕರ್ಷಣ ಚಕ್ರ ಇತ್ಯಾದಿಗಳನ್ನು ಸ್ಥಾಪಿಸಿ ಹಿಂದೂ ಜನತೆಯು ಕ್ಷೇತ್ರಗಳ ಮಹಿಮೆಯಿಂದ ಆಕರ್ಷಿಸಲ್ಪಟ್ಟು ಆಸ್ತಿಕ ಮನೋಭಾವನೆಯನ್ನು ಬಿಡದಂತೆ ಮಾಡಿದ್ದರು. ಶ್ರೀ ಶಂಕರರು ಸಂಚರಿಸಿದ ಭಾರತದ ಹೆಚ್ಚಿನ ಎಲ್ಲಾ ಕ್ಷೇತ್ರಗಳಲ್ಲೂ ಇವರು ಸಂದರ್ಶಿಸಿದ ಗುರುತಿಗಾಗಿ ಇವರ ಶಾಖಾ ಮಠಗಳು ಈಗಲೂ ಇರುವುದು ನಿದರ್ಶನವಾಗಿದೆ. ಇವುಗಳಲ್ಲಿ ಶ್ರೀ ಶೃಂಗೇರಿ ಮಠದ ಶಾಖಾ ಮಠವೊಂದು ಅತಿ ದಕ್ಷಿಣದಲ್ಲಿ ಕಾಂಚಿಕಾಮ ಕೋಟಿ ಪೀಠವೆಂಬ ಹೆಸರಿನಿಂದ ಅದ್ವೈತ ತತ್ವದ ಅಭೇದವಾದದಿಂದ ಹಿಂದೂ ಸನಾತನ ಧರ್ಮದ ಸೇವೆಯನ್ನು ಮಾಡುತ್ತಿದೆ. ಈ ಶಾಖಾ ಮಠವನ್ನು ಕುಂಭಕೋಣ ಮಠವೆಂದೂ ಹೇಳುವುದು ವಾಡಿಕೆಯಲ್ಲಿದೆ. ಭಾರತದ ಪ್ರಸಿದ್ಧ ಕ್ಷೇತ್ರವಾದ ತಿರುಪತಿಯಲ್ಲಿ ಶ್ರೀ ರಾಮಾನುಜರ ಪ್ರವೇಶಕ್ಕೆ ಮುಂಚೆ ವೆಂಕಟೇಶ್ವರ ವ ಬಾಲಾಜಿಯೆಂದು ಮೆರೆಯುತ್ತಿದ್ದ ಶ್ರೀ ಸುಬ್ರಹ್ಮಣ್ಯನ ಸನ್ನಿಧಿಯಲ್ಲಿ ಆದಿ ಶಂಕರರು ಆಕರ್ಷಣ ಚಕ್ರವನ್ನು ಸ್ಥಾಪಿಸಿದುದರಿಂದ ಶ್ರೀ ರಾಮಾನುಜರ ನಂತರ ಆ ತಿರುಪತಿ ಕ್ಷೇತ್ರವು ವೆಂಕಟ್ರಮಣ ವ ಶ್ರೀನಿವಾಸ ದೇವರೆಂಬ ಹೆಸರಿನಿಂದ ವೈಷ್ಣವ ಕ್ಷೇತ್ರವಾಗಿ ಪರಿವರ್ತಿಸಲ್ಪಟ್ಟರೂ ಈಗಲೂ ಸಹಸ್ರ ಸಂಖ್ಯೆಯ ಜನರು ನಾನಾ ದೇಶಗಳಿಂದ ಅಲ್ಲಿಗೆ ಬಂದು ಲಕ್ಷಗಟ್ಟಲೆ ಹಣ ಅಲ್ಲಿ ಸುರಿಸುವುದು ಆ ಆಕರ್ಷಣ ಚಕ್ರದ ಪ್ರಭಾವದ ದ್ಯೋತಕವಾಗಿದೆ. ತಿರುಪತಿಯು ಶೈವಕ್ಷೇತ್ರ ಎಂಬುದನ್ನು ಈ ಕೆಳಗಿನ ದಾಖ್ಲೆಯಿಂದ ತಿಳಿಯಬಹುದು.

.....North Arcot District Manual (1880 edition) says : "There can be no reasonable doubt that originally the idol was worshipped as shiva, this is denied by none". But if there is scope for quarries like the above, it is because

of powerful propaganda and biased research, to prove the contrary.

Sri V.N Srinivasa Rao's contribution, Sawal-E-Jawab in the Quarterly Journal of the Hythic Society, Bangalore and his subsequent book Tirupathi Sri Venkateshwara Balaji (1949 Umadevan & Co, Madras) provide lot of impartial and weighty evidence regarding the irupathi deity. The Sawal-E-Jawab is a record of the answers by the Stanikas of Tirupathi to the questions of the East India Company, raised when the temple came under the jurisdiction of the Company Raj. The Stanikas being Vaisnavas could not have replied very freely, but somethings they said are very revealing.

One such answer is that Agastya and other sages worshipped this Lord as Shiva using Shaivas rites but that after the time of Tondaman, He came to be worshipped as Subramania until Sri Ramanuja affixed Gold Shanka and Chakra to Its hands and altered the mode of worship to vaikanasa type. But having been forbidden by God to continue the bilva archana & nagabharana, this was continued.

The Stanikas have also said that tradition has it that Sri Sankaracharya visited the shrine and installed Akarshana Chakra there which account for very valueable gift being offered to the shrine.

Sri Rao has addressed further evidence of their visit, where Sri Sankara installed a Gupta Linga also in this shrine and gave the diety the name Venkateswara. Sri Rao says that the name Srinivasa came to be popularised by the archakas only much later. This must have been done to avoid having to call the God Easwara.

Shankara has referred to this deity as Siva Sheshadri Shaila in his Dwadasha Stostra. Saiva saint Tirumular has addressed Siva as Venkatanatha. Other Tamil Saiva Saints also have been sung about this hill. This is one of Siva, visited by Skanda, says Skanda Purana. In the Sahasranama in use in Tirupati there are some names of Siva also.

**ಅರ್ಥ:** ಉತ್ತರ ಅರ್ಕಾಟು ಜಿಲ್ಲಾ ಡಿಸ್ಟ್ರಿಕ್ಟ್ ಮೇನ್ಯುವೇಲ್ (1880ರಲ್ಲಿ ಮುದ್ರಿತವಾದದ್ದು) ತಿರುಪತಿ ದೇವಸ್ಥಾನದ ವಿಗ್ರಹವು ಅತಿ ಮೊದಲು ಶಿವನೆಂದೇ ಅರ್ಚಿಸಲ್ಪಟ್ಟಿದೆ. ಇದನ್ನು ಯಾರೂ ಅಲ್ಲಗಳೆದವರಿಲ್ಲ. ಈ ವಿಷಯದಲ್ಲಿ ಬಲವಂತವಾದ ತನಿಕೆ ನಡೆದಾಗ ಈ ರೀತಿ ತಿಳಿಯಬಂತು :

ಬೆಂಗಳೂರು ಹಿತಿಕ್ ಸೊಸ್ಯಾಟಿಯ ಸಂಚಿಕೆಯಲ್ಲಿ ಶ್ರೀ ವಿ. ಶ್ರೀನಿವಾಸ ರಾಯರು ಬರೆದ 'ಸವಾಲ್ ಕೆ ಜವಾಬ್' (ಎಂಬ ಪ್ರಶ್ನೋತ್ತರ)ವೆಂಬುದರಿಂದ ತೆಗೆದುದಾಗಿದೆ. ನಮ್ಮ ದೇಶವು ಈಸ್ಟ್ ಇಂಡಿಯಾ ಕಂಪೆನಿಯ ಆಡಳಿತೆಗೆ ಬಂದೊಡನೆ ತಿರುಪತಿಯ ವೈಷ್ಣವ ಅರ್ಚಕರಾದ ಸ್ಥಾನಿಕರು ತಾವು ವೈಷ್ಣವ ರಾಗಿದ್ದರೂ ದೇವಸ್ಥಾನದ ದೇವರ ವಿಚಾರದಲ್ಲಿ ಈ ರೀತಿಯ ಸತ್ಯತೆಯನ್ನು ತಿಳಿಸಿದ್ದರು.

ಈ ದೇವಸ್ಥಾನದ ದೇವರನ್ನು ಅಗಸ್ತ್ಯರು ಮತ್ತು ಇನ್ನಿತರ ಋಷಿಗಳು ವೆಂಕಟೇಶ್ವರನೆಂಬ ಹೆಸರಿನಿಂದ ಶಿವನೆಂದು ಶೈವಾಗಮ ಪ್ರಕಾರ ಪೂಜಿಸುತ್ತಿದ್ದರೆಂದೂ, ತೊಂಡಮಾನನ ನಂತರ ಅದನ್ನು ಬಾಲಾಜೀ ಅಂದರೆ ಸುಬ್ರಹ್ಮಣ್ಯನೆಂದು ಪೂಜಿಸುತ್ತಿದ್ದರೆಂದೂ ರಾಮಾನುಜರು ಬಂದ ನಂತರ ಅದಕ್ಕೆ ಚಿನ್ನದ ಶಂಕ ಚಕ್ರಗಳನ್ನು ತೊಡಿಸಿ ಬಿಲ್ವಾರ್ಚನೆ ನಿಲ್ಲಿಸಿ ಅದರ ಮೇಲಿದ್ದ ನಾಗಾಭರಣವನ್ನು ತೆಗೆದು ಶ್ರೀನಿವಾಸ ಅಥವಾ ವೆಂಕಟರಮಣನೆಂಬ ಹೆಸರು ಇರಿಸಿ ವೈಖಾನಸ ಆಗಮ ಪ್ರಕಾರದ ಪೂಜೆ ಏರ್ಪಡಿಸಿದರೆಂದೂ ತಿಳಿಸಿದರು.

ಅಲ್ಲದೆ ಈ ದೇವಸ್ಥಾನಕ್ಕೆ ಶ್ರೀ ಆದಿ ಶಂಕರಾಚಾರ್ಯರು ದರ್ಶನವಿತ್ತ ಸಮಯದಲ್ಲಿ ಇಲ್ಲಿ ಆಕರ್ಷಣ ಚಕ್ರ ಒಂದನ್ನು ಸ್ಥಾಪಿಸಿ ದೇವಳದ ಮಹಿಮೆಯನ್ನು ಹೆಚ್ಚಿಸಿದ್ದರೆಂದೂ ಇಲ್ಲಿಯೇ ಶ್ರೀ ಶಂಕರರು, ಒಂದು ಗುಪ್ತ ಲಿಂಗವನ್ನು ಕೂಡ ಪ್ರತಿಷ್ಠಿಸಿದ್ದರೆಂದೂ ಆಮೇಲೆ ಆ ವಿಗ್ರಹಕ್ಕೆ ವೆಂಕಟೇಶ್ವರನೆಂಬ ಹೆಸರು ಇರಿಸಿದರೆಂದೂ ತಿಳಿಸಿದರು. ಅಲ್ಲಿಯ ದೇವರಿಗೆ ಶ್ರೀನಿವಾಸನೆಂಬ ಹೆಸರು ಬಹಳ ಇತ್ತೀಚೆಗೆ ಬಂದದ್ದೆಂದು ಕೂಡಾ ತಿಳಿಸಿದರು.

ಶ್ರೀ ಆದಿಶಂಕರರ 'ಶಿವಶೇಷಾದ್ರಿ ಶೈಲ'ವೆಂಬ ಅವರ ದ್ವಾದಶ ಸ್ತೋತ್ರದಲ್ಲಿ ಅಲ್ಲಿಯ ದೇವರನ್ನು 'ವೆಂಕಟನಾಥ'ನೆಂದೂ ಉಲ್ಲೇಖಿಸಿದ್ದಾರೆ. ತಮಿಳು ದೇಶದ 'ಶಿವಯೋಗಿ' ಎಂಬವರು ಕೂಡ 'ವೆಂಕಟನಾಥ'ನೆಂದು ಉಲ್ಲೇಖಿಸಿರುತ್ತಾರೆ. ಸ್ಕಂದಪುರಾಣ ಮತ್ತು ತಿರುಪತಿ ಸಹಸ್ರನಾಮದಲ್ಲೂ ಶಿವನ ಹೆಸರುಗಳು ಉಲ್ಲೇಖಿಸಲ್ಪಟ್ಟಿವೆ.

ಅದೇ ರೀತಿ ಶ್ರೀಶಂಕರರು ಕನ್ನಡ ಜಿಲ್ಲೆಯಲ್ಲಿಯೂ ಉಡುಪಿ, ಧರ್ಮಸ್ಥಳ, ಕೊಲ್ಲೂರು ಮತ್ತು ಸುಬ್ರಹ್ಮಣ್ಯ ಕ್ಷೇತ್ರಗಳನ್ನು ಸಂದರ್ಶಿಸಿ, ಅಲ್ಲಲ್ಲಿ ಕ್ಷೇತ್ರದ ಮಹಿಮೆಯನ್ನು ಹೆಚ್ಚಿಸಲು ಶ್ರೀಚಕ್ರ, ಶಿವಚಕ್ರಗಳನ್ನು ಸ್ಥಾಪಿಸಿ ಹೋಗಿರುವರೆಂಬ ಪ್ರತೀತಿ ಇದೆ. ಈ ಕ್ಷೇತ್ರಗಳೊಳಗೆ ಕೊಲ್ಲೂರು ಮೂಕಾಂಬಿಕಾ ಕ್ಷೇತ್ರದಲ್ಲಿ ಇದನ್ನು ಈಗಲೂ ಕಾಣಬಹುದು. ಬಾಕಿ ಕ್ಷೇತ್ರಗಳಲ್ಲಿ ಮಾಧ್ವರ ಪ್ರವೇಶ ಆದೊಡನೆ ಅವೆಲ್ಲಾ ಗುಪ್ತವಾಗಿ ಇರಿಸಲ್ಪಟ್ಟಿರಬಹುದು. ಶ್ರೀ ಸುಬ್ರಹ್ಮಣ್ಯ ಕ್ಷೇತ್ರಕ್ಕೆ ಶ್ರೀ ಆದಿಶಂಕರರು ಬಂದುದರ ವಿಚಾರದಲ್ಲಿ ಈ ಮೊದಲೇ ಆಧಾರಕೊಟ್ಟು ವಿವರಿಸುತ್ತೇನೆ. ಉಡುಪಿಗೆ, ಧರ್ಮಸ್ಥಳಕ್ಕೆ ಬಂದ ವಿವರವು ಈ ಕೆಳಗಿನ ಆಧಾರಗಳಿಂದ ತಿಳಿಯಬಹುದಾಗಿದೆ. ಶ್ರೀ ಶೃಂಗೇರಿ ಮಠದ ಗುರುವಂಶ ಕಾವ್ಯ ಎಂಬ ಪುಸ್ತಕದ ೩ನೇ ಅಧ್ಯಾಯದ ೧೦ ಶ್ಲೋಕ "ಸತೌ ಲವ ಗ್ರಾಮವರಂ ಪ್ರತೀತಂ ಶ್ರೀರೌಪ್ಯ ಪೀಠಾಖ್ಯ ಪುರಂ ಪ್ರಪೇದೆ । ಶ್ರೀ ಮಾನನಂತೇಶ್ವರ ಮರ್ಚಯಿತ್ವಾ ಚಂದ್ರೇಶ್ವರಂ ಚಾರು ಮುನೀಂದ್ರ ಆರ್ಚತ್" ಇದರಲ್ಲಿ ತುಳು ಗ್ರಾಮವಾದ ರೌಪ್ಯ ಪೀಠವೆಂಬ ಉಡುಪಿ ಪಟ್ಟಣದಲ್ಲಿ ಶ್ರೀ ಅನಂತೇಶ್ವರನನ್ನೂ ಶ್ರೀ ಚಂದ್ರೇಶ್ವರನನ್ನೂ ಅರ್ಚಿಸಿದರೆಂದೂ ವ್ಯಕ್ತವಾಗುತ್ತದೆ. ಅದೇ ರೀತಿ ಧರ್ಮಸ್ಥಳಕ್ಕೆ ಚಿತ್ತೈಸಿದ ಆದಿಶಂಕರರೇ ಮಂಜುನಾಥೇಶ್ವರನನ್ನು ಪ್ರತಿಷ್ಠಿಸಿರುತ್ತಾರೆಂದು, ಜಯಪುರ ಶ್ರೀ ವಿಶ್ವನಾಥ ರಾಜಗೋಪಾಲ ಶರ್ಮ ಎಂಬವರ ಸಂಪಾದಕತ್ವದಿಂದ ಪ್ರಕಟಿಸಲ್ಪಟ್ಟ **'ಶ್ರೀಮಜ್ಜಗದ್ಗುರು ಶಂಕರ ಮಠಗಳ ವಿಮರ್ಶೆ'** ಎಂಬ ಪುಸ್ತಕದ ಪುಟ 63ರಲ್ಲಿ ಅಧ್ಯಾಯ 6ರಲ್ಲಿ ವಿವರಿಸಿದ ಹಿಂದೀ ವಿವರಣೆಯಲ್ಲಿ ಈ ರೀತಿ ವಿವರಿಸಲ್ಪಟ್ಟದ್ದು ಗಮನಾರ್ಹವಾಗಿದೆ.

"ಕರ್ನಾಟಕ ಮೆ ಧರ್ಮಸ್ಥಲ ಏಕ ಪವಿತ್ರ ತೀರ್ಥ ಸ್ಥಾನ ಹೈ । ಯಹಾಂ ಕಾ ಪುರಾತನ ಪ್ರಸಿದ್ಧ ಮಂದಿರ ಮಂಜುನಾಥೇಶ್ವರ ಕಾ ಹೈ ॥ ಯಹ ದಕ್ಷಿಣ ಕನ್ನಡ ಜಿಲ್ಲೆ ಮೆ ಹೈ । ಪೂರ್ವ

ಕಾಲ ಮೆ ಇಸ ಮಂದಿರ ಮೆ ಮಂಜುನಾಥೇಶ್ವರ ಲಿಂಗ ಕೀ ಸ್ಥಾಪನಾ ಆದಿ ಶಂಕರಾಚಾರ್ಯ ನೇ ಕೀ ಥೀ । ಕಿಂತು 1635 ಮೆ ಶ್ರೀ ವಾದಿರಾಜ ಸ್ವಾಮಿ ಪಾದ ಜೋ ಉಡುಪಿ ಕೆ ಸೋದೆ ಮಠಸೇ ಆಯೇ ಥೆ ಇನ್‌ಕಿ ಉಪಾಸನಾ ಕೀ ಓರ ತಬಸೆ ಯಹಾಂ ಕೀ ಉಪಾಸನಾ ಶ್ರೀ ಮಧ್ವಾಚಾರ್ಯ ಕೆ ದ್ವೈತ ಮತಾನುಸಾರ ಹೋತಿ ಹೈ । ವಹಾಂ ಸೆ ಅನೇಕ ಶಿಷ್ಯೋಂ ಸಹಿತ ಆಪ ಮಧ್ಯಾರ್ಜುನ ಸೀಮಾ (ತಂಜಾವೂರು ಜಿಲಾ) ಪಹುಂಚೆ" ಈ ಮೇಲಿನ ವಾಕ್ಯಗಳಿಂದ ಆದಿಶಂಕರರು ಧರ್ಮಸ್ಥಳದಲ್ಲಿ ಮಂಜುನಾಥೇಶ್ವರ ಲಿಂಗವನ್ನು ಪ್ರತಿಷ್ಠಿಸಿ ತಂಜಾವೂರು ಜಿಲ್ಲೆಯ ಮಧ್ಯಾರ್ಜುನ (ತಿರುಡಮರದೂರು)ಕ್ಷೇತ್ರಕ್ಕೆ ಚಿತ್ತೈಸಿದರು ಎಂದೂ, ಅಲ್ಲದೆ 1635ರಲ್ಲಿ ಉಡುಪಿಯ ಸೋದೆ ಮಠದ ವಾದಿರಾಜ ಸ್ವಾಮಿಗಳು ಧರ್ಮಸ್ಥಳಕ್ಕೆ ಬಂದು ಆ ಶಿವಾಲಯವನ್ನು ವೈಷ್ಣವ ಪದ್ಧತಿಯ ಉಪಾಸನಾ ಕ್ರಮಕ್ಕೆ ಪರಿವರ್ತಿಸಿ ಶ್ರೀ ಮಧ್ವಾಚಾರ್ಯರ ದ್ವೈತ ಸಂಪ್ರದಾಯವನ್ನು ಅಲ್ಲಿ ಬರುವಂತೆ ಮಾಡಿದರೆಂದೂ ಕೂಡ ವ್ಯಕ್ತವಾಗುತ್ತದೆ. ಶ್ರೀ ಮಂಜುನಾಥೇಶ್ವರ ಲಿಂಗವನ್ನು ಆದಿಶಂಕರರೇ ಪ್ರತಿಷ್ಠಿಸಿದ್ದರಿಂದ ವಾದಿರಾಜರಿಗೆ ಆ ಲಿಂಗವನ್ನು ತೆಗೆದು ತನ್ನ ವೈಷ್ಣವ ಮೂರ್ತಿಯನ್ನು ಇಡಲು ಪ್ರತಿಷ್ಠಾ ಮಹತ್ವದಿಂದ ಸಾಧ್ಯವಾಗಲಿಲ್ಲ. ಆದರ ಬದಲಿಗೆ ಅವರು ತನ್ನ ಮಾಧ್ವ ಮತದವರನ್ನೇ ಅರ್ಚಕರನ್ನಾಗಿ ಅಲ್ಲಿ ಇಟ್ಟು ಲಿಂಗದ ಬದಿಯಲ್ಲಿ ಶಾಲಿಗ್ರಾಮಗಳನ್ನು ಇರಿಸಿ ಶೈವಾಗಮವನ್ನು ನಿಲ್ಲಿಸಿ ಈಶ್ವರನಿಗೆ ಪ್ರಿಯವಾದ ಬಿಲ್ವ, ವಿಭೂತಿಗಳ ಬಳಕೆಯನ್ನು ತಪ್ಪಿಸಿ, ತುಲಸೀ ಗಂಧ ಪ್ರಸಾದಗಳ ವಿತರಣಾ ಕ್ರಮವನ್ನು ಏರ್ಪಡಿಸಿ ಅಜ್ಞ ಭಕ್ತಾದಿಗಳಿಗೆ ಮಂಜುನಾಥನ ಪ್ರಸಾದವೆಂದೇ ಹೇಳಿ ಜನತೆಯನ್ನು ವಂಚಿಸುವ ಪ್ರಕರಣವನ್ನು ಏರ್ಪಡಿಸಿದರೆಂದು ತಿಳಿಯ ಬೇಕಾಗುತ್ತದೆ. ಶ್ರೀ ವಾದಿರಾಜರ ಮೇಲಿನ ಕರ್ತವ್ಯದಿಂದ ಅವರೇ ಮಂಜುನಾಥನನ್ನು ಪ್ರತಿಷ್ಠಿಸಿದರೆಂದೂ ಕೂಡಾ ಆ ಮೇಲಿನ ಮಾಧ್ವ ಯತಿಗಳು ಪ್ರಚಾರಗೊಳಿಸಿದರು. ಲಿಂಗ ಪೂಜಾ ದ್ವೇಷಿಗಳೂ, ಶಿವನು ವಿಷ್ಣುವಿನ ಒಂಭತ್ತನೇ ತರಗತಿಯ ಕೆಳಮಟ್ಟದ ವಿಷ್ಣುವಿನ ಕಿಂಕರನೆಂದು ಹೇಳುವ ಶ್ರೀ ವಾದಿರಾಜರು ಧರ್ಮಸ್ಥಳದಲ್ಲಿ ಮಂಜುನಾಥೇಶ್ವರ ಲಿಂಗವನ್ನು ಪ್ರತಿಷ್ಠಿಸಿದರು ಎಂಬ ಮಾತಿಗೆ ಏನಾದರೂ ಅರ್ಥವಿದೆಯೇ? ವಾಚಕರೇ ಊಹಿಸಿರಿ! ಉಡುಪಿ ಸೋದೆ ಮಠದ ಸ್ವಾಮಿಗಳು ಹೇಳಿದ ಸಾಕ್ಷಿಯ ವಿವರ :

O.P.No. 105ರ 1949ರ ಜಜ್ಮೆಂಟಿನ ಮೇಲೆ ಹಿಂದು ರಿಲೀಜಿಯಸ್ ಎಂಡೋಮೆಂಟ್ ಕಮಿಶನರು ಧರ್ಮಸ್ಥಳ ಹೆಗ್ಗಡೆಯ ಮೇಲೆ ಧರ್ಮಸ್ಥಳ ಮಂಜುನಾಥೇಶ್ವರ ದೇವಾಲಯದ ವಿಚಾರದಲ್ಲಿ ಬೆಂಗಳೂರು ಹೈಕೋರ್ಟಿನಲ್ಲಿ ಮಾಡಿದ ಅಪೀಲ್. R.A. No. 165-1957ರ ಮೇಲೆ ತಾರೀಕು 30-8-1968ರಲ್ಲಿ ಕೊಟ್ಟ ಜಜ್‌ಮೆಂಟಿನಲ್ಲಿ R.W. ಹನ್ನೊಂದನೇ ಸಾಕ್ಷಿದಾರ ಉಡುಪಿ ಸೋದೆ ಮಠದ ವಿಶ್ವೋತ್ತಮ ತೀರ್ಥ ಸ್ವಾಮಿಗಳು ಕೊಟ್ಟ ಹೇಳಿಕೆಯಲ್ಲಿ

R.W. 11. Vishwothama Theertha Swami of Sole Mutt Udupi has Stated that according to the Dwaitha Philosophy, Shiva or Rudra occupies the Ninth place from Vishnu and Shiva is equal in status to Garuda and Shesha who occupy the 7th and 8th place and that Shiva is worshipped by Vaishnavaits as a DASA or Subordinate diety of Vishnu.

**ಅರ್ಥ**: ಶಿವನನ್ನು ವಿಷ್ಣುವಿನಿಂದ ಕೆಳಗೆ 7ನೇ ಮತ್ತು 8ನೇ ಸ್ಥಾನಗಳನ್ನು ಹೊಂದಿದ

ಗರುಡ ಮು್ತ ಶೇಷರಿಗೆ ಸಮಾನವಾದ 9ನೇ ಸ್ಥಾನವನ್ನು ಹೊಂದಿದ ವಿಷ್ಣುವಿನ **ದಾಸ ವ ಕೆಲಸದವನ** ಸ್ಥಾನದಲ್ಲಿ ಇಟ್ಟು ವೈಷ್ಣವರು ಪೂಜಿಸುತ್ತಾರೆ ಎಂದಿದೆ.

ಶ್ರೀ ಸುಬ್ರಹ್ಮಣ್ಯ ಕ್ಷೇತ್ರದ ಈ ಶಾಖಾ ಮಠದಲ್ಲಿ 1845ರ ವರೆಗೆ ಶೃಂಗೇರಿ ಮಠದವರಿಂದಲೇ ನೇಮಿಸಲ್ಪಟ್ಟ ಅರ್ಚಕರಿಂದಲೇ ಪೂಜಾದಿಗಳು ನಡೆದುಬರುತ್ತಿತ್ತೆಂದೂ ಆಗಿನ ಅರ್ಚಕರೇ ಕನ್ನಡ ಜಿಲ್ಲೆಯ ಧರ್ಮಾಧಿಕಾರವನ್ನು ನಡೆಸುತ್ತಿದ್ದರೆಂದೂ ಅವರ ಮುಖಾಂತರವೇ ಜಿಲ್ಲೆಯ ಶಿಷ್ಯ ವರ್ಗದವರ ದೀಪಾರಾಧನೆ ಕಾಣಿಕೆ, ತಪ್ಪು ಒಪ್ಪು ಕಾಣಿಕೆ, ಗುರುಚರಣ ಕಾಣಿಕೆ ಇತ್ಯಾದಿಗಳು ವಸೂಲು ಆಗುತ್ತಿದ್ದು ಶಿಷ್ಯ ವರ್ಗದವರಿಗೆ ಸದಾಚಾರ ಸದ್ಧರ್ಮ ಬೋಧನೆ ಕೂಡಾ ನಡೆಯುತ್ತಿತ್ತೆಂದು ಹಳೇ ದಾಕ್ಲೆಗಳಿಂದ ವ್ಯಕ್ತವಾಗುತ್ತದೆ. O.S.No. 279 of 1875 ಪ್ರತಿವಾದಿ ಕಡೆ 6ನೇ ಸಾಕ್ಷಿದಾರ 48 ವರ್ಷ ಪ್ರಾಯದ ವೆಂಕಟ್ರಮಣ ಶಾಸ್ತ್ರಿಯ ವಿಚಾರಣೆ. ಇದನ್ನು ಈ ಪುಸ್ತಕದ ಅಂತ್ಯದಲ್ಲಿ ಪ್ರಕಟಿಸಿದ ದಾಕ್ಲೆಗಳಲ್ಲಿ ಓದಬಹುದು.

ಕನ್ನಡ ಜಿಲ್ಲೆಯ ಹೆಚ್ಚಿನ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರು ಒಂದು ಕಾಲದಲ್ಲಿ ಸ್ಮಾರ್ತ ಸಂಪ್ರದಾಯದ ಅಂದರೆ ಶಿವ, ವಿಷ್ಣುಗಳೆಂಬ ದೇವರು ಗಳೊಳಗೆ ಅಭೇದವನ್ನು ಸಾರುವ ವಿಭೂತಿಧಾರಿಗಳೇ ಆಗಿದ್ದರು. ಬ್ರಾಹ್ಮಣರೊಳಗೆ ಶ್ರೀ ಸುಬ್ರಹ್ಮಣ್ಯ ಕ್ಷೇತ್ರವನ್ನೇ ತಮ್ಮ ಮೂಲ ಸ್ಥಳವಾಗಿ ಇಟ್ಟುಕೊಂಡು ಸುಬ್ರಹ್ಮಣ್ಯ ಬ್ರಾಹ್ಮಣರೆಂದು ಹೇಳಲ್ಪಡುವ ಸ್ಥಳೀಯ ಸ್ಮಾರ್ತರಾದ ಸ್ಥಾನಿಕ ಶಿವ ಬ್ರಾಹ್ಮಣರೂ, ಹೊರಗಿನಿಂದ ಬಂದು ನೆಲೆಸಿದ, ಹವೀಕ, ಕೋಟ, ಶಿವಳ್ಳಿ, ದೇಶಸ್ಥ, ಕರಾಡ, ಚಿತ್‌ಪಾವನ ಮೊದಲಾದ ಬ್ರಾಹ್ಮಣ ವರ್ಗದವರೂ ಉತ್ತರ ದೇಶದಿಂದ ಬಂದ ಸಾರಸ್ವತ, ಗೌಡ ಸಾರಸ್ವತ ಬ್ರಾಹ್ಮಣರೂ, ವಿಶ್ವಕರ್ಮ ಬ್ರಾಹ್ಮಣರೂ, ಬ್ರಾಹ್ಮಣೇತರರಾದ ರಾಮ ಕ್ಷತ್ರಿಯರೂ, ಓಜಿಯವರೂ, ಬಂಟರೂ, ಬಿಲ್ಲವರೂ, ಮೊಗವೀರರೂ, ಗೌಡರೂ, ಗಾಣಿಗರೂ, ಮಾರಾಠಿಯವರೂ, ಸಮಗಾರರೂ ಮತ್ತು ಹರಿಜನ ಗಿರಿಜನ ಇತ್ಯಾದಿ ವರ್ಗದವರೂ ಅಲ್ಲದೆ ಇನ್ನೂ ಉಳಿದ ಅನೇಕ ವರ್ಗದವರೂ ಕೂಡಾ ಶ್ರೀ ಮಧ್ವಾಚಾರ್ಯರ ನೂತನ ಮಾಧ್ವ ಮತವು ಕನ್ನಡ ಜಿಲ್ಲೆಯ ಉಡುಪಿಯಲ್ಲಿ ಉದ್ಭವವಾಗುವ ಮುಂಚೆ ಎಲ್ಲರೂ ಭಸ್ಮಧಾರಿಗಳಾದ ಸ್ಮಾರ್ತರಾಗಿಯೇ ಇದ್ದು ಶ್ರೀ ಶೃಂಗೇರಿ ಮಠದ ಶಿಷ್ಯರಾಗಿಯೇ ಇದ್ದರು. ಶ್ರೀ ಮಧ್ವಾಚಾರ್ಯರ ನಂತರ ಬ್ರಾಹ್ಮಣರಲ್ಲಿ ಹೊರಗಿನಿಂದ ಬಂದ ಶಿವಳ್ಳಿ ಪಂಗಡದವರಲ್ಲಿ ಮಾತ್ರ ಹೆಚ್ಚಿನವರು ನೂತನ ದ್ವೈತ ಸಂಪ್ರಪದಾಯದ ತಪ್ತ ಮುದ್ರಾಧಾರಿಗಳಾದರು. ಶ್ರೀ ವಾದಿರಾಜ ಸ್ವಾಮಿಗಳ ಕಾಲದಲ್ಲಿ ಬ್ರಾಹ್ಮಣೇತರರಲ್ಲಿ ಕೆಲವು ಮೊಗವೀರರು, ಬಂಟರು, ಜೈನರ ತಪ್ತ ಮುದ್ರಾಧಾರಣ ವಿಧಿಯಿಂದ ಬ್ರಾಹ್ಮಣರಾಗಿ ಪರಿವರ್ತಿಸಲ್ಪಟ್ಟದ್ದರಿಂದ ಮಾಧ್ವರ ಸಂಖ್ಯೆಯು ಜಿಲ್ಲೆಯಲ್ಲಿ ಹೆಚ್ಚಾಯಿತು. ಈ ಕಾರಣದಿಂದಲೇ ಮಾಧ್ವ ಬ್ರಾಹ್ಮಣರಲ್ಲಿ ತ್ರಿಕರ್ಮಿಗಳು, ತಂತುಮಾತ್ರ ಬ್ರಾಹ್ಮಣರು, ಭೋಜನ ಪ್ರತಿಭೋಜನ ವರ್ಜ್ಯರುಗಳೆಂಬ ಭೇದಗಳು ಈಗಲೂ ಕಾಣುತ್ತಿವೆ. ಈ ಶಿವಳ್ಳಿ ಬ್ರಾಹ್ಮಣರು ತಾವು ಐಚ್ಛತ್ರದಿಂದ ಬಂದು ಇಲ್ಲಿ ನೆಲೆಸಿದವರೆಂದೂ ಮಯೂರ ವರ್ಮನು ಇವರನ್ನು ಕರೆಸಿಕೊಂಡು ಬಂದದ್ದೆಂದೂ ಇವರು ತುಳುನಾಡಿಗೆ ಬರುವ ಮುಂಚೆ ತುಳುನಾಡು ಅಬ್ರಾಹ್ಮಣ್ಯ ದೇಶವಾಗಿತ್ತೆಂದೂ ಹೇಳಿಕೊಳ್ಳುತ್ತಾರೆ. ಆದರೆ ಆದಿ ಶಂಕರಾಚಾರ್ಯರು ತುಳುನಾಡಿಲ್ಲಿ ಸಂಚರಿಸುವಾಗಲೇ ಸುಬ್ರಹ್ಮಣ್ಯ ಉಡುಪಿ, ಕೊಲ್ಲೂರು, ಪೊಳಲಿ ಇತ್ಯಾದಿ ಅನೇಕ ಪುರಾತನ ದೇವಾಲಯಗಳು ಇತ್ತೆಂದು ಉಲ್ಲೇಖಗಳಿವೆ.

ಅಲ್ಲದೆ ಕನ್ನಡ ಜಿಲ್ಲೆಯಲ್ಲಿ ಅನೇಕ ಅತಿ ಪುರಾತನ ದೇವಾಲಯಗಳನ್ನು ನಾವು ಕಾಣುವಾಗ ಬ್ರಾಹ್ಮಣರಿಲ್ಲದ ಈ ತುಳುನಾಡಿನಲ್ಲಿ ಈ ಪುರಾತನ ದೇವಳಗಳಲ್ಲಿ ಯಾರು ಅರ್ಚಿಸುತ್ತಿದ್ದರು? ಮಯೂರ ವರ್ಮನ ಆಳ್ವಿಕೆಗೆ ಮುಂಚೆ ಇಲ್ಲಿ ದೇವಾಲಯಗಳು ಇರಲಿಲ್ಲವೇ? ನದಿಗಳೂ ಕ್ಷೇತ್ರಗಳೂ ಇರುವಾಗ ದೇವಾಲಯಗಳು ಇದ್ದಿರಲೇಬೇಕಲ್ಲವೇ? ಅವುಗಳ ಅರ್ಚಕರಾಗಿ ಅವುಗಳಿಗೆ ಸಂಬಂಧಪಟ್ಟ ಬ್ರಾಹ್ಮಣರೂ ಇದ್ದಿರಲೇಬೇಕು. ಈ ರೀತಿಯ ಪ್ರಚಾರವನ್ನು ಮಾಧ್ವರು ತಮ್ಮ ಶ್ರೇಷ್ಠತೆಯನ್ನು ಶೃತಪಡಿಸಲು ಮತ್ತು ಸ್ಥಳೀಯ ಸ್ಮಾರ್ತ ಬ್ರಾಹ್ಮಣರನ್ನು ಅವಹೇಳನ ಮಾಡಲು ಕಟ್ಟಿದ ಕಟ್ಟುಕತೆಗಳಾಗಿವೆ ಎಂಬುದನ್ನು ಇದರಿಂದ ನಿಶ್ಚಯಿಸಬಹುದಾಗಿದೆ.

ಗೌಡ ಸಾರಸ್ವತ ಬ್ರಾಹ್ಮಣರಲ್ಲಿ ಕೆಲವರು ಮಾಧ್ವರಾಗಿ ಮತಾಂತರಿಸ ಲ್ಪಟ್ಟರೂ ಕಾರಣಾಂತರದಿಂದ ಅವರು ಉಡುಪಿಯವರ ಗುರುತ್ವವನ್ನು ವಹಿಸಿ ಕೊಳ್ಳದೆ ತಮ್ಮದೇ ಆದ ಯೋಗ್ಯ ಗುರುಗಳನ್ನು ಆರಿಸಿಕೊಂಡು ಕಾಶೀ ಮಠ ಮತ್ತು ಗೋಕರ್ಣ ಮಠಗಳ ಶಿಷ್ಯರಾದರು. ಆದರೂ ಅವರು ವೇದ ಧರ್ಮವನ್ನು ಬಿಡಲಿಲ್ಲ. ಗೌಡಸಾರಸ್ವತರ ಕೈವಲ್ಯ (ಕೌಳೀ) ಮಠವೂ ಅದರ ಶಿಷ್ಯರೂ ಈಗಲೂ ಸ್ಮಾರ್ತ ಸಂಪ್ರದಾಯದ ಭಸ್ಮಧಾರಿಗಳಾಗಿಯೇ ಉಳಿದಿದ್ದಾರೆ. ಸಾರಸ್ವತರು ಈಗಲೂ ಚಿತ್ರಾಪುರ ಮಠದ ಶಿಷ್ಯರಾಗಿ ಸ್ಮಾರ್ತ ಸಂಪ್ರದಾಯದವರಾಗಿಯೇ ಇದ್ದು ವೇದ ಧರ್ಮವನು, ಅನುಸರಿಸಿ ಬರುತ್ತಾರೆ. ಕನ್ನಡ ಜಿಲ್ಲೆಯಲ್ಲಿ ನೂರಕ್ಕೆ 95ರಷ್ಟು ಹಳೇ ದೇವಾಲಯಗಳು ಶಿವ, ದುರ್ಗಾ, ಗಣಪತಿ, ಸುಬ್ರಹ್ಮಣ್ಯ ಇತ್ಯಾದಿ ಶೈವ ಸಂಬಂಧವಾದವುಗಳೇ ಆಗಿ ಇರುವುದರಿಂದ ಮೇಲಿನ ಹೆಚ್ಚಿನ ಪಂಗಡದವರು ಸ್ಮಾರ್ತರಾಗಿಯೇ ಇರಲು ಕಾರಣವೂ ಆಗಿದೆ. ಮಾಧ್ವರ ಸಂಖ್ಯೆಯು ಬರೆ ಉಡುಪಿ, ಕಾರ್ಕಳ, ಮಂಗಳೂರು, ಪುತ್ತೂರು ತಾಲೂಕುಗಳಲ್ಲಿ ಮಾತ್ರ ಹೆಚ್ಚಿನ ಸಂಖ್ಯೆಯಲ್ಲಿದೆ. ಕಾಸರಗೋಡಿನಲ್ಲಿರುವ ಕೆಲವು ಶಿವಳ್ಳಿಯವರೂ ಈಗಲೂ ಸ್ಮಾರ್ತ ಸಂಪ್ರದಾಯದವರಾಗಿದ್ದರೂ ಭಾಗವತ ಸಂಪ್ರದಾಯವಾದಿಗಳೆಂದು ಹೇಳಿಕೊಂಡು ಮಾಧ್ವರ ಬೆಂಬಲಿಗರಾಗಿ ಮುದ್ರೆ ಮತ್ತು ವಿಭೂತಿಧಾರಿಗಳಾಗಿ ಇದ್ದಾರೆ. ಕಾಸರಗೋಡು ತಾಲೂಕಿನ ಧನವಂತ ಎಡನೀರು ಮಠವು ಶೃಂಗೇರಿ ಮಠದ ಶಿಷ್ಯ ವರ್ಗಕ್ಕೆ ಸೇರಿದ ಶಾಖಾ ಮಠವಾಗಿತ್ತು. ಆದರೆ ಆ ಮಠದಲ್ಲಿ ಈಗ ಶಿವಳ್ಳಿ ಬ್ರಾಹ್ಮಣರೊಬ್ಬರು ಯತಿಗಳಾಗಿದ್ದಾರೆ. ಅವರು ಶೃಂಗೇರಿ ಮಠಕ್ಕೂ ಉಡುಪಿಯ ಮಾಧ್ವ ಮಠಗಳಿಗೂ ಅವರವರಿಗೆ ಬೇಕಾಗುವಂತೆ ವರ್ತಿಸಿ ಕೊಳ್ಳುತ್ತಾರೆ. ಹೇಗಿದ್ದರೂ ಆದಿಯಲ್ಲಿ ಇವರ ಮಠವು ಶೃಂಗೇರಿ ಸಂಸ್ಥಾನದ ಶಿಷ್ಯ ವರ್ಗಕ್ಕೆ ಸೇರಿದ್ದೆಂದೂ, ತಮ್ಮದು ತೋಟಕಾಚಾರ್ಯ ಪರಂಪರೆ ಎಂದೂ ಒಪ್ಪಿಕೊಳ್ಳುತ್ತಾರೆ. ಕಲ್ಯಾಣಪುರದಿಂದ ಉತ್ತರಕ್ಕೆ ಇರುವ ಹೆಚ್ಚಿನ ಶಿವಳ್ಳಿ ಬ್ರಾಹ್ಮಣರು ಈಗಲೂ ಸ್ಮಾರ್ತರಾಗಿಯೆ ಉಳಿದು ಹಂಗಾರ ಕಟ್ಟೆ ಹತ್ತಿರ ಇರುವ ಬಾಳ ಕುದುರು ಎಂಬ ಸ್ಮಾರ್ತ ಮಠದ ಶಿಷ್ಯ ವರ್ಗದವರಾಗಿ ಶ್ರೀ ಶೃಂಗೇರಿ ಮಠದ ಗುರುತ್ವವನ್ನು ಒಪ್ಪಿಕೊಂಡು ವೈದಿಕ ಧರ್ಮಾನುಯಾಯಿಗಳಾಗಿರುತ್ತಾರೆ. ಇದನ್ನೆಲ್ಲಾ ವಿಮರ್ಶಿಸುವಾಗ ಈ ಮಾಧ್ವರ ವ್ಯಾಪಕತೆಯು ಈ ಜಿಲ್ಲೆಯ ದೃಷ್ಟಿಯಿಂದ ಹೆಚ್ಚಿನ ಮಟ್ಟಿಗೆ ಇಲ್ಲವೆಂದೇ ಹೇಳಬಹುದು. ಆದರೆ ಈ ಕನ್ನಡ ಜಿಲ್ಲೆಯ ಮಾಧ್ವರು ಪಾಕಕುಶಲರೂ, ವ್ಯಾಪಾರ ಕುಶಲರೂ, ಆದುದರಿಂದ ''**ಉಡುಪಿ ಶಿವಳ್ಳಿ ಬ್ರಾಹ್ಮಣರ ಹೊಟೇಲು**'' ಎಂಬ ಹೆಸರಿನಿಂದ ಹೆಚ್ಚಿನ ಪಟ್ಟಣಗಳಲ್ಲಿ ಊಟದ ಮತ್ತು ಕಾಫಿ ಹೊಟೇಲುಗಳನ್ನು ತೆರೆದು ಅವುಗಳ ಸಂಪಾದನೆಯಿಂದ ಧನಿಕರಾಗಿ ಮೆರೆದುಕೊಂಡು

ಬಂದುವರಿಂದ ಇವರ ವ್ಯಾಪಕತೆಯು ಜಿಲ್ಲೆಯಲ್ಲೂ ಭಾರತದ ಇತರ ಕಡೆಗಳಲ್ಲೂ ಹೆಚ್ಚಿತು.

ಕನ್ನಡ ಜಿಲ್ಲೆಯ ಮಾಧ್ವರಿಗೂ ಉತ್ತರಾದಿ ಮಠವಾದ ವ್ಯಾಸರಾಯ ಮಠದ ಶಿಷ್ಯವರ್ಗದ ಕರ್ನಾಟಕದ ಇತರ ಕಡೆಗಳಲ್ಲಿರುವ ಮಾಧ್ವರಿಗೂ ತುಂಬಾ ವ್ಯತ್ಯಾಸವಿದೆ. ಅವರು ಸಾಧಾರಣ ಶ್ರೀ ಮಧ್ವಾಚಾರ್ಯರ ತತ್ವವನ್ನು ಕ್ರಮವರಿತು ಪಾಲಿಸುತ್ತಾರೆ. ಅವರು ಕನ್ನಡ ಜಿಲ್ಲೆಯ ಮಾಧ್ವರಂತೆ ಶಿವಾಲಯ ಗಳನ್ನು ವೈಷ್ಣವ ದೇವಾಲಯಗಳನ್ನಾಗಿ ಪರಿವರ್ತಿಸಲು ತೊಡಗಿದ್ದು ಹೆಚ್ಚಿನ ಮಟ್ಟಿಗೆ ತಿಳಿದು ಬರುವುದಿಲ್ಲ. ಅವರಲ್ಲಿ ಮಡಿ ಮೈಲಿಗೆ ಆಚರಣೆ ತುಂಬಾ ಇದೆ. ಅವರಲ್ಲಿ ಕೆಲವರು ಈಗಲೂ ಶೃಂಗೇರಿ ಮಠವು ವೈಷ್ಣವ ಮತವನ್ನು ಒಳಗೊಂಡ ಶಣ್ಮತ (ಶೈವ, ವೈಷ್ಣವ, ಶಾಕ್ತೆಯು, ಗಾಣಪತ್ಯ, ಸೌರ ಮತ್ತು ಸ್ಕಾಂದ) ಸ್ಥಾಪನಾಚಾರ್ಯ ತತ್ವ ಪ್ರಕಾರ ವೈಷ್ಣವ ಮತದ ಸ್ಥಾಪನೆ ಕೂಡ ಆದಿಶಂಕರರಿಂದಲೇ ಸ್ಥಾಪಿಸಲ್ಪಟ್ಟಿದೆ ಎಂಬ ಭಾವನೆಯಿಂದ ಭೇದಭಾವನೆ ಇಟ್ಟು ಕೊಳ್ಳದೆ ಶೃಂಗೇರಿ ಮಠವನ್ನು ತಮ್ಮ ಗುರುಮಠವೆಂದು ಒಪ್ಪಿಕೊಳ್ಳುತ್ತಾರೆ.

ವಿಜಯನಗರ ಸಾಮ್ರಾಜ್ಯವು ಅಳಿದುಹೋದುದು ಕ್ರಿ.ಶ. 1644ರಲ್ಲಿ ಆದರ ಹೆಚ್ಚಿನ ಬಲವು 1582ರಲ್ಲಿಯೇ ಕುಂದಿಹೋದುದರಿಂದ ವಿಜಯ ನಗರದ ಮಾಂಡಲೀಕರಾಗಿ ನೇಮಕ ಹೊಂದಿದ ಕೆಳದಿ ನಾಯಕರು 1582ರಲ್ಲೇ ಸ್ವತಂತ್ರರಾದರು. ಅದೇ ಸಮಯದಲ್ಲಿ ಪೋರ್ತುಗೀಸರು ಬಲವಾಗಿ ನೆಲೆ ಗೊಂಡರು. ಕನ್ನಡ ಜಿಲ್ಲೆಯ ಸಣ್ಣ ಸಣ್ಣ ಪಾಳೇಯಗಾರರಾದ ಬಂಗರು, ಚೌಟರು, ಅಜಿಲರು, ಬಲ್ಲಾಳರು ಸ್ವತಂತ್ರತೆಯನ್ನು ಸ್ಥಾಪಿಸಿಕೊಂಡು ಅವರೊಳಗೆ ಜಗಳಾಡಿಕೊಳ್ಳುತ್ತಿದ್ದರು. ಈ ಅರಾಜಕತ್ವದ ಸಂದರ್ಭದಲ್ಲಿ ಶ್ರೀ ಶಂಕರರನ್ನೂ ಅದ್ವೈತವನ್ನೂ ವಿರೋಧಿಸುವ ಉಡುಪಿಯ ಸೋದೆ ಮಠದ ಶ್ರೀ ವಾದಿರಾಜ ಸ್ವಾಮಿಗಳು ಕೆಲವು ಪಾಳೆಗಾರರ ಸಹಾಯದಿಂದ ಪ್ರಬಲರಾಗಿ ಜಿಲ್ಲೆಯ ಹೆಚ್ಚು ಉತ್ಪತ್ತಿ ಇರುವ ಕೆಲವು ಶಿವಾಲಯಗಳನ್ನು ಆಕ್ರಮಿಸಿ ಶೃಂಗೇರಿ ಮಠದ ಶಿಷ್ಯರಾದ ಆ ದೇವಾಲಯಗಳ ಅರ್ಚಕ ಮತ್ತು ಆಡಳಿತೆದಾರರಾದ ಸ್ಥಳದ ಸ್ಮಾರ್ತ ಬ್ರಾಹ್ಮಣರನ್ನು ಹೊರಹಾಕುವುದರಲ್ಲಿ ಮತ್ತು ಆ ಶಿವಾಲಯಗಳನ್ನು ಮಾಧ್ವ ಮತದ ಕ್ರಮಗಳಿಗೆ ಪರಿವರ್ತಿಸುವುದರಲ್ಲಿ ಜಯಶೀಲರಾದರು. ವಿಜಯನಗರದ ಪತನದಿಂದ ಶ್ರೀ ಶೃಂಗೇರಿ ಮಠಕ್ಕೆ ರಾಜಾಶ್ರಯವು ಕಡಿಮೆ ಯಾದುದರಿಂದ ಕನ್ನಡ ಜಿಲ್ಲೆಗೆ ಬಂದು ಅವರ ಶಿಷ್ಯ ವರ್ಗದವರನ್ನು ಮತ್ತು ದೇವಾಲಯಗಳನ್ನು ರಕ್ಷಿಸಲು ಮಠದವರಿಂದ ಆಗ ಸಾಧ್ಯವಾಗಲಿಲ್ಲ. 18ನೇ ಶತಮಾನದ ಹೈದರಾಲಿ ಟಿಪ್ಪುವಿನ ಕಾಲದಲ್ಲೂ ಅವರು ಶೃಂಗೇರಿ ಮಠಕ್ಕೆ ಅನುಕೂಲರಾಗಿದ್ದರೂ ಕನ್ನಡ ಜಿಲ್ಲೆಗೆ ಶೃಂಗೇರಿ ಮಠದಿಂದ ಸಹಾಯವನ್ನು ಕಳುಹಿಸಲು ಹೆಚ್ಚಿನ ಮಟ್ಟಿಗೆ ಸಾಧ್ಯವಾಗಲಿಲ್ಲ. ಆದರೆ ಕೆಳದಿಯ ಶಿವಪ್ಪ ನಾಯಕರು, ಬಸವಪ್ಪ ನಾಯಕರು ಮತ್ತು ಅವರ ಮಗ ಸೋಮಶೇಖರ ನಾಯಕರು, ಶ್ರೀ ಶೃಂಗೇರಿ ಗುರುಗಳ ಕನ್ನಡ ಜಿಲ್ಲೆಯ ಸಂಚಾರದ ಕಾಲದಲ್ಲಿ ಅಂದರೆ 18ನೇ ಶತಮಾನದ ಆದಿಯಲ್ಲಿ ಸಹಾಯ ನೀಡಿದ್ದು ಮುಂದಿನ ದಾಕ್ಲೆಗಳಿಂದ ತಿಳಿದುಬರುತ್ತದೆ. 19ನೇ ಶತಮಾನದಲ್ಲೂ ಕಡು ಮಾಧ್ವರಾದ ಮೈಸೂರು ದಿವಾನ್ ಪೂರ್ಣಯ್ಯನವರ ಒಲವು ಉಡುಪಿ ಮಾಧ್ವ ಮಠದವರಿಗೆ ಹೆಚ್ಚಾಗಿ ಇದ್ದುದರಿಂದಲೂ ಶೃಂಗೇರಿ ಮಠದವರಿಗೆ ಕನ್ನಡ ಜಿಲ್ಲೆಯ ಸಂಪರ್ಕವು ಸಾಧಾರಣ ಮೂರು ಶತಮಾನಗಳಿಂದ ತಪ್ಪಿ ಹೋಗಿ ಕನ್ನಡ ಜಿಲ್ಲೆಯ ಹೆಚ್ಚಿನವರಿಗೆ ಈ ಮಾಧ್ವರ ಅಪಪ್ರಚಾರದಿಂದಾಗಿ ಘಟ್ಟದ ಮೇಲೆ ಶೃಂಗೇರಿ ಮಠವೆಂಬುದು ಒಂದು ಇದೆ ಎಂಬ ವಿಚಾರವೂ, ಆ ಶೃಂಗೇರಿ ಮಠದಲ್ಲಿ

ಆದಿಶಂಕರಾಚಾರ್ಯರ ಪರಂಪರೆಗೆ ಸೇರಿದ ಸ್ಮಾರ್ತ ಸಂಪ್ರದಾಯದ ಜಗದ್ಗುರುಗಳೊಬ್ಬರು ಅಲ್ಲಿ ಇದ್ದಾರೆಂದೂ ಕೂಡ ಮರೆತುಹೋಯಿತು. ಅದರಲ್ಲೂ ಜಿಲ್ಲೆಯ ಶೈವಾಲಯಗಳೂ ಅವುಗಳ ಅರ್ಚಕ ಮತ್ತು ಆಡಳಿತೆ ದಾರರಾದ ಸ್ಥಳೀಯ ಸ್ಮಾರ್ತ ಬ್ರಾಹ್ಮಣರು ಈ ಮಾಧ್ವರ ಹಿಂಸೆಗೆ ಬಲಿಬೀಳ ಬೇಕಾಯಿತು ಹಾಗಿದ್ದರೂ ಶ್ರೀ ಸುಬ್ರಹ್ಮಣ್ಯ ಮೊದಲಾದ ಹೆಚ್ಚಿನ ದೇವಾಲಯಗಳು 1845ರ ನಂತರವೇ ಮಾಧ್ವರ ಸ್ವಾಧೀನವಾದದ್ದು. 1836ರಿಂದ ಕನ್ನಡ ಜಿಲ್ಲೆಯಲ್ಲಿ ನಡೆದ ಕಲ್ಯಾಣಪ್ಪನೆಂಬ ಕೊಡಗ ಅರಸನ ಸ್ವಾತಂತ್ರ ಸಮರದಲ್ಲಿ ಜಿಲ್ಲೆಯ ಸ್ಥಳೀಯ ಸ್ಮಾರ್ತ ಬ್ರಾಹ್ಮಣರು ಸಹಕರಿಸಿದರೆಂಬ ಆಪಾದನೆಯಿಂದ ಅವರ ಹೆಚ್ಚಿನ ದೇವಾಲಯಗಳು ಬ್ರಿಟಿಷ್ ಸರಕಾರದ ಒಲವಿನಿಂದ ಮಾಧ್ವರ ಕೈಗೆ ಹೋಗಲು ಒಂದು ಕಾರಣವಾಯಿತು. ಹಾಗಿದ್ದರೂ ಸ್ಮಾರ್ತರ ಹಕ್ಕಿನದೆಂಬ ಗುರುತಿಗಾಗಿ ಈಗಲೂ ತಸದೀಕು ಇರುವ ಕೆಲವು ಹಳೆ ಸಣ್ಣ ದೇವಾಲಯಗಳು ಈ ಸ್ಥಳದ ಸ್ಮಾರ್ತರ ಆಡಳಿತೆ ಮತ್ತು ಅರ್ಚಕತನದಲ್ಲಿ ಉಳಿದಿವೆ. (Vide 'ತುಳುನಾಡು' ಲೇ: ಡಾ। ಪಿ.ಜಿ. ಭಟ್, ಪುಟ : ೧೧೬-೧೧೭) ೨೦ನೇ ಶತಮಾನದ ಆದಿಯಲ್ಲಿ ಅಂದರೆ ಬ್ರಿಟಿಷರ ಆಳ್ವಿಕೆಯ ಅಂತ್ಯದಲ್ಲಿ ಮೇಲೆ ವಿವರಿಸಿದ ಸ್ಥಳದ ಸ್ಮಾರ್ತ ಬ್ರಾಹ್ಮಣರು ಪುನಃ ಶ್ರೀ ಶೃಂಗೇರಿ ಮಠದ ಸಂಪರ್ಕವನ್ನು ಹೆಚ್ಚಿನ ಮಟ್ಟಿಗೆ ಬೆಳೆಸಿಕೊಂಡರು. ಇದರಿಂದಾಗಿ ಇವರು ಮಾಧ್ವರಿಂದ ಉಂಟಾದ ಹಿಂಸೆಯಿಂದ ಚೇತರಿಸಿಕೊಂಡರು. ಇದರಿಂದಾಗಿ ಇವರು ಮಾಧ್ವರಿಂದ ಉಂಟಾದ ಹಿಂಸೆಯಿಂದ ಚೇತರಿಸಿಕೊಂಡು ಮಾಧ್ವರ ಸಂಪರ್ಕದಿಂದ ಹೆಚ್ಚಿನ ಮಟ್ಟಿಗೆ ಬಿಡಲ್ಪಟ್ಟು ತಮ್ಮ ಹಿಂದಿನ ಸ್ಥಾನಮಾನಗಳನ್ನು ಅರಿತವರಾಗಿ ಈಗ ಅವರು ವಿದ್ಯೆಯಲ್ಲಿಯೂ ವೈದಿಕ ವಿಚಾರದಲ್ಲಿಯೂ, ಸಾಂಪತ್ತಿಕ ವಿಚಾರದಲ್ಲಿಯೂ ತಮ್ಮ ಮುಂಚಿನ ಸ್ಥಾನವನ್ನೇ ಹೊಂದಿರುವ ವಿಚಾರವು ಸಂತೋಷಾರ್ಹವಾಗಿದೆ.

ಈ ಸ್ಥಳೀಯ ಸ್ಮಾರ್ತ ಬ್ರಾಹ್ಮಣರು ಅನಾದಿಯಿಂದಲೇ ಶ್ರೀ ಶೃಂಗೇರಿ ಮಠದ ಶಿಷ್ಯರಾಗಿದ್ದರೆಂದು ಈ ಕೆಳಗಿನ 1878ನೇ ಇಸವಿಯ ಎರಡು ಪತ್ರಗಳಿಂದ ಶೃತಪಡಿಸಬಹುದಾಗಿದೆ.

## ಪತ್ರ ೧.

ಮಠದ ಮೊಹರು ನಂಬ್ರ 3

ಶ್ರೀ ಶೃಂಗೇರಿ ಮಠದ ಘಟ್ಟದ ಕೆಳಗಣ ಸೀಮೆವಟ್ಟು ಆಚಾರ ವಿಚಾರದ ಸುಭೆದಾರರ್ರು ವೆಂಕಟಸುಬ್ಬ ಶಾಸ್ತ್ರಿಗಳವರು ಬೈಲಂಗಡಿ ಮಾಗಣೆ ಗೌಡ ತೋಡಿಲ ಗುಂಮಟ ಗೌಡನಿಗೆ ಉತ್ತರವೇನೆಂದ್ರೆ -

ಸುಬ್ರಹ್ಮಣ್ಯ ವಗ್ಯರೆ 9 ಮಾಗಣೆಗಳನ್ನು ಆಚಾರ ವಿಚಾರದ ಹಕ್ಕು ನಾಲೂರು ಶಂಕರ ನಾರ್ಣಪ್ಪಯ್ಯನವರಿಗೆ ನಮ್ಮ ಕಡೆಯಿಂದ ನೇಮಕ ಮಾಡಿ ಕಳುಹ್ಸಿಯದೆ. ನಿನ್ನ ಮಾಗಣೆ ಶಿಷ್ಯ ಜನರಿಂದ ಮಾಮೂಲು ಪ್ರಕಾರ ದೀಪಾರಾಧನೆ ಕಾಣಿಕೆ, ಮದುವೆ ಚರಣ ಕಾಣಿಕೆ, ತಪ್ಪು ಒಪ್ಪು ಕಾಣಿಕೆ ಸಹ ಇವರ ಮುಖಾಂತರ ಪ್ರಮಾಥಿ ಸಂವತ್ಸರದ ಅಶ್ವೀಜ ಬ॥೩೦ರ ವರೆಗಿನದು ಕಾಣಿಕೆ ಮಾಡ್ಸಿ ಇವರಿಂದ ರಶೀದಿ ಪಡಕೊಳ್ಳುವದು. ಬಹುಧಾನ್ಯ ಸಂ।ರದ ವೈಶಾಖ ಬ॥೧೩ಲ್ಲು

ಮೊಕ್ಕಾಂ ಕಡಬ ಕಸ್ಬಾ ಗ್ರಾಮ.

(Sd.) ವೆಂಕಟಸುಬ್ಬಾ ಶಾಸ್ತ್ರಿಯವರು ಈ ರಿಕಾರ್ಡು ನೋಡಿ ನಕ್ಲು ತೆಗ್ಸಿಕೊಂಡಿರುತ್ತೆ.

ತಾ. 5-2-1935 (Sd.) **ವಿದ್ವಾನ್ ಶೇಷ ಶಾಸ್ತ್ರಿ**

1878ನೇ ಇಸ್ವಿ ಧರ್ಮಾಧಿಕಾರಿ.

## ಪತ್ರ ೨.

ಮಠದ ಮೊಹರು ನಂಬ್ರ 12

ಶ್ರೀ ಶೃಂಗೇರಿ ಮಠದ ಘಟ್ಟದ ಕೆಳಗಣ ಸೀಮೆ ಉಪ್ಪಿಂಗಡಿ ತಾಲೂಕು ವಗೈರೆಯ ಆಚಾರ ವಿಚಾರದ ಸುಭೇದಾರ ವೆಂಕಟಸುಬ್ಬಾ ಶಾಸ್ತ್ರಿಗಳವರು -

ಕಡಬ ಮಾಗಣೆ ಗೌಡಕೆರೆ ಮುದೆಯ ದೇರಪ್ಪ ಗೌಡಗೆ ಮುರ್ದಾಳ ಮಾಗಣೆ ಗೌಡ ಮಜೂರು ಬೊಮ್ಮ ಗೌಡಗೆ ಸುಬ್ರಹ್ಮಣ್ಯ ಮಾಗಣೆ ಗೌಡ ಸೂಡಿಯ ನಾಗಣ್ಣ ಗೌಡಗೆ, ಪತ್ರ ಯಾನೆ ತಾಕಿದಿ - ನಿಮ್ಮ ಗೌಡಿಕೆಗೆ ವಳಪಟ್ಟ ಗ್ರಾಮಗಳ ಪೈಕಿ ಕುಟ್ರುಪಾಡಿ ಪುತ್ತಿಗೆ; ಕೋಣಾಚೆ, ಮಿಂನಂಪಾಡಿ, ರೆಂಜಿಲಾಡಿ, ನಿಡುವ ಗುಂಡ್ಯದೇರಣೆ, ಕೊಂಬಾರು, ಶಿರಬಾಗಿಲು ಇಷ್ಟು ಗ್ರಾಮಗಳನ್ನು ನಾಲೂರು ಶಂಕರ ನಾರಾಯಣಯ್ಯಗೆ ವಹಿಸಿ ಉತ್ರಾಕೊಟ್ಟು ಕಳುಹ್ಸಿಯದೆ. ಅವರು ಬರುತ್ತಲೇ ನಿಮ್ಮ ನಿಮ್ಮ ಗೌಡಿಕೆಗೆ ಸೇರಿದ ಗ್ರಾಮಗಳಲ್ಲಿ ಇರ್ವ ಶ್ರೀಮಠದ ಶಿಷ್ಯ ಜನರಿಂದ ಶ್ರೀಮಠಕ್ಕೆ ಮಾಮೂಲು ಪ್ರಕಾರ ವಸೂಲು ಆಗುವಂಥ ದೀಪಾರಾಧನೆ ಕಾಣಿಕೆ, ಮದುವೆ ಚರಣ ಕಾಣಿಕೆ, ತಪ್ಪು ವಪ್ಪು ಕಾಣಿಕೆ ಕೂಡಾ ಆಯಾಯ ಗ್ರಾಮದ ಗೌಡಗಳ ಮುಖಾಂತ್ರ ವಸೂಲು ಮಾಡ್ಸಿ ಕೊಟ್ಟು ಆ ಬಗ್ಗೆ ನೀವು ರಶೀದಿ ಪಡಕೊಳ್ಳತಕ್ಕದ್ದು. ಸದ್ರಿ ಶಂಕರನಾರಾಯಣಯ್ಯಗೆ ಕಳದ ಶ್ರೀಮುಖ ಸಂ।ರದ ಕಾರ್ತಿಕ ಶು ೧ನೇ ಲಾಗ್ಯಾತು ಪ್ರಮಾಥಿ ಸಂವತ್ಸರದ ಆಶ್ವಿಜ ಬಹುಳ ೩೦ ವರೆಗೆ ವರ್ಷ ೬ರ ಪರಿಯಂತ್ರ ವಸೂಲು ಸ್ವತಂತ್ರ ಕೊಟ್ಟಿರುವುದರಿಂದ ಅಷ್ಟು ವರ್ಷಗಳ ಬಾಬ್ತು ಮುಗ್ತಿ ಹಿಂದಿನ ವರ್ಷ ಬಾಕಿ ಇದ್ರೆ ಅದು ಕೂಡಾ ವಸೂಲು ಮಾಡ್ಸಿ ಕೊಟ್ಟು ರಶೀದಿ ಪಡಕೊಳ್ಳಬೇಕು. ಈ ರಶೀದಿ ಒಬ್ಬನು ಕೊಡುತ್ತಲೇ ಇದ್ರ ನಕಲು ತೆಗೆದುಕೊಂಡು ಮತ್ತೊಬ್ಬನಿಗೆ ಕಳುಹಿಸಿಕೊಡತಕ್ಕದ್ದು ಬಹುಧಾನ್ಯ ಸಂ।ರದ ಶ್ರಾವಣ ಶುಕ್ಲ ೬ಲ್ಲು ಮೊಕ್ಕಾಂ ಕಡಬ ಕೇವಳ.

1878 ಇಸ್ವಿಯಲ್ಲಿ (Sd.) ರುಜು ವೆಂಕಟ ಸುಬ್ಬಾ ಶಾಸ್ತ್ರಿಯವರು

ಈ ಎರಡು ಪತ್ರದಲ್ಲಿ ತೋರುವ ನಾಲೂರು ಶಂಕರನಾರ್ಣಪ್ಪಯ್ಯನವರು ಸ್ಥಳೀಯ ಸ್ಮಾರ್ತ ಬ್ರಾಹ್ಮಣರು.

ನಮ್ಮ ಕನ್ನಡ ಜಿಲ್ಲೆಯು ಶ್ರೀ ಶೃಂಗೇರಿ ಮಠದ ಆಚಾರ ವಿಚಾರದ ಧರ್ಮಾಧಿಕಾರಕ್ಕೆ ಒಳಪಟ್ಟಿತ್ತೆಂದು ಈ ಕೆಳಗಿನ ಜಗದ್ಗುರು ಶ್ರೀ ಶೃಂಗೇರಿ ಮಠೀಯ ಪ್ರಾಕ್ತನ ಲೇಖನಮಾಲಾ (ಮೈಸೂರು ಗವರ್ನ್‌ಮೆಂಟ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟದ್ದು) ಪುಸ್ತಕದ ಲೇಖನಗಳಿಂದ ವ್ಯಕ್ತವಾಗುತ್ತದೆ.

ಲೇಖನ 22 ಈಶ್ವರ ಕ್ರಿ.ಶ. 1697-98 (ಪುಟ 36)

ಈಶ್ವರ ಸಂ।ರದ ಮಾರ್ಗಶಿರ ಶುದ್ಧ ೧೦ರಲ್ಲು ಶ್ರೀಮತ್ಕೆಳದಿ ಬಸವಪ್ಪ ನಾಯಕರು ಸೋಮವಾ....ರಾವ ಕವಸಿಂಹರಸರಿಗೆ ಸ್ವಸ್ನೇಹಾನುಸಂಪ್ತಿಯಿ....ಂ ಕಾರ್ಯಕ್ಕೆ ವಿನಯಾರ್ಥ ಶೃಂಗೇರಿ ಸ್ವಾಮಿಗಳವರು ಕಳುಹಿಸಿದ ಕುಂಬಳೆ ಸೀಮೆಯಲ್ಲಿ ಆಚಾರ ವಿಚಾರ ಮಠಕ್ಕೆ ಬಾಹ ಮರ್ಯಾದೆ ಮುಂತಾಗಿನಡೆ ವಂಥಾದಕ್ಕೆ ತಮ್ಮ ಬಗೆಯವರ ಕಳುಹಿ ವಿಚಾರಿಸುತ್ತಿಹಲ್ಲಿ ಆ ರೀತಿ ನಡೆದು ಕೊಳ್ಳದೆ ಸ್ವೇಚ್ಛೆಯ ಮಾಡುವಂಥಾವರನ್ನು, ಅವರ ಬಗೆಯವರು ಬಂದು ಹೇಳಿದಲ್ಲಿ ಹಾಗಿದ್ದವರ ಕರಸಿ, ಅವರು ನಿಯಮ ಮಾಡಿದ ಪ್ರಕಾರಕ್ಕೆ ನಡೆದುಕೊಂಬ ಹಾಗೆ ಕಟ್ಟು ಮಾಡಿಸುದಾಗಿ.

ಲೇಖನ 23 ಈಶ್ವರ ಕ್ರಿ.ಶ. 1697-98

ಈಶ್ವರ ಸಂ।ರದ ಮಾರ್ಗಶಿರ ಶು ೧೦ರಲ್ಲು ಶ್ರೀಮತ್ಕೆಳದಿ ಬಸವಪ್ಪ ನಾಯಕರು ಕೃಷ್ಣಪ್ಪಗೆ ಬರೆಸಿ ಕಳುಹಿಸಿದ ಕಾರ್ಯ ಭಟ್ಟಕಳ ಬಗ್ಗವಾದಿ ಹೋಬಳಿ, ಗೆರಸಪ್ಪೆ, ಶಿರಾವಿ, ಚಂದಾವರ, ಕಾರಕಳದ ಹೋಬಳಿ, ಬಸರೂರು, ಶಂಕರನಾರಾಯಣ, ಬೆಳತಂಗಡಿ, ಮೊಗರನಾಡು, ಗಾಜನೂರು ಕೆಳದಿ ಹೋಬಳಿ ದಾನಿವಾಸ, ಖಾಂಡ್ಯ, ಗರಜೆ, ಗೋಣಿಬೀಡು ಜಾವಣಿಗೆ ಮುಂತಾದ ಹೋಬಳಿ ಸೀಮೆ ದೇವಸ್ಥಾನಗಳಲ್ಲಿ ಸಹ ಶೃಂಗೇರಿ ಸ್ವಾಮಿಗಳವರು ಆಚಾರ, ವಿಚಾರ ಮಠಕ್ಕೆ ಬಾಹ ಮರ್ಯಾದೆ ಮುಂತಾಗಿ ನಡವಂಥಾವಕ್ಕೆ ತಮ್ಮ ಬಗೆಯವರು ಕಳುಹಿಸಿ ವಿಚಾರಿಸುತ್ತಿಹಲ್ಲಿ ಈ ರೀತಿ ನಡಕೊಳ್ಳದೆ ಸ್ವೇಚ್ಛೆ ಮಾಡುವಂಥವರ, ಅವರ ಬಗೆಯವರು ಹೇಳಿದಲ್ಲಿ ಆ ಬಗೆಯವರ ಕರೆಸಿ ಅವರು ಕಟ್ಟು ಮಾಡಿಸಿದ ರೀತಿ ನಡೆಕೊಂಬ ಹಾಗೆ ತಾಕೀತು ಮಾಡುವುದಾಗಿ–

25 ಈಶ್ವರ ಸಂವತ್ಸರದ ಮಾರ್ಗಶಿರ ಶು । ೧೧ರಲ್ಲು ಶ್ರೀಮತ್ಕೆಳದಿ ಬಸವಪ್ಪ ನಾಯಕರು ಆ ದಿನ ಹಳ್ಳಿ ಚಿಕ್ಕನರಸಂಣಗೆ ಬರೆಸಿ ಕಳುಹಿಸಿದ ಕಾರ್ಯ ಬಾರಕೂರು ಹೋಬಳಿ ಸೀಮೆಗಳಲ್ಲಿ ಶೃಂಗೇರಿ ಸ್ವಾಮಿಗಳವರು ಆಚಾರ, ವಿಚಾರ ಮಠಕ್ಕೆ ಬಾಹಮರ್ಯಾದೆ ಮುಂತಾಗಿ ನಡೆವಂಥಾದಕ್ಕೆ ತಮ್ಮ ಬಗೆಯವರು ಕಳುಹಿಸಿ ವಿಚಾರಿಸುತ್ತಿದ್ದಲ್ಲಿ ಆ ರೀತಿ ನಡೆದುಕೊಳ್ಳದೆ ಸ್ವೇಚ್ಛೆ ಮಾಡುವಂಥವರನ್ನು ಅವರ ಬಗೆಯವರು ಬಂದು ಹೇಳಿದಲ್ಲಿ ಹಾಗಿದ್ದವರ ಕರೆಸಿ ಅವರು ಕಟ್ಟು ಮಾಡಿಸಿವ ರೀತಿ ನಡೆಕೊಂಬ ಹಾಗೆ ತಾಕೀತು ಮಾಡುವುದು.

ಲೇಖನ 13 ದುರ್ಮುಖಿ ಕ್ರಿ.ಶ. 1656-57

ದುರ್ಮುಖಿ ಸಂ।ರವ ಜ್ಯೇಷ್ಟ ಬಹುಳ 5ರಲ್ಲು ಶ್ರೀಮತ್ಕೆಳದಿ ಶಿವಪ್ಪ ನಾಯಕರು ಅಳಿಯ ಕೆಂಚಂಣಗೆ ಬರೆಸಿ ಕಳುಹಿಸಿವ ಕಾರ್ಯ :- ಶೃಂಗೇರಿ ಮಠಕ್ಕೆ ಮಂಗಳೂರು ಸೀಮೆಯಲ್ಲಿ ಬರಹ ಪ್ರಮಾಣ ಉತ್ತಾರದ ಸ್ವಾಸ್ತಲ್ಲಿ ಕೆಲವು ಒಕ್ಕಲು ಹಣ ಕೊಡದೆ ಪುಂಡತನ ಮಾಡುತಿದ್ದಾರಂತೆ. ಆ ವಿವರ ಅವರ ಬಗ್ಗೆ ಮನುಷ್ಯರು ಹೇಳಿಯಾರು. ಆ ವಕ್ಕಲ ಕರೆಸಿ ತಾಕೀತು ಮಾಡಿಸಿ ಯಥಾ ಸ್ಥಿತಿಯಲ್ಲಿ ಬಾಹ ಹಿಂದಣ ಹಣವನ್ನು ಕೊಡಿಸಿ ಮುಂದೂ ಕಾಲ ಕಾಲಕ್ಕೂ ಕೊಡುವ ಹಾಗೆ ಕಟ್ಟು ಮಾಡಿಸುವುದು.

ಈ ಮೇಲೆ ವಿವರಿಸಿದ ಕೆಳದಿ ನಾಯಕರ ಕಾಲ (1656-57)ವಲ್ಲಿ ಉಡುಪಿ ಸೋದೆ ಮಠದ ಮಾಧ್ವ ವೈಷ್ಣವ ಸ್ವಾಮಿಗಳಾದ ವಾದಿರಾಜರು ಕನ್ನಡ ಜಿಲ್ಲೆಯಲ್ಲಿ ಗಲಾಟೆ ನಡೆಸಿ ಮುಗ್ಗಿದ ಕಾಲ. ಶೃಂಗೇರಿ ಮಠದ ಶಿಷ್ಯರಾದ ಸ್ಥಳೀಯ ಸ್ಮಾರ್ತ ಬ್ರಾಹ್ಮಣರಿಂದ ಬಲಾತ್ಕಾರಪಡಿಸಿ

ಕೆಲವು ಶಿವಾಲಯಗಳನ್ನು ಮಾಧ್ವರು ವಶಪಡಿಸಿಕೊಂಡ ಸಮಯ. ಆ ಕಾರಣದಿಂದ ಶೃಂಗೇರಿ ಮಠಕ್ಕೆ ಕನ್ನಡ ಜಿಲ್ಲೆಯ ಶಿಷ್ಯ ವರ್ಗದವರಿಂದ ಬರಬೇಕಾದ ಆಚಾರ ವಿಚಾರದ ಬಾಬ್ತು ಬಹುಮರ್ಯಾದೆಗಳು ಮತ್ತು ಮಠಕ್ಕೆ ಈ ಮೊದಲಿನ ರಾಜರುಗಳು ಬಿಟ್ಟಿದ್ದ ಉತ್ತಾರಗಳ ಬಾಬ್ತು ಬರತಕ್ಕ ಗೇಣಿ ಬಾಬ್ತು ಬಡ ಹಣವೂ ಕೂಡ ಸರಿಯಾಗಿ ವಸೂಲು ಆಗಲು ಬಿಡುತ್ತಿರಲಿಲ್ಲ ಎಂಬುದು ಈ ಮೇಲಿನ ಲೇಖನಗಳಿಂದ ಸ್ಪಷ್ಟವಾಗುತ್ತದೆ.

ಈ ಸುಬ್ರಹ್ಮಣ್ಯ ಕ್ಷೇತ್ರದ ದುರ್ಮುಖಿ ಚಿಟ್ಟೆಯನ್ನು ಪರಿಶೀಲಿಸಿದರೂ ಶ್ರೀ ಸುಬ್ರಹ್ಮಣ್ಯ ಗ್ರಾಮ ಮತ್ತು ಅದರ ಸುತ್ತುಮುತ್ತಲಿನ ಬಿಳಿನೆಲೆ, ಕೊಂಬಾರು, ಕೂಜಿಗೋಡು ಮೊದಲಾದ ಗ್ರಾಮಗಳ ಮೂಲಿ ವರ್ಗಗಳು ಶ್ರೀ ಶೃಂಗೇರಿ ಮಠದ ಶಿಷ್ಯ ವರ್ಗಕ್ಕೆ ಸೇರಿದ ಸ್ಮಾರ್ತರಾದ ಸ್ಥಳೀಯ ಬ್ರಾಹ್ಮಣರಿಗೂ ಗೌಡ ಸಮಾಜದವರಿಗೂ ಮಾತ್ರ ಹೆಚ್ಚಾಗಿ ಇತ್ತೆಂದು ವ್ಯಕ್ತವಾಗುತ್ತದೆ. ಮಾಧ್ವರಿಗೆ ಮೂಲಿ ವರ್ಗಗಳು ಇದ್ದುದು ಕಂಡುಬರುವುದಿಲ್ಲ. ಇಲ್ಲಿಯ ಮಾಧ್ವರು ಉಡುಪಿಯಿಂದ ಬಂದು ನೆಲೆಸಿದವರೆಂದು ತಿಳಿದು ಬರುತ್ತದೆ. ಈ ಮೇಲಿನ ಎಲ್ಲಾ ಕಾರಣಗಳಿಂದ ಕನ್ನಡ ಜಿಲ್ಲೆಯಲ್ಲಿ ಇರುವ ಈ ಸುಬ್ರಹ್ಮಣ್ಯ ಕ್ಷೇತ್ರಕ್ಕೂ ಶ್ರೀ ಶೃಂಗೇರಿ ಮಠಕ್ಕೂ ಹೆಚ್ಚಿನ ನಿಕಟ ಸಂಬಂಧವಿತ್ತೆಂದು ಸ್ಪಷ್ಟವಾಗುತ್ತದೆ.

ಈ ಕೆಳಗಿನ ಆಧಾರಗಳಿಂದ 18ನೇ ಶತಮಾನದ ಆದಿಯಲ್ಲಿ ಶ್ರೀ ಶೃಂಗೇರಿ ಮಠದ ಆಗಿನ ಜಗದ್ಗುರುಗಳಾದ ಎರಡನೇ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳವರು ಶ್ರೀ ಸುಬ್ರಹ್ಮಣ್ಯ ಕ್ಷೇತ್ರಕ್ಕೂ ಅಲ್ಲದೆ ಜಿಲ್ಲೆಯ ಇತರ ಸ್ಥಳಗಳಲ್ಲೂ ಸಂಚರಿಸಿದ ವಿಷಯ ವ್ಯಕ್ತವಾಗುತ್ತದೆ. ಸಂಚಾರ ಕಾಲದಲ್ಲಿ ಕೆಳದಿ ನಾಯಕರ ಸಹಕಾರವು ಅವರಿಗೆ ಇತ್ತೆಂದು ವ್ಯಕ್ತವಾಗುತ್ತದೆ - ಶ್ರೀ ಜಗದ್ಗುರು ಗಳವರು ಸುಬ್ರಹ್ಮಣ್ಯ ಕ್ಷೇತ್ರಕ್ಕೆ ಪ್ರವೇಶಿಸುವ ಸಂದರ್ಭದಲ್ಲಿ ಭಿಕ್ಷುಕರ ಮಠದಲ್ಲಿ ತಂಗಿದ್ದ ಮಾಧ್ವ ಯತಿಗಳೊಬ್ಬರು ಮತ್ತು ಉಡುಪಿಯಿಂದ ಬಂದ ಅವರ ಅನುಯಾಯಿಗಳು ಆತಂಕಪಡಿಸಿದರೆಂದೂ ಆಗ ಊರಿನವರೂ ಕೆಳದಿ ನಾಯಕರ ಕಡೆಯವರೂ ಈ ಮಾಧ್ವರನ್ನು ಹೊಡೆದು ಓಡಿಸಿದರೆಂದೂ ಕೂಡ ವ್ಯಕ್ತವಾಗುತ್ತದೆ.

ಆಧಾರ ಗ್ರಂಥ 'ಗುರುವಂಶ ಕಾವ್ಯ' ರಚಿಸಿದವರು ಶ್ರೀ ಕಾಶೀ ಲಕ್ಷ್ಮಣ ಶಾಸ್ತ್ರೀ ಶೃಂಗೇರಿ ಮಠದ ಆಸ್ಥಾನ ವಿದ್ವಾನ್ ೧೭೦೬-೪೧ರ ವರೆಗೆ ಶೃಂಗೇರಿ ಮಠದಲ್ಲಿದ್ದು ಆಗಿನ ಜಗದ್ಗುರುಗಳಾದ ಶ್ರೀ ಸಚ್ಚಿದಾನಂದ ಭಾರತೀ ಮಹಾಸ್ವಾಮಿಗಳ ಕೃಪೆಗೆ ಪಾತ್ರರಾದವರು - ಕೆಳದಿ ಶ್ರೀ ಸೋಮಶೇಖರ ನಾಯಕನ ಕಾಲ ೧೭೧೪-೧೭೩೯. ಈ ಕಾವ್ಯವು ಕ್ರಿ.ಶ. ೧೭೩೫ರಲ್ಲಿ ಬರೆಯಲ್ಪಟ್ಟಿದೆ ಎಂದು ನಿರ್ಧರಿಸಲ್ಪಟ್ಟಿದೆ. ಈ ಕಾವ್ಯ ಪುಸ್ತಕವು ವಾಣಿವಿಲಾಸ ಪ್ರೆಸ್ ಶ್ರೀರಂಗದಲ್ಲಿ ಮುದ್ರಿಸಿ ಪ್ರಕಟಿಸಲ್ಪಟ್ಟಿದೆ. ಈ ಪುಸ್ತಕದ ಹದಿಮೂರನೆ ಸರ್ಗದ 24ನೇ ಶ್ಲೋಕದಿಂದ ಶ್ರೀಶ್ರೀ ಸಚ್ಚಿದಾನಂದ ಭಾರತೀ ಮಹಾಸ್ವಾಮಿಗಳವರು ಶೃಂಗೇರಿಯಿಂದ ಹೊರಟು ಕನ್ನಡ ಜಿಲ್ಲೆಗೆ ಇಳಿದು ಸಂಚಾರ ಆರಂಭಿಸಿ ಕನ್ನಡ ಜಿಲ್ಲೆಯ ಸ್ಥಳಗಳಲ್ಲಿ ಸಂಚರಿಸಿದ ವಿವರಣೆ ಸ್ವಲ್ಪಮಟ್ಟಿಗೆ ಇಲ್ಲಿ ವಿವರಿಸಲ್ಪಟ್ಟಿದೆ.

13ನೇ ಸರ್ಗದ 24ನೇ ಶ್ಲೋಕದಿಂದ ಜಗದ್ಗುರುಗಳು (ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳವರು) ಪಲ್ಲಕ್ಕಿಯನ್ನೇರಿ ಶೃಂಗೇರಿಯಿಂದ ಹೊರಟು ಘಟ್ಟದ ಶಿರಸ್ಸಿನಲ್ಲಿರುವ ವಾರಾಹೀ ನದೀ ಸಂಗಮದಲ್ಲಿ ತಂಗಿದ್ದು ನಿತ್ಯವಿಧಿಯನು ತೀರಿಸಿ ಕೊಂಡರು. ಅಲ್ಲಿಂದ ಸಹ್ಯಾದ್ರಿಯನ್ನು

ಇಳಿದು ಋಷಿಮುನಿಗಳ ವಾಸ ಯೋಗ್ಯವಾದ ಫಲಕುಸುಮಗಳಿಂದ ಸಮೃದ್ಧವಾದ ತೌಳವ ಭೂಮಿಯನ್ನು ಹೊಕ್ಕು ದಾರಿಯುದ್ದಕ್ಕೂ ಅಲ್ಲಲ್ಲಿ ಪ್ರಸಿದ್ಧವಾದ ದೇವಸ್ಥಾನಗಳನ್ನು ಸಂದರ್ಶಿಸುತ್ತಾ ಮತ್ತು ದೇವರುಗಳನ್ನು ಪೂಜಿಸುತ್ತಾ ಕೋತ್ಕಟಪುರ (ಈಗಿನ ಕೊಕ್ಕಡ)ವನ್ನು ಪ್ರವೇಶಿಸಿದರು. ಅಲ್ಲಿ ಸುಪ್ರಸಿದ್ಧನೂ, ವೈದ್ಯೇಶನೂ (ವೈದ್ಯನಾಥೇಶ್ವರ) ಆದ ಮಹೇಶ್ವರನನ್ನು ಅರ್ಚಿಸಿದರು. ತದನಂತರ ಬಿಳಿನೆಲೇಪುರಕ್ಕೆ (ಶ್ರೀ ಸುಬ್ರಹ್ಮಣ್ಯದ ಸಮೀಪದಲ್ಲಿರುವ) ಒಂದು ಸುಂದರಾಕಾರವುಳ್ಳ ಗೋಪಾಲಕೃಷ್ಣ ದೇವರನ್ನು ಪೂಜಿಸಿ ಶ್ರೀ ಸುಬ್ರಹ್ಮಣ್ಯ ಕ್ಷೇತ್ರಕ್ಕೆ ತೆರಳುವವರಾದರು.

ಇದೇ ಸಮಯ ಸುಬ್ರಹ್ಮಣ್ಯದಲ್ಲಿ ಯತಿಪತಿ ಶ್ರೇಷ್ಠರಾದ ಜಗದ್ಗುರುಗಳು ಕ್ಷೇತ್ರವನ್ನು ಸಂದರ್ಶಿಸಲಿರುವರೆಂಬ ವಾರ್ತೆಯನ್ನು ತಿಳಿದು ದೇಶ ದೇಶಗಳಿಂದ ಬಂದ ಯಾತ್ರಿಕ ಜನರು ಮತ್ತು ಸುತ್ತುಮುತ್ತಲಿನ ಊರಿನ ಜನರೂ ಶ್ರೀ ಕ್ಷೇತ್ರಕ್ಕೆ ಆಗಮಿಸಿ ಶ್ರೀ ಗುರುಗಳ ಪಾದಪದ್ಮಗಳ ದರ್ಶನಾಕಾಂಕ್ಷಿಗಳಾಗಿ ನೆರದಿದ್ದರು. ಮಹಾರಾಷ್ಟ್ರದಿಂದ, ದ್ರಾವಿಡ ದೇಶಗಳಿಂದ ಸಮೀಪದ ಪ್ರದೇಶಗಳಿಂದ ಬಂದು ನಾನಾ ರೀತಿಯ ವೇಷಭೂಷಣಗಳಿಂದ ಅಲಂಕೃತರಾಗಿದ್ದ ಶಿಷ್ಯ ಸಮುದಾಯವು ಪೂರ್ಣ ಕುಂಭಗಳನ್ನು ಕೈಗಳಲ್ಲಿ ಹಿಡಿದು ಪೂಜ್ಯ ಗುರುಗಳನ್ನು ಸ್ವಾಗತಿಸಲು ಸನ್ನದ್ಧರಾದರು. ದ್ರಾವಿಡ ಶಿಷ್ಯರಲ್ಲಿ ವಿಭೂತಿಯಿಂದ ತ್ರಿಪುಂಡ್ರಧಾರಣೆ ಮಾಡಿದ ಕೇರಳೀಯರೂ, ತಮಿಳರೂ, ಆಂಧ್ರರೂ. ಕರ್ನಾಟಕದವರೂ ಮತ್ತು ತುಳುವರೂ ಅವರವರ ದೇಶಾಚಾರ ಪ್ರಕಾರದ ವೇಷಭೂಷಣಗಳಿಂದ ಕೂಡಿದವರಾಗಿ ಅಲ್ಲಿ ಬಂದು ಸೇರಿದ್ದರು. ಇವರಲ್ಲದೆ ಸ್ಮಾರ್ತರಲ್ಲದ ಅಸಮಾಧಾನದಿಂದ ಕೂಡಿದ ಮಾಧ್ವರ ಸಮೂಹವೂ ಉಡುಪಿ ಕಡೆಯಿಂದ ಅಲ್ಲಿಗೆ ಬಂದಿತ್ತು. ಒಂದು ಕಡೆ ಕೆಳದಿ ನೃಪತಿ ಕೃಪಾಪೂರ್ಣ ವಿಭವರಾದ ಪ್ರಧಾನ ಮಂತ್ರಿಗಳು ಶ್ರೀ ಸುಬ್ರಹ್ಮಣ್ಯೇಶ್ವರನ ಸೇವಪರರಾಗಿದ್ದು ಕೈಗಳಲ್ಲಿ ಶ್ರೀ ಗುರುಗಳಿಗೆ ಅರ್ಪಿಸಲ್ಪಡುವ ಅನೇಕ ಕಾಣಿಕೆಗಳನ್ನು ಹಿಡಿದು ನಿಂತಿದ್ದರು. ಇನ್ನೊಂದು ಕಡೆ ಅಮೂಲ್ಯವಾದ ಶಾಲುಗಳನ್ನು ಧರಿಸಿದ ಮತ್ತು ಕ್ರಮ ಜಟೆ ಘನಾಂತ ವೇದಾಧ್ಯಾಯನ ಮತ್ತು ಶಾಸ್ತ್ರ ಪಾರಂಗತರಾದ ವಿದ್ವಜ್ಜನರು ಅಲ್ಲಿ ನೆರೆದಿದ್ದರು.

ಇತ್ತ ಬಿಳಿನೆಲೇ ಪುರದಿಂದ ಹೊರಟಂತಹ ಶ್ರೀ ಸಚ್ಚಿದಾನಂದರೆಂಬ ಹೆಸರಿನ ಯೋಗೀಂದ್ರರಾದ ಜಗದ್ಗುರುಗಳ ಪಾದ ಪದ್ಮಗಳಿಗೆ ಅಲ್ಲಿ ನೆರೆದಿದ್ದ ಸಮಸ್ತ ಜನರೂ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ ಸಂತೋಷಪಟ್ಟರು. ಅವರೆಲ್ಲರೂ ಪಲ್ಲಕಿಯನ್ನಲಂಕರಿಸಿದ ಶ್ರೀ ಜಗದ್ಗುರುಗಳ ಇಬ್ಬದಿಗಳಲ್ಲೂ ನಡೆಯುತ್ತಾ ಸಾಗಿದರು. ಶ್ರೀ ಸುಬ್ರಹ್ಮಣ್ಯವನ್ನು ಸಮೀಪಿಸುತ್ತಿದ್ದಂತೆ ಕುಮಾರಧಾರಾ ನದಿಯು ಅರಳಿದ ತಾವರೆ ಹೂಗಳನ್ನು ತರಂಗಗಳೆಂಬ ತನ್ನ ಕೈಗಳಲ್ಲಿ ಧರಿಸಿ ಶ್ರೀ ಗುರುಗಳನ್ನೂ ಅವರ ಪರಿವಾರವನ್ನೂ ಸ್ವಾಗತಿಸುತ್ತದೋ ಎಂಬಂತೆ ಇತ್ತು. ಕುಮಾರಧಾರಾದ್ವಯ ಪರಿವೃತವಾದ ಸುಬ್ರಹ್ಮಣ್ಯ ಪುರವನ್ನು ಪುರಾಣಗಳಲ್ಲಿ ವರ್ಣಿತವಾಗಿದ್ದಂತೆ ಶ್ರೀ ಗುರುಗಳು ಪ್ರತ್ಯಕ್ಷವಾಗಿ ವೀಕ್ಷಿಸಿದರು. ಮುಂದೆ ಹೋದಂತೆ ಮಹಾಭೇರಿ ಶಂಖಾದಿ ಮಹಾ ವಾದ್ಯಘೋಷವು ಸ್ಫುಟವಾಗಿ ಕೇಳಿಸುತ್ತಿರಲು ಪಾತಾಳವನ್ನು ಪ್ರವೇಶಿಸುವ ಮಾರ್ಗವೊ ಎಂಬಂತಿರುವ ಬಿಲದ್ವಾರವು ಅವರಿಗೆ ಕಂಗೊಳಿಸಿತು. ಅಲ್ಲಿಂದ ಮುಂದಕ್ಕೆ ಮಾರ್ಗಮಧ್ಯದಲ್ಲಿ ಶ್ರೀ ಗುರುಗಳು ಪಲ್ಲಕಿಯಿಂದ ಇಳಿದು ಕ್ಷೇತ್ರದ ಹೆಬ್ಬಾಗಿಲಲ್ಲಿರುವ ಶ್ರೀ ಗಣಪತಿ ಯನ್ನು ಸಂದರ್ಶಿಸಿ ಧ್ಯಾನಿಸಿ ಪೂಜಿಸಿದರು.

ಪ್ರವಿಷ್ಟಸ್ತತ್ಪುರ್ಯಾಂ ಪ್ರವರ ದಿನದೀಪಾದಿ ಬಿರುದೈಃ
ಬಹಿಃ ಪ್ರಾಕಾರಾಂತಃ ಸ ನರಪತಿ ಸಿಂಹಾಸನ ಗುರುಃ ।
ಅಸೋಢ್ವಾ ತನ್ಮಾಧ್ವಾ ನಿರಪಮ ಪತಾಕಾಂ ಕತಿಪಯೆ
ನಿರೊದ್ಧುಂ ಪ್ರೊದ್ಯೋಗಂ ಗುಹಗೃಹ ಬಹಿರ್ದ್ವಾರಿ ವಿದಧುಃ ॥

ಶ್ರೀ ಜಗದ್ಗುರುಗಳು ಹಗಲು ದೀವಿಟಿಗೆ ಮೊದಲಾದ ಬಿರುದುಗಳಿಂದೊಡ ಗೂಡಿ ಶ್ರೀ ಸುಬ್ರಹ್ಮಣ್ಯ ಪುರಪ್ರವೇಶ ಮಾಡಿದಾಗ ಕೆಲವು ಮಾಧ್ವರು ಇದನ್ನು ಸಹಿಸಲಾರದೆ ಶ್ರೀ ಗುರುಗಳ ಪ್ರವೇಶವನ್ನು ದೇವಸ್ಥಾನದ ಬಾಗಿಲಿನ ಹೊರ ಬದಿಯಲ್ಲಿ ನಿಂತುಕೊಂಡು ಪತಾಕೆಗಳನ್ನು ಹಿಡಿದು ವಿರೋಧಿಸಿದರು.

ತದಾಜಘ್ನುಃ ಸರ್ವಾನ್ ಗುರುನೃಪತಿ ಸಾಮಿೀಪಿಕ ಜನಾಃ
ಧೃತೈ ರೌಪ್ಯೈ ಹೈರ್ಮೈರ್ವಿತತತರ ವೇತ್ರೈರ್ಬಹುಬಲಾಃ
ಸಮಾಯಾತಾಃ ಕೃಷ್ಣಾ ತಟತ ಉಡುಪಾಚ್ಚ ಸ್ಥಲಸದೊ
ಷ್ಯನೇಕೇ ತೇ ಭಗ್ನಾ ಅಪಜಯಮವಾಪನ್ ಖಲತಮಾಃ ॥

ಆ ಸಮಯದಲ್ಲಿ ಶ್ರೀ ಗುರುಗಳ ಮತ್ತು ಅರಸನ ಸಮಿೀಪವರ್ತಿ ಜನಗಳು ಬೆಳ್ಳಿಯ ಮತ್ತು ಚಿನ್ನದ ಕಟ್ಟಿಗೆ ಕೋಲುಗಳಿಂದ ಉಡುಪಿ ಮೊದಲಾದ ಕಡೆಗಳಿಂದ ಬಂದ ಆ ಮಾಧ್ವರನ್ನು ಹೊಡೆದು ನಿವಾರಿಸಿ ಅಲ್ಲಿಂದ ಓಡಿಸಿದರು.

ತಥಾ ದೇಶಾದ್ದೇಶಾದ್ ಭೃಷಮುಪಗತೋ ಯಾತ್ರಿಕ ಗಣ -
ಸ್ತದಾ ದೃಷ್ಟ್ವಾನ್ ದೃಷ್ಟ್ವಾನ್ ಸಪದಿ ಸಹಸಾಪತೀತದದಮೂನ್ ।
ಮಷೀಫಾಲಾನ್ ಮಾಧ್ವಾನ್ ಮೃದುಪಚಿತ ದೀರ್ಘೋರ್ಧ್ವತಿಲಕಾನ್
ಸಮಂತಾತ್ತಪ್ತಾಂಗಾನ್ಬಹಳ ತುಲಸೀ ಕಾಷ್ಠವಹನಾನ್ ॥

ಇದನ್ನು ನೋಡಿ ದೇಶ ದೇಶಗಳಿಂದ ಬಂದ ಯಾತ್ರಿಕ ಸಮೂಹವು ಸುಡು ಮುದ್ರೆ ಒತ್ತಿಕೊಂಡು ಮಸಿಯಿಂದ ಊರ್ಧ್ವ ನಾಮ ಹಾಕಿಕೊಂಡು ತುಳಸಿ ಕಾಷ್ಠದ ಮಣಿಗಳನ್ನು ಧರಿಸಿದ ಶ್ರೀಗುರು ವಿರೋಧಿಗಳಾದ ಮಾಧ್ವರನ್ನು ಕಂಡಕಂಡಲ್ಲಿ ಹೊಡೆದೋಡಿಸಿದರು.

ಕರಾಗ್ರೇ ಬಿಭ್ರಾಣಾನ್ ಬೃಹದುದರಮಾಸ್ಯೆ ವಿಕಸಿತಂ
ಗಲೇ ಸೂಕ್ಷ್ಮಂ ಪಾತ್ರಂ ಮಲಿನ ವಪುಷಃ ಶ್ವೇತದಶನಾನ್ ।
ದೃಢಂ ಕಕ್ಷೇ ಕೃಷ್ಣಾಜಿನ ಕಲಿತಪೇಟೀಂ ಚ ದಧತಃ
ಖಲಾನ್ ಮಾರ್ಗಂ ಮಾರ್ಗಂ ಪಥಿಪಥಿಭಿಯಾ ಧಾವನಪರಾನ್
ಬಿಲದ್ವಾರಂ ಯಾತಾಃ ಶರಣಮಥ ಕೇಚಿದ್ಭತ ಬಲಾಃ
ಗುಹಾಂ ಸುಪ್ರಾವಿಕ್ಷನ್ ಗುಹವಿವರಣಾದ್ರೇಃ ಕತಿಪಯೆ
ಪರೇಧಾರಾ ತೀರ್ಥೇ ಪರತ ಉದಿತಾ ಬಾಹುತರಣ್ಯೈಃ
ಮಹಾಹಾಹಾಕಾರಾ ಅಹಹ ತದಹೊ ಮಾಧ್ವನಿವಹಾಃ ॥
ಅಥ ಶಿಷ್ಟಾಃ ಶಿಷ್ಟಾಃ ಸಿತತರ ಮೃದಾಭಿತ್ತಿಗತಯಾ
ತ್ರಿಪುಂಡ್ರಂ ಪ್ರಾಲಿಂಪನ್ ಕಥಮಪಿ ತದಾ ವಂಚಕತಮಾಃ ॥
ಜಟಾಧಾರ್ಯಾಸನ್ನಾನಲ ಭಸಿತ ಮಾದಾಯ ತುಪರೇ
ಸಮಂತಾತ್ಪ್ರಶ್ಯಂತೊ ನಿಜಶಿಶುಕಲಾಲಾಘನ ರಸ್ಯೈಃ ॥

ಹೊಡೆತದ ಅತ್ಯಂತ ಭೀತಿಯಿಂದ ಆ ಮಾಧ್ವರಲ್ಲಿ ಕೆಲವರು ತಮ್ಮ ತಮ್ಮ ಪೆಟ್ಟಿಗೆ ಸಾಮಾನುಗಳನ್ನು ಹಿಡಿದುಕೊಂಡು ಕುಮಾರ ಪರ್ವತಕ್ಕೋ ಕೆಲವರು ಬಿಲದ್ವಾರದೊಳಗೋ ಕೆಲವರು ಕುಮಾರಧಾರಾ ನದೀ ದಡಗಳಿಗೋ ಇನ್ನು ಕೆಲವರು ನದಿಯನ್ನು ಈಜುತ್ತಾ ದಾಟಿ ಬೇರೆ ಕಡೆಗಳಿಗೋ ಮತ್ತು ಕೆಲವರು ಸ್ಮಾರ್ತರಂತೆ ಭಸ್ಮಾದಿಗಳನ್ನು ಧರಿಸಿ ತಲೆಮರೆಸಿಕೊಂಡು ಓಡಿ ಹೋದರು.

ಅಥೋ ಸುಬ್ರಹ್ಮಣ್ಯ ಸ್ಥಲ ವಿನಿವಸದ್ಭಿಕ್ಷುಕ ಮಠಂ
ಕ್ಷಣಾದ್ಧ್ವಂಕ್ತು ಶೈವಾಃ ಅಪಿಚ ಚಟಿಲಾಃ ಸ್ಮಾರ್ತನಿವಹಾಃ ॥
ವಿತೇನುಃ ಪ್ರೋದ್ಯೋಗಂ ಹೃದಿ ಬಹುದಯಾಲುರ್ಯತಿಪತಿಃ ।
ಸ್ವಷೇಧಿತ್ಸುರ್ವತ್ರಾಪ್ಯಧಿಕೃತಜನಾನ್ ಪ್ರೇಷ್ಯ ಸುಮತೀನ್ ॥

ಮಾಧ್ವರು ತಂಗಿದ್ದ ಸುಬ್ರಹ್ಮಣ್ಯ ಸ್ಥಳದಲ್ಲಿರುವ ಭಿಕ್ಷುಕ ಮಠವನ್ನು ಕ್ಷಣದಲ್ಲಿಯೇ ಧ್ವಂಸ ಮಾಡಲು ಉದ್ಯುಕ್ತರಾದ ಸ್ಮಾರ್ತ ಜನರನ್ನು ತಡೆಯಲು ದಯಾಳುವಾದ ಶ್ರೀ ಜಗದ್ಗುರುಗಳು ಅಧಿಕೃತ ಜನರನ್ನು ಅಲ್ಲಿಗೆ ಕಳುಹಿಸಿದರು. (ಈ ಶ್ಲೋಕದಿಂದ ಮಾಧ್ವ ಸ್ವಾಮಿಗಳೂ ಅವರ ಕಡೆಯ ಉಡುಪಿಯ ಮಾಧ್ವರೂ ಆಗ ಕ್ಷೇತ್ರದಲ್ಲಿದ್ದ ಭಿಕ್ಷುಕ ಮಠದಲ್ಲಿ ವಾಸವಾಗಿದ್ದರೆಂದು ತಿಳಿಯುತ್ತದೆ. ಆಗ ಅಲ್ಲಿ ಅವರಿಗೆ ಸ್ವಂತ ಮಠವಿದ್ದಿಲ್ಲವೆಂದು ವ್ಯಕ್ತವಾಗುತ್ತದೆ.)

ತತೋಽ ವಿಕ್ಷ್ಯದ್ವಕ್ಷಾಧ್ವರ ಹರಕುಮಾರಸ್ಯ ನಿಲಯಂ
ಚರನ್ ಪ್ರಾದಕ್ಷಿಣ್ಯಾತ್ತರಿತ ಉಪದೇವಾನ್ನಿಶಮಯನ್ ।
ನಮನ್ ಸುಬ್ರಹ್ಮಣ್ಯಂ ಸಹಜಸಹಿತಂ ವಾಸುಕಿತನುಂ
ಕರಂ ಯಚ್ಛನ್ ಭಕ್ತ್ಯೋರು ಧನಮಥನೀರಾಜ್ಯ ತಮನೌತ್ ॥

ತದನಂತರ ದೇವಸ್ಥಾನವನ್ನು ಪ್ರವೇಶಿಸಿ ಹರಕುಮಾರನಿಗೆ ಪ್ರದಕ್ಷಿಣೆಯನ್ನು ಮಾಡಿ ಉಪದೇವತೆಗಳ ದರ್ಶನ ಮಾಡಿಕೊಂಡು ಮಹಾಗಣಪತಿ ಸಹಿತನಾದ ವಾಸುಕಿ ಶರೀರದ ಸುಬ್ರಹ್ಮಣ್ಯ ದೇವರನ್ನು ನೀರಾಂಜನ ಮತ್ತು ಹಣವನ್ನು ಅರ್ಪಿಸಿ ಸ್ವತಃ ಪೂಜಿಸಿದರು.

('ಸಹಜಸಹಿತಂ ಸುಬ್ರಹ್ಮಣ್ಯಂ' ಎಂದಿರುವುದರಿಂದ ಆ ಸಮಯದಲ್ಲಿ ಈಗ ಗೋಪ್ಯವಾಗಿರಿಸಲ್ಪಟ್ಟ ಮಹಾಗಣಪತಿ ವಿಗ್ರಹವು ಅದರ ಮುಂಚಿನ ಗುಡಿಯಲ್ಲಿ ಇತ್ತೆಂದು ಸ್ಪಷ್ಟವಾಗುತ್ತದೆ.)

ಪ್ರಸಾದಾನಾದಾಯ ಪ್ರಚುರ ಕುಸುಮಾದೀನ್ಮುನಿಪತಿಃ
ಸಮಸ್ತೈಃ ಶಿಷ್ಯೈಸ್ಸೈಃ ಸಕಲ ಹೃದಯಾಶ್ಚರ್ಯ ಜನಕಃ ॥
ಅನುಜ್ಞಾಪ್ಯ ಸ್ವಾಮ್ಯುತ್ಸವ ವಿರಚನೇಸಾಧ್ವಧಿಕೃತಾನ್
ಮಠಂ ಪ್ರಾಗಾತ್ ಸ್ವೀಯಂ ನಿಖಿಲ ಬಿರುದೈರ್ವಂದಿ ವಿನುತಃ ॥

ಆ ಮೇಲೆ ಕುಸುಮಾದಿ ಪ್ರಸಾದಗಳನ್ನು ಸ್ವೀಕರಿಸಿ ಶ್ರೀ ಗುರುಗಳು ಸುಬ್ರಹ್ಮಣ್ಯೇಶ್ವರನ ಉತ್ಸವಾದಿಗಳಿಗೆ ಅನುಜ್ಞೆಯನ್ನು ಕೊಟ್ಟು ತಮ್ಮ ಶಿಷ್ಯರೊಂದಿಗೆ ಬಿರುದಾವಳಿ ಸಹಿತವಾಗಿ ಸ್ವಕೀಯ ಮಠವನ್ನು ಪ್ರವೇಶಿಸಿದರು. (ಈ ಶ್ಲೋಕದಿಂದ 18ನೇ ಶತಮಾನದ ಮುಂಚೆಯೇ ಶೃಂಗೇರಿ ಶಾಖಾಮಠವು ಇತ್ತೆಂದು ಸ್ಪಷ್ಟವಾಗುತ್ತದೆ.)

ತತಶ್ಚಂಪಾಷಷ್ಠ್ಯಾಮುಷಸಿ ಭಜಕಾಭೀಪ್ಸಿತಕರಂ

ವರಂ ಸುಬ್ರಹ್ಮಣ್ಯಂ ನಿರುಪಮ ರಥೋತ್ಸಾಹವಿಭವಂ ॥

ಸಮೀಕ್ಷ್ಯಾನಂದಾಬ್ಧೌ ಸಪದಿ ವಿನಿಮಗ್ನಃ ಸ ಯತಿರಾಟ್

ಪ್ರಸಾದಸ್ನಾನಂ ಚಾಕುರುತ ಭುವನೆ ವಿಸ್ಮಯಕರಂ ॥

ಚಂಪಾಷಷ್ಠಿಯ ದಿನ ಶ್ರೀ ಗುರುಗಳು ನಿರುಪಮ ರಥೋತ್ಸವ ವಿಭವ ವುಳ್ಳ ಶ್ರೀ ಸುಬ್ರಹ್ಮಣ್ಯ ದೇವರನ್ನು ವೀಕ್ಷಿಸಿ ದೇವರ ಪ್ರಸಾದ ಸ್ನಾನವನ್ನು ಮಾಡಿ ಆನಂದಭರಿತರಾದರು.

ತಥಾ ಚಂಪಾಧಾರ್ಯಾನುಪಮ ಶಿಬಿಕಾರೋಹಣ ಮಹೋ-

ತ್ಸವಂ ಪ್ರೈಕ್ಷಿಷ್ಟಾಯಂ ಭುಜಗಪತಿ ಮೂರ್ತೇಃ ಶರಭುವಃ

ದಿನೆ ತಸ್ಮೈ ಕಸ್ಮಿನ್ ವ್ಯಯಿತ ಬಹುರಾಃ ಪ್ರೋತ್ಸವತರಾ -

ನ್ವಿಧಾಪ್ಯೈವಂ ಸ್ತೋತ್ರಂ ಬುಧಜನ ವಿನೋದೀಸಮತನೋತ್ ॥

ಹಾಗೆಯೇ ಶ್ರೀಗುರುಗಳು ಭುಜಗಪತಿಮೂರ್ತಿಯಾದ ಶ್ರೀಸುಬ್ರಹ್ಮಣ್ಯ ದೇವರ ಪಲ್ಲಕಿ ಉತ್ಸವವನ್ನು ನೋಡುತ್ತಾ ಆ ದಿನವನ್ನು ಕಳೆಯುತ್ತಿರುವಾಗ ವಿದ್ವಜ್ಜನರನ್ನು ಸಂತೋಷಪಡಿಸುವ ಶ್ರೀ ಸುಬ್ರಹ್ಮಣ್ಯನ ಸ್ತೋತ್ರವೊಂದನ್ನು ರಚಿಸಿದರು.

ಬಾಲಾತ್ಮೈವವಸನ್ ಭಜತ್ಸಖಿತಯಾ ಲೀಲಾದ್ಭುತೋ ಭ್ರಾಜಸೆ

ಽಭ್ಯಂಗಾದ್ಭೋಜನ ಶೇಷಲೇಪನಭವಾನ್ಮಾತ್ರನ ಪೂರ್ಣಾಧಿಕಃ ॥

ಷಡ್ವಕ್ತ್ರೋ ಜನಕಾಚ್ಚ ಪಂಚವದನಾದ್ಭೂತ್ಯೋಧಿಕಃ ಸರ್ವಥಾ

ಸುಬ್ರಹ್ಮಣ್ಯ ಭವಚ್ಚರಿತ್ರ ಜಲಧಿಂಸ್ತೋತುಂ ಸಮರ್ಥೋಽಸ್ಮಿಕಿಂ ॥

ಹೇ ಸುಬ್ರಹ್ಮಣ್ಯ! ಈ ಕ್ಷೇತ್ರದಲ್ಲಿ ಬಾಲಾತ್ಮನಾಗಿ ವಾಸಿಸುತ್ತಾ ಭಜಕರ ಸ್ನೇಹದಿಂದ ಅದ್ಭುತ ಲೀಲೆಯುಳ್ಳವನಾಗಿ ಸ್ನಾನಾನಂತರ ಭೋಜನ ಶೇಷದ ಲೇಪನದಿಂದ ತಾಯಿಯಾದ ಅನ್ನಪೂರ್ಣೆಯನ್ನೂ ಮತ್ತು ಆರು ಮುಖಗಳುಳ್ಳ ವನಾಗಿ ತಂದೆಯಾದ ಉಮಾಮಹೇಶ್ವರನನ್ನೂ ಮೀರಿಸುವವನಂತೆ ಪ್ರಕಾಶಿಸುವಿ. ಅಂತಹ ನಿನ್ನ ಚರಿತ್ರೆಯ ಸಾಗರವನ್ನು ಸ್ತುತಿಸಲು ನಾನು ಸಮರ್ಥನಾಗಿದ್ದೇನೆಯೇ?

ಸ್ತುತ್ವೈವಂ ಮಠ ಮಾಗತೋಬಹುತರಚ್ಛಾತ್ರಾಲಯೇ ತೀರ್ಥಮೋ

ದೇಶೇಭ್ಯಃ ಸಕಲೇಭ್ಯ ಆಗತಮಿಹ ಸ್ಮಾರ್ತವ್ರಜಂ ಹರ್ಷಯನ್ ।

ಪಶ್ಚಾತ್ತಾಪಯಿತಾ ಚ ಸಾಧ್ವಸಯುತಾಂ ಮಾಧ್ವೀಂಯತೀಶಾವಲಿಂ

ಪ್ರೋದ್ಯದ್ದಿಗ್ವಿಜಯೋ ಬಭೌ ಗುರುವರಃ ಶ್ರೀ ಸಚ್ಚಿದಾನಂದರಾಟ್॥

ಈ ರೀತಿಯಾಗಿ ಶ್ರೀ ಸುಬ್ರಹ್ಮಣ್ಯನನ್ನು ಸ್ತುತಿಸಿ ಅಲ್ಲಿಯ ಸ್ವಮಠಕ್ಕೆ ಹಿಂತಿರುಗಿದ ಶ್ರೀ ಸಚ್ಚಿದಾನಂದ ಗುರುಗಳು ದೇಶದೇಶಗಳಿಂದ ಬಂದ ಶಿಷ್ಯರಿಗೆ ತೀರ್ಥ ಪ್ರಸಾದಗಳನ್ನು ಕೊಟ್ಟು ಸಂತೋಷಪಡಿಸಿ ತಾನು ಮಾಡಿದ ಕರ್ತವ್ಯಕ್ಕಾಗಿ ಪಶ್ಚಾತ್ತಾಪದಿಂದ ಕೂಡಿದ ಮಾಧ್ವ ಯತಿಗಳನ್ನು ಬಹುತರವಾಗಿ ಸಮಾಧಾನ ಪಡಿಸಿ ದಿಗ್ವಿಜಯಕ್ಕೆ ಉದ್ಯುಕ್ತರಾದರು.

ಇದೇ ಕಾವ್ಯದ 14ನೇ ಸರ್ಗದಲ್ಲಿ ಶ್ರೀಸುಬ್ರಹ್ಮಣ್ಯದಿಂದ ಶ್ರೀಗುರುಗಳು ಹೊರಟು ನೇರೆಂಕಿ, ಉಪ್ಪಿನಂಗಡಿ, ಕಡಬಕ್ಕೆ ಹೋಗಿ ಪುನಃ ಸುಬ್ರಹ್ಮಣ್ಯಕ್ಕೆ ಹೋಗಿ ಅಲ್ಲಿಂದ ಕದರಿಯ ಶ್ರೀ ಮಂಜುನಾಥ ಕ್ಷೇತ್ರಕ್ಕೆ (ಮಂಗಳೂರು) ಬಂದರೆಂದೂ ಅಲ್ಲಿಂದ ಹೊರಟು ಉಪ್ಪಿನಂಗಡಿ

ತಾಲೂಕಿನ ಚೌಟರಿಂದ ಬಹುಮಾನಿತರಾಗಿ ಆ ಮೇಲೆ ಕಾರ್ಕಳಕ್ಕೆ ಹೋಗಿ ಅನಂತೇಶ್ವರ ಪೂಜಿಸಿ ಅಲ್ಲಿಂದ ಹೆಬ್ರಿಗೆ ಹೋದರೆಂದೂ, ಹೆಬ್ರಿಯಿಂದ ಹಾಲಾಡಿಗೆ ಹೋಗಿ ಅಲ್ಲಿ ತಮ್ಮ ಮಠಕ್ಕೆ ಸಂಬಂಧಪಟ್ಟ ಮಠದಲ್ಲಿ ಇದ್ದು ಅಲ್ಲಿ ನೃಸಿಂಹ ಸ್ವಾಮಿ ದರ್ಶನ ಮಾಡಿಕೊಂಡು ಕೋಟೇಶ್ವರ ಪಟ್ಟಣಕ್ಕೆ ಹೋಗಿ ಕೋಟೇಶ್ವರ ದರ್ಶನ ಮಾಡಿಕೊಂಡು ಗಂಗೊಳ್ಳಿಗಾಗಿ ಉತ್ತರ ಕನ್ನಡಕ್ಕೆ ವಿಜಯಯಾತ್ರೆಯನ್ನು ಕೈಕೊಂಡರೆಂದು ತಿಳಿದುಬರುತ್ತದೆ.

## 16ನೇ ಸರ್ಗದಲ್ಲಿ

ಇತಿ ವಿನಿಶ್ಚಿತ ಧೀರ್ಗುರುರಾಣ್ಮುದಾ ಬಹುಲ ಶೈವಾಜನಾರ್ದಿತ ಭೂಸುರಾತ್
ಪ್ರಥಿತ ಶೃಂಗ ಪುರಾನ್ನಿರಗಾತ್‌ಪುರಂ ಕುಡುಪನಾಮಕ ಮಾವಸನೋಚಿತಂ ॥
ಅಥ ಸತತ್ರ ಸಮಸ್ತ ಸುಖಾವಹೆ ಕುಡುಪ ನಾಮನಿವೇಪವುರೋಪಮೇ ।
ಅಮಿತ ಪೌರಜನೋಗುರು ಪುಂಗವೋ ನ್ಯವಸದಾಹ್ನಿಕ ತತ್ಪರಮಾನಸಃ ।
ಗುರುಕೃತ್ಯೈರ್ಮುದಿತಶ್ಚ ಮಹೋತ್ಸವೈಃ ಸಕುಡುಪಾಧಿಪ ದೇವ ಉವಾಚತಂ ।
ವರಮುನೆ ಮನಸೇಪ್ಸಿತ ಮಾಸ್ಯಸಿ ವ್ರಜನತಾವದಿತಃ ಸ್ವಪುರಂತ್ವಿತಿ
ಕ್ಷಿತಿ ಸುರಾನ್ ಬಹುಶಃ ಕಿಲಭೋಜಯನ್ ಘೃತಪಯೋಬಹುಭಕ್ಷವರಾದಿಭಿಃ
ರುಚಿರಮನ್ನ ಮಹರ್ದಿವ ಮಾದರಾತ್ ಸಚಯುಧಿಷ್ಠಿರವನ್ನಿತರಾಂ ಬಭೌ ॥
ಅಥನವಃ ಕುಲಿಶೇ (ಕಲಶೆ)ಶ್ವರ ಸನನಿಧೆರ್ಮಹಿತ ವಾಸುಕಿ ಷಣ್ಮುಖಭಾಸಿತಂ
ಕಲಿತ ನಿಮ್ನಗಯಾ ಖಲುಧಾರಯಾ ಸರುಚಿ ಕುಕ್ಯಪುರಂ ಮುದಿತೋಽನ್ವಗಾತ್
ತದನುತತ್ರ ವಿಧಾಪ್ಯಮಹೋತ್ಸವಂ ಶರಭುವಂ ಮುದಿತಃ ಪರಿತೋಷ್ಯಚ ।
ಪಥಿಪಥಿಪ್ರಗೃಹೀತ ಕರೌಯಯೌ ಸಚ ಪುರಂಕಿಲ ಮಂಗಲನಾಮಕಂ ॥
ಅಥಸಮಾಗತಮತ್ರ ವಿದಂಸ್ತದಾ ಕ್ಷಿತಿಸುರಾಗ್ರ್ಯಗುರುಂ ಕುದುಪಾಹ್ವಯೆ
ಪುರವರೆ ದ್ರುತ ಮೀಕ್ಷಿತುಮಾದರಾತ್ ಸವಿದಧೆ ವಸುದಾಧಿಪತಿರ್ಧಿಯಂ ॥
ಅಥಸರೋವರ ನಿರ್ಮಲವಾಪಿಕಾ ಪರಿಸರೆ ಮೃಡುಬಿಲ್ವದಲೈಃ ಶಿವಂ ।
ಪರಿಸಮರ್ಚ್ಯ ವಿಲಾಸ ಭರಾಲಸಂ ನೃಪಮಸಾವುಪದಾಭಿರತೋಷಯತ್ ॥
ಆಶಿಷೊ ಬಹು ವಿಧಾಯ ಯೋಗಿರಾಟ್ ಸೋಮಶೇಖರ ಮಹೀಭೃತೆ ತದಾ ॥
ಪಾರಿತೋಷಿಕ ಮವಾಪ ಚಸ್ವಯಂ ಪಾರ್ಥಿವಾತ್ಸುನರುದಾರ ಮಾನಸಃ ॥
ನರಪತಿರಪಿ ತಸ್ಮಾತ್ ಸಚ್ಚಿದಾನಂದ ಭಾರತ್ಯಭಿದಯತಿಪತಿಂತಂ ಮಾನಯಿತ್ವಾಪುರಂಸ್ವಂ॥
ಪುರಿ ಪುರಿ ಮಹಿತೋಽಸೌ ದೇವತಾ ಸಂಪ್ರಪಶ್ಯನ್ ಪಥಿ ಪಥಿ
ಪೃಥಿವೀಪೈರ್ವರ್ಧಿತದ್ವಿರ್ಜಗಾಮ ॥

ಹದಿನಾರನೇ ಸರ್ಗದ ಮೇಲಿನ ೪೫ನೇ ಶ್ಲೋಕಗಳಿಂದ ಸರ್ಗಾಂತ್ಯದ ೬೧ನೇ ಶ್ಲೋಕದ ವರೆಗೆ ಜಗದ್ಗುರು ಶ್ರೀಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳು ಎರಡನೇ ಸಲ ಶೃಂಗೇರಿಯಿಂದ ಕೆಳದಿ ಶ್ರೀ ಸೋಮಶೇಖರ ನಾಯಕನೊಂದಿಗೆ ಹೊರಟು ಸುಬ್ರಹ್ಮಣ್ಯಕ್ಕೆ ಹತ್ತಿರ ಇರುವ ಕುಡುಪ (ಕಡಬ)ಕ್ಕೆ ಬಂದು ಅಲ್ಲಿ ಕೆಲವು ದಿವಸ ಉಳಿದುಕೊಂಡು ಅಲ್ಲಿಂದ ಸುಬ್ರಹ್ಮಣ್ಯಕ್ಕೆ ಹೋಗಿ ಶ್ರೀ ಸುಬ್ರಹ್ಮಣ್ಯೇಶ್ವರನಿಗೆ ಮಹೋತ್ಸವವನ್ನು ಮಾಡಿಸಿ ಸುಬ್ರಹ್ಮಣ್ಯದಿಂದ ಮಂಗಳೂರಿಗೆ ಬಂದು

ರುಗಿ ಕಡಬಕ್ಕೆ ಹೋಗಿ ಕಡಬದ ಹತ್ತಿರವಿದ್ದ ಸರೋವರದ ಪಕ್ಕದಲ್ಲಿ ತಾನು ತಂಗಿದ್ದ ದಲ್ಲಿ ಈಶ್ವರ ಪೂಜೆಯನ್ನು ಮಾಡಿ ವಿಜೃಂಭಣೆಯಿಂದ ಬ್ರಹ್ಮಸಂತರ್ಪಣೆಯನ್ನು ಡಿಸಿದರೆಂದೂ ಅವರ ಪ್ರಯಾಣಕ್ಕೆ ಅನುಕೂಲ ಒದಗಿಸಿ ಸಹಕರಿಸಿ ಒಟ್ಟಿಗೆ ಬಂದ ಕೆಳದಿಯ ಸನಾದ ಶ್ರೀ ಸೋಮಶೇಖರ ನಾಯಕನಿಗೆ ಶ್ರೀಗಳವರು ಹೆಚ್ಚಿನ ಆಶೀರ್ವಾದ ಫಲ ತ್ರಾಕ್ಷತೆಗಳನ್ನು ದಯಪಾಲಿಸಿದರೆಂದೂ ಉದಾರಿಯಾದ ಶ್ರೀ ಸೋಮಶೇಖರ ನಾಯಕನು ನೇಕ ಪಾರಿತೋಷಕಗಳನ್ನು ಶ್ರೀ ಗುರುಗಳಿಗೆ ಸಮರ್ಪಿಸಿ ತಾನು ಅಲ್ಲಿಂದ ಹಿಂತಿರುಗಿದನೆಂದೂ ಳಿದು ಬರುತ್ತದೆ. ಕಡಬದಿಂದ ಹೊರಟ ಶ್ರೀ ಸಚ್ಚಿದಾನಂದ ಭಾರತಿ ಸ್ವಾಮಿಗಳವರು ಅಲ್ಲಲ್ಲಿ ದೇವಾಲಯಗಳನ್ನು ಸಂದರ್ಶಿಸುತ್ತಾ ದೇವರುಗಳನ್ನು ಪೂಜಿಸುತ್ತಾ ಅಲ್ಲಿಯ ರಾಜರುಗಳಿಂದ ಹೆಚ್ಚಿನ ಮಾನ ಮರ್ಯಾದೆಗಳನ್ನು ಪಡಕೊಂಡು ಶೃಂಗೇರಿಗೆ ಹಿಂತಿರುಗಿದರೆಂದು ತಿಳಿದು ಬರುತ್ತದೆ.

ಎರಡನೇ ಸಲ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳವರು ಕಡಬಕ್ಕೆ ಬರುವಾಗ ಅಲ್ಲಿ ಅವರ ಸ್ಥಳೀಯ ಸ್ಮಾರ್ತ ಶಿವ ಬ್ರಾಹ್ಮಣ ಶಿಷ್ಯವರ್ಗದವರಾದ ಕುಂಬಾಟ ಶ್ರೀ ವೆಂಕಣ್ಣ ಅವರ ಮಗ ಕುಂಬಾಟ ಸುಬ್ಬಯ್ಯ ಮತ್ತು ವೆಂಕಣ್ಣನವರ ತಮ್ಮ ಕೃಷ್ಣಯ್ಯ ಅವರ ಮಗ ತಿಮ್ಮಯ್ಯ ಸ್ಥಾನುಭಾಗರೆಂಬವರು ದೊಡ್ಡ ವರ್ಗ ದಾರರಾಗಿ ಅಲ್ಲಿ ಇದ್ದರೆಂದೂ ಅವರ ಆತಿಥ್ಯದಲ್ಲಿಯೇ ಜಗದ್ಗುರುಗಳವರು ಅನೇಕ ದಿನಗಳನ್ನು ಕಳೆದರೆಂದೂ ಅವರ ಮನೆಯಲ್ಲಿರುವ ಸಂತತಿ ನಕ್ಷೆ ಮತ್ತು ದಾಕ್ಲೆಗಳಿಂದ ತಿಳಿದುಬರುತ್ತದೆ. - ಈಗ ಅವರ ಕುಟುಂಬದಲ್ಲಿ 75 ವರ್ಷ ಪ್ರಾಯದ ಕುಂಬಾಟ ಶ್ರೀನಿವಾಸಯ್ಯ ಎಂಬವರು ಕಡಬದ ಹತ್ತಿರ ಇರುವ ತಲೇಕಿ ಎಂಬಲ್ಲಿ ಇದ್ದಾರೆ. ಈ ಮನೆತನದವರಾದ ಸಂಕಯ್ಯ, ವೆಂಕಟ್ರಮಣಯ್ಯ ಎಂಬವರು 19ನೇ ಶತಮಾನದಲ್ಲಿ ಶ್ರೀ ಸುಬ್ರಹ್ಮಣ್ಯದ ಕಸ್ಬಾಕುಕ್ಕೆ, ಸಂಕೇತಕುಕ್ಕೆ, ಕುಳುಕುಂದ ಗ್ರಾಮಗಳ ಶ್ಯಾನುಭಾಗರುಗಳಾಗಿ ಇದ್ದರೆಂದೂ ತಿಳಿದು ಬರುತ್ತದೆ. ಈ ಪುಸ್ತಕದ 48ನೇ ಪುಟದಲ್ಲಿ ಪ್ರಕಟಿಸಲ್ಪಟ್ಟ ಪತ್ರಗಳೆರಡರಲ್ಲಿ ಕಾಣುವ ಸೂಲೂರು ಶಂಕರನಾರ್ಣಪ್ಪಯ್ಯ ಎಂಬವರು ಇವರ ಕುಟುಂಬದವರು. ಇವರು ಶೃಂಗೇರಿ ಮಠದ ಆಚಾರ ವಿಚಾರದ ಮಠ ಮುದ್ರಾಧಿಕಾರಿಗಳಾಗಿದ್ದವರು.

ಸಾಧಾರಣ 19ನೇ ಶತಮಾನದ ಮಧ್ಯದಲ್ಲಿ ಉತ್ತರ ಹಿಂದುಸ್ಥಾನದಲ್ಲಿ ದೀರ್ಘ ಪ್ರವಾಸವನ್ನು ಮುಗಿಸಿ ಬಂದ ಶೃಂಗೇರಿಯ ಆಗಿನ ಜಗದ್ಗುರುಗಳಾದ ಶ್ರೀ ನರಸಿಂಹ ಭಾರತಿ ಸ್ವಾಮಿಗಳವರು ಸುಬ್ರಹ್ಮಣ್ಯಕ್ಕೆ ಚಿತ್ತೈಸಿ ಶ್ರೀ ಸುಬ್ರಹ್ಮಣ್ಯೇಶ್ವರ ನನ್ನು 108 ಪುತ್ಥಳಿಗಳಿಂದ ಸ್ವತಃ ಅರ್ಚಿಸಿರುತ್ತಾರೆಂದು ತಿಳಿದು ಬರುತ್ತದೆ. ಆ ನೂರೆಂಟು ಪುತ್ಥಳಿಗಳಿಂದ ಮಾಡಿದ ಸರವನ್ನು ಈಗಲೂ ದೇವಳದ ಟ್ರೆಜರಿಯಲ್ಲಿ ನೋಡಬಹುದು. ಇದನ್ನು ಪರ್ವಕಾಲಗಳಲ್ಲಿ ಶ್ರೀ ಸುಬ್ರಹ್ಮಣ್ಯೇಶ್ವರನ ಸೇವೆ ಮಾಡ್ಸಿದ ಬಾಬ್ತು ರೂಪ್ಯಾ 550 ಆಗಿನ ಮೊಕ್ತೇಸರ ಮತ್ತು ಅರ್ಚಕರಾದ ಬಳುಪದ ನರಸಿಂಹ ಅಸ್ರಣ್ಣ ಮತ್ತು ನೇರೆಂಕಿ ಸುಬ್ರಾಯ ಅಸ್ರಣ್ಣರಿಗೆ ನೇರೆಂಕಿ ಠಾಂಚನ ಸೇಷಯ್ಯನವರ ಮುಖಾಂತರ ಶೃಂಗೇರಿ ಮಹಾ ಸ್ವಾಮಿಗಳವರು ಕಳುಹಿಸಿಕೊಟ್ಟದ್ದು ಶ್ರೀ ಸೇಷಯ್ಯನವರು ಮೇಲಿನ ಅಸ್ರಣರು ಗಳಿಗೆ 1885ನೇ ಇಸವಿ ಆಷಾಢ ಬಹುಳ ೪ರಲ್ಲು ಬರೆದ ಪತ್ರದಿಂದ ವ್ಯಕ್ತವಾಗುತ್ತದೆ. ಈ ಪತ್ರದ ಪ್ರತಿಯನ್ನು ಮುಂದಕ್ಕೆ ಓದಬಹುದು.

ಇದರಿಂದಾಗಿ ಮಾಧ್ವ ಸ್ವಾಮಿಗಳ ಆಡಳಿತೆಗೆ ಬಂದ ನಂತರವೂ ಶೃಂಗೇರಿ

ಜಗದ್ಗುರುಗಳು ಶ್ರೀ ಸುಬ್ರಹ್ಮಣ್ಯದ ಶೃಂಗೇರಿ ಮಠಕ್ಕೂ ದೇವಸ್ಥಾನಕ್ಕೂ ಬಂದು ಸ್ವತಃ ಶ್ರೀ ಸುಬ್ರಹ್ಮಣ್ಯನನ್ನು ಅರ್ಚಿಸಿರುತ್ತಾರೆ ಎಂಬುದು ವ್ಯಕ್ತವಾಗುತ್ತದೆ.

ಸಾಧಾರಣ 1845ರಿಂದ ಅಂದರೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನವು ಮಾಧ್ವ ವೈಷ್ಣವ ಸ್ವಾಮಿಗಳ ಆಡಳಿತೆಗೆ ಬಂದ ನಂತರ ಈ ಶೃಂಗೇರಿ ಶಾಖಾ ಮಠವು ಹೆಚ್ಚಿನ ಅವನತಿಗೆ ಇಳಿಯತೊಡಗಿತು. ಸ್ಮಾರ್ತ ವೈಷ್ಣವರೊಳಗೆ ಮತ ವೈಷಮ್ಯವು ಉಂಟಾಗಿ ಈ ಶಾಖಾ ಮಠವು ಹೆಚ್ಚಿನ ಅವಾಂತರಕ್ಕೆ ಈಡಾಗಿ ಈ ಮಠದ ಚಂದ್ರಮೌಳೀಶ್ವರ ಗುಡಿಯು ಹಾಳುಕೆಡವಲ್ಪಟ್ಟು ಲಿಂಗವೇ ಕೆಲವು ಕಾಲ ಕಾಣೆಯಾಗಿ ಇತ್ತೆಂದು ತಿಳಿದುಬರುತ್ತದೆ. ಇದಕ್ಕೆ ಆಧಾರವಾಗಿ ಈ ಒಂದು ಪತ್ರವನ್ನು ಓದಿದರೆ ಮನದಟ್ಟಾಗಬಹುದು.

No. 27/34 Office of the Editor of Gageteers Egmore Madras 9th May 1936.

From:

M.R. Ry. K.N. K Krishnaswamy Ayyar, Avt. B.A.
Personal Assistant to the Editor of Gazeteers
Egmore Madras

To

N.S. Shiva Rao esq. S/o Late Mr. Krishnayya
Puttur, South Kanara District.

Dear Sir,

I have visited the temple and seen the Madhwa Mutt Buildiugs which open into Prakara of the great Subramania temple itself. You say that there was a mutt Subordinate to Shringeri in the Kukke Village and that its chief Swamigal was murdered at the instance of the Madhwa Mutt People. I was also told that there was a branch Shringeri Shankaracharya Mutt near the Subramania temple, but I could see no trace of the building. Am I to understand that after the murder, the mutt at Shringeri sent or had no representative of their mutt in Subramania.

Yours Sincerely, (Sd) K.N. Krishnaswami Ayyar
Personal Assistant

**ಅರ್ಥ:** ನಾನು ಶ್ರೀ ಸುಬ್ರಹ್ಮಣ್ಯ ಕ್ಷೇತ್ರವನ್ನು ಸಂದರ್ಶಿಸಿದಾಗ ಮಾಧ್ವ ಮಠ ಒಂದು ಮಾತ್ರ ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ಪ್ರಾಕಾರಕ್ಕೆ ಮುಖ ಮಾಡಿ ಇರುವುದನ್ನು ಮಾತ್ರ ಕಂಡಿದ್ದೇನೆ - ನೀವು ಶ್ರೀ ಶೃಂಗೇರಿ ಶಾಖಾ ಮಠ ಒಂದು ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ಹತ್ತಿರ ಇದೆಯೆಂತಲೂ ಅದರಲ್ಲಿ ಒಬ್ಬ ಸ್ಮಾರ್ತ ಯತಿಗಳು ಇದ್ದರೆಂತಲೂ ಅವರು ಮಾಧ್ವ ತಂಡದವರ ಒಳಸಂಚಿನಿಂದ ಕೊಲ್ಲಲ್ಪಟ್ಟರೆಂತಲೂ ತಿಳಿಸಿರುತ್ತೀರಿ. ನಾನು ಸಹ ಅಲ್ಲಿ ಶೃಂಗೇರಿ ಶಾಖಾ ಮಠ ಒಂದು ಇತ್ತೆಂದು ಅರಿತಿದ್ದೆನು. ಆದರೆ ನಾನು ಅಲ್ಲಿ ಬಂದ ಸಮಯದಲ್ಲಿ ಶ್ರೀ ಶೃಂಗೇರಿ ಶಾಖಾ ಮಠ ಇದ್ದ ಬಾಬ್ತು ಯಾವ ಕುರುಹನ್ನೂ ಕಾಣಲಿಲ್ಲ. ಈ ವಿಷಯದಲ್ಲಿ ಶ್ರೀ ಶೃಂಗೇರಿ ಮಠದವರು ವಿಚಾರಣೆ ನಡೆಸಲು ತನ್ನ ಕಡೆಯ ಅಧಿಕಾರಿಗಳನ್ನು ಕಳುಹಿಸಿರುವರೋ ಎಂಬ ವಿಷಯ ತಿಳಿಯಬೇಕಾಗಿದೆ.

(ಈ ಪತ್ರವನ್ನು 9-5-1936ರಲ್ಲಿ ಮದ್ರಾಸು ಗಜೆಟಿಯವರ ಪರ್ಸನಲ್ ಅಸಿಸ್ಟೆಂಟ್ ಶ್ರೀ ಕೆ.ಎನ್. ಕೃಷ್ಣಸ್ವಾಮಿ ಅಯ್ಯರ್, ಬಿ.ಎ. ರವರು ಪುತ್ತೂರು ವರ್ಗದಾರ ದಿವಂಗತ ಶ್ರೀ ನಟ್ಟೋಜಿ ಶಿವರಾಯರಿಗೆ ಬರೆದದ್ದಾಗಿದೆ - ಈ ಪತ್ರದಿಂದ ಅವರು ಬರುವಾಗ ಶ್ರೀ ಶೃಂಗೇರಿ ಮಠವು ಹಾಳುಕೆಡವಲ್ಪಟ್ಟಿತ್ತು ಎಂದು ವ್ಯಕ್ತವಾಗುತ್ತವೆ.)

1931ನೇ ಇಸವಿಯಲ್ಲಿ ಈ ಶಾಖಾ ಮಠವನ್ನು ಶ್ರೀ ಶೃಂಗೇರಿ ಮಠದ ಅಧಿಕಾರಿಗಳೂ ದಕ್ಷಿಣ ಕನ್ನಡ ಜಿಲ್ಲೆಯ ಅವರ ಶಿಷ್ಯ ವರ್ಗದವರೂ ಕಟ್ಟೋಣದ ಜೀರ್ಣೋದ್ಧಾರ ಮಾಡಲು ಮತ್ತು ಕಾಣೆಯಾದ ಲಿಂಗದ ಸ್ಥಳದಲ್ಲಿ ಹೊಸ ಲಿಂಗ ಒಂದನ್ನು ಪ್ರತಿಷ್ಠಿಸಲು ಹೊರಟಾಗ ಆಗಿನ ಮಾಧ್ವ ಟ್ರಸ್ಟಿಗಳು ಮತ್ತು ದೇವಳದ ಮೇನೇಜರರು ಆತಂಕಿಸಿದರೆಂದೂ ಇದರಿಂದಾಗಿ ಶ್ರೀ ಶೃಂಗೇರಿ ಮಠಕ್ಕೂ ದೇವಳಕ್ಕೂ ವ್ಯಾಜ್ಯಗಳು ನಡೆಯುವ ಸಂದರ್ಭ ಉಂಟಾದಾಗ ದೇವಳದ ಟ್ರಸ್ಟಿಗಳು ಪುನಃ ರಾಜಿಯಿಂದ ಮಠವನ್ನು ಕಟ್ಟಿಸಲು ಮಠದ ಅಧಿಕಾರಿಗಳಿಗೆ ಬಿಟ್ಟು ಕೊಟ್ಟರೆಂದೂ ತಿಳಿದುಬರುತ್ತದೆ.

ಈ ರಾಜಿ ಮಧ್ಯಸ್ಥಿಕೆ ಪ್ರಕಾರ ಪುನಃ ಮಠವು ಶ್ರೀ ಶೃಂಗೇರಿ ಮಠದವರಿಂದ ಜೀರ್ಣೋದ್ಧಾರ ಮಾಡಿಸಲ್ಪಟ್ಟು ಖರ ಸಂವತ್ಸರದ ವೈಶಾಖ ಬಹುಶ ದಶಮಿಾ ಬುಧವಾರ ಕರ್ಕಾಟಕ ಲಗ್ನದಲ್ಲಿ ಅಂದರೆ ತಾರೀಕು 30-5- 1951ರಲ್ಲು ಮಠದ ಗರ್ಭಗುಡಿಯಲ್ಲಿ ಕಾಶಿಯಿಂದ ತರಲ್ಪಟ್ಟ ಮಹದೇವ ಲಿಂಗ ಒಂದು. 'ಚಂದ್ರಮೌಳೀಶ್ವರ' ಅಭಿದಾನದಿಂದ ಆಗಿನ ಶೃಂಗೇರಿ ಮಠದ ಧರ್ಮಾಧಿಕಾರಿ ದಿವಂಗತ ವಿದ್ವಾನ್ ಶ್ರೀ ಶೇಷ ಶಾಸ್ತ್ರೀಗಳವರ ನೇತೃತ್ವದಲ್ಲಿ ಆಗಿನ ಜಗದ್ಗುರುಗಳಾದ ಪೂಜ್ಯ ಶ್ರೀಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿ ಗಳವರ ಅಪ್ಪಣೆ ಪ್ರಕಾರ ನರಹರಿ ಭಟ್ಟರಿಂದ ಪ್ರತಿಷ್ಠಿಸಲ್ಪಟ್ಟಿತು. ಪ್ರತಿಷ್ಠಾ ಕಾಲದಲ್ಲಿ ಶ್ರೀ ಶೃಂಗೇರಿ ಮಠದ ಶಿಷ್ಯ ವರ್ಗದವರಾದ ಈ ಜಿಲ್ಲೆಯ ಸ್ಮಾರ್ತ ಶಿವ ಬ್ರಾಹ್ಮಣ, ದೇಶಸ್ಥ, ಕರಾಡಸ್ಥ ಇತ್ಯಾದಿ ಬ್ರಾಹ್ಮಣ ವರ್ಗದವರೂ ಮತ್ತು ಇತರ ಗೌಡ ಸಮಾಜವ ಶಿಷ್ಯ ವರ್ಗದವರೂ ಅಲ್ಲದೆ ಊರಿನ ಮತ್ತು ಹೊರಗಿನ ಮಹನೀಯರೂ ಉಪಸ್ಥಿತರಾಗಿದ್ದರು. ಪ್ರತಿಷ್ಠೆಯು ಶ್ರೀ ಶೃಂಗೇರಿಯಿಂದಲೇ ಬರುವ ಋಗ್ವೇದ, ಯಜುರ್ವೇದ, ಸಾಮವೇದಗಳನ್ನು ಅಧ್ಯಯನ ಮಾಡಿದ ಮತ್ತು ಶಾಸ್ತ್ರ ಪಾರಂಗತರಾದ ಬ್ರಹ್ಮಶ್ರೀಗಳಾದ ಗಣಪತಿ ಸುಬ್ರಹ್ಮಣ್ಯ ಅವಧಾನಿಗಳು (ಮಠದ ಪುರೋಹಿತರು) ಶಂಕರ ನಾರಾಯಣ ಜ್ಯೋತಿಷ್ಕರು (ಆಸ್ಥಾನ ಜ್ಯೋತಿಷ್ಯರು) ನಂಜುಂಡ ಅವಧಾನಿಗಳು (ಶ್ರೀ ಶಾರದಾಂಬಾ ಅರ್ಚಕರು) ಶ್ರೀ ಸಾಮುಗ ಸುಬ್ರಹ್ಮಣ್ಯ ಭಟ್ಟ (ಪಾಠಶಾಲಾ ಪಂಡಿತರು) ಶ್ರೀ ನಾಗಳೆ ಸುಬ್ಬನರಸಿಂಹ ಭಟ್ರು ಮೊದಲಾದ ಸಾಧಾರಣ 10-15 ಜನ ಶ್ರೋತ್ರೀಯ ಬ್ರಾಹ್ಮಣರುಗಳ ವೇದಘೋಷಗಳಿಂದ ಜರಗಿತು. ಪ್ರತಿಷ್ಠಾ ಸಮಯದಲ್ಲಿ ಅಲ್ಲಿಯ ಮಾಧ್ವ ಮಠದ ಯತಿಗಳಾದ ದಿವಂಗತ ಶ್ರೀ ವಿಶ್ವಜ್ಞ ತೀರ್ಥ ಸ್ವಾಮಿಗಳು ಕೂಡಾ ಚಿತ್ತೈಸಿದ್ದರು. ಅಂತೂ ಪ್ರತಿಷ್ಠೋತ್ಸವವು ಅತಿ ವಿಜೃಂಭಣೆಯಿಂದ ಜರಗಿತ್ತು. ಆದರೆ ದೇವಸ್ಥಾನದ ಆಗಿನ ಮೇನೇಜರರು ಮತ್ತು ಪಾರುಪತ್ಯೆಗಾರರು ಮಾಧ್ವರಾಗಿದ್ದುದರಿಂದ ಪ್ರತಿಷ್ಠಾ ಕೆಲಸಗಳಲ್ಲಿ ಶೃಂಗೇರಿ ಮಠದಿಂದ ಬಂದ ಧರ್ಮಾಧಿಕಾರಿಗಳಿಗೆ ಹೆಚ್ಚಿನ ಸಹಕಾರ ನೀಡದೆ ಉಪದ್ರವಕಾರಿಗಳಾಗಿಯೇ ವರ್ತಿಸಿದ್ದು ವ್ಯಸನಾಸ್ಪದವಾಗಿದೆ. ಈ ಪ್ರತಿಷ್ಠಾ ಮಹೋತ್ಸವ ಸಂದರ್ಭದಲ್ಲಿ ಭಾಗವಹಿಸಿದ್ದ ಈ ಪುಸ್ತಕದ ಲೇಖಕರು ದೇವಳದ ಮೇನೇಜರರ ಮೇಲಿನ ವರ್ತನೆಗೆ ಮತ್ತು ದೇವಳದಲ್ಲಿ

ನಡೆಯುತ್ತಿರುವ ಹಲವು ಅನ್ಯಾಯಗಳನ್ನು ಮನಗಂಡು ದೇವಳದ ಟ್ರಸ್ಟಿಗಳಾಗಲು ಪ್ರಯತ್ನಿ 1953ರಿಂದ ದೇವಳದ ಧರ್ಮದರ್ಶಿಗಳಾಗಿ ನೇಮಕಗೊಂಡರು. ಇವರ ನೇಮಕಕ್ಕೆ ಅನುಕೂಲವಾಗುವಂತೆ ಶ್ರೀ ಮಠದ ಆಗಿನ ಧರ್ಮಾಧಿಕಾರಿಗಳು ಕೊಟ್ಟ ಸಂದೇಶ ಪತ್ರವು ಹೀಗಿದೆ :

Ayurveda Kalavisharada. Vidwan Pandit K. Sesha Sastry Dharmadhikari.
Sri Jagadguru Sri Sringeri Mutt, Sringeri P.O.
(Mysore State) Date 27-6-1952

Recommendatory letter, forwarded on behalf of Sri Sringeri Jagadguru Mutt by Vidwan Pandit Sri K. Shesha Shastry, Dharmadhikari of Sringeri Mutt, in respect of the District of South Kanara etc.

Dr. M.S.A. Sharama, Ayurvedic Physician now practising in Kankanady, Mangalore -2 is a disciple of our Muttand he belongs to the Smartha community of Pancha Dravida Brahmins of South Kanara possessing warg lands in Bellipady village of Puttur Taluk. He is an energetic young man possessing an allround ability in social, political and religious activities. I am fully aware that he was a Congress underground worker who undertook an active part in individual Satyagraha and fought for the independence of India. Being a religious minded person well known through his aforesaid activities, I do gladly recommend him to be our Mutt representative of South Kanara District amoung the Board of trustees of Sri. Subramanya Temple.

Sd/ Vidwan K. Shesha Shastry.
ಶೃಂಗೇರಿ ಮಠದ ಮೊಹರು Dharmadhikari

**ಅರ್ಥ** : ಲೇಖಕರು ಲೇಖಕರು ಪಂಚ ದ್ರಾವಿಡ ಬ್ರಾಹ್ಮಣ ವರ್ಗಕ್ಕೆ ಸೇರಿದ ಶೃಂಗೇರಿ ಮಠದ ಶಿಷ್ಯರೂ, ರಾಜಕೀಯ, ಧಾರ್ಮಿಕ, ಸಾಮಾಜಿಕ ವ್ಯವಹಾರಗಳಲ್ಲಿ ನುರಿತವರೂ ಮತ್ತು ಸ್ವಲ್ಪ ಜಮೀನು ಇದ್ದು ಆಯುರ್ವೇದ ವೈದ್ಯ ವೃತ್ತಿಯಲ್ಲಿದ್ದು ಎಲ್ಲಾ ವಿಧದ ಚಟುವಟಿಕೆಗಳಲ್ಲಿ ಇರುವ ಧಾರ್ಮಿಕ ಮನೋಭಾವನೆಯುಳ್ಳವರಾದುದರಿಂದ ಇವರು ಸುಬ್ರಹ್ಮಣ್ಯ ಕ್ಷೇತ್ರದ ಧರ್ಮದರ್ಶಿತನಕ್ಕೆ ಅರ್ಹರಾಗಿದ್ದಾರೆಂದು ತಿಳಿಸಲಾಗಿದೆ.

## ರಾಜಿ ತೀರ್ಮಾನದ ಶರತ್ತುಗಳು (ಯಥಾಪ್ರತಿ)

ಕುಕ್ಕೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನಕ್ಕೂ ಶ್ರೀ ಜಗದ್ಗುರು ಸಂಸ್ಥಾನ ಶೃಂಗೇರಿ ಮಠಕ್ಕೂ ಸುಬ್ರಹ್ಮಣ್ಯ ಗ್ರಾಮದ ಸರ್ವೆ ನಂಬ್ರ 82/10ನೇ ಸ್ಥಳದ ಮತ್ತು ಅದರಲ್ಲಿರುವ ಕಟ್ಟಡಗಳ ಹಕ್ಕಿನ ಮತ್ತು ಸದ್ರಿ ದೇವಸ್ಥಾನದ ಆಡಳಿತೆ ವಿಚಾರವಾಗಿ ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ಟ್ರಸ್ಟಿಗಳು ಮತ್ತು ಶ್ರೀ ಮಠದ ಕಡೆಯಿಂದ ಈ ವಿವಾದವನ್ನು ರಾಜಿ ಮಾಡುವರೇ ಅಧಿಕಾರ ಹೊಂದಿದ ಏಜಂಟರು ಕೂಡ ಈ ಕೆಳಗೆ ವಿವರಿಸಿದ ಪ್ರಕಾರ ರಾಜಿಯಿಂದ ತೀರ್ಮಾನ ಮಾಡಿಕೊಂಡಿರುತ್ತಾರೆ.

ಈ ತೀರ್ಮಾನವು ಉಭಯತರಿಗೂ ಶಾಶ್ವತವಾಗಿ ಬಂಧಿಸತಕ್ಕದ್ದು ಆಗಿರುತ್ತದೆ.

1. ಸದ್ರಿ ಸರ್ವೆ ನಂಬ್ರ 82/10ನೇ ಸ್ಥಳವು ಅದರಲ್ಲಿರುವ ಕಟ್ಟಡಗಳು ಶೃಂಗೇರಿ ಮಠದ್ದೆಂದು ಎಣಿಸಲ್ಪಡತಕ್ಕದ್ದು.

2. ಸದ್ರಿ ಚಂದ್ರಮೌಳೀಶ್ವರ ದೇವಸ್ಥಾನದ ಆಡಳಿತವನ್ನು ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ಟ್ರಸ್ಟಿಗಳು ಶಾಶ್ವತವಾಗಿ ನಡೆಸಿಕೊಂಡು ಬರತಕ್ಕದ್ದು. ಆದರೆ ಶೃಂಗೇರಿ ಮಠದ ಸಂಪ್ರದಾಯ ವಿರುದ್ಧವಾದ ಆಚರಣೆಗಳಿಗೆ ಅವಕಾಶವಿರ ಕೂಡದು, ಅಂತಹ ಸಂದರ್ಭಗಳಲ್ಲಿ ಮಾತ್ರ ಆಡಳಿತವನ್ನು ಮತ್ತು ಸ್ಥಳ ವ, ಕಟ್ಟೋಣಗಳ ಸ್ವಾಧೀನತೆಯನ್ನು ಟ್ರಸ್ಟಿಗಳಿಂದ ತಪ್ಪಿಸಲು ಶ್ರೀ ಮಠದವರು ಸಂಪೂರ್ಣ ಅಧಿಕಾರ ಉಳ್ಳವರಾಗಿರುತ್ತಾರೆ. ಇದು ವಿನಃ ಟ್ರಸ್ಟಿಗಳೆ ಆಡಳಿತೆಯನ್ನು ನಡೆಸಿಕೊಂಡು ಬರತಕ್ಕದ್ದು.

3. ಸದ್ರಿ ದೇವಸ್ಥಾನದ ವಿನಿಯೋಗದ ಬಗ್ಗೆ ಈ ವರೆಗೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನದಿಂದ ಸಲ್ಲುತ್ತಿದ್ದ ಅಮೃತಪಡಿ ವಗೈರೆ ಸಾಮಾನುಗಳು ಇನ್ನು ಮುಂದೆಯೂ ಮುಂಚಿನಂತೆ ಸಲ್ಲಿಸಲ್ಪಡತಕ್ಕದ್ದು.

4. ಸದ್ರಿ ದೇವಸ್ಥಾನದಲ್ಲಿ ಪೂಜೆ ಮಾಡುವ ಬಗ್ಗೆ ಅರ್ಚಕರ ತಲುಬನ್ನು ಶೃಂಗೇರಿ ಮಠದವರು ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ಮ್ಯಾನೇಜರರ ಮುಖಾಂತರ ಅರ್ಚಕರಿಗೆ ಸಲ್ಲತಕ್ಕದ್ದು.

5. ಸದ್ರಿ ದೇವಸ್ಥಾನದ ಅರ್ಚಕರ ಮೊಕ್ರೂರಾತಿಯನ್ನು ಸುಬ್ರಹ್ಮಣ್ಯ ದೇವಸ್ಥಾನದ ಆಡಳಿತೆ ಕೌನ್ಸಿಲ್‌ನವರ ಸಲಹೆಯನ್ನು ಅನುಸರಿಸಿ ಮಂಜೂರು ಮಾಡುವ ಅಧಿಕಾರವು ಶ್ರೀ ಶೃಂಗೇರಿ ಮಠಕ್ಕೆ ಸಂಬಂಧಪಟ್ಟದ್ದು.

ದಿ. ವಿದ್ವಾನ್ ಶ್ರೀ ಶೇಷ ಶಾಸ್ತ್ರಿಗಳವರ ನಂತರ ಶ್ರೀ ಶೃಂಗೇರಿ ಮಠದ ಧರ್ಮಾಧಿ ಕಾರಿಗಳಾಗಿ ನೇಮಕ ಹೊಂದಿದ ಬ್ರಹ್ಮಶ್ರೀ ಕೆ.ಯಸ್. ವೆಂಕಟ ಸುಬ್ಬಾವಧಾನಿಗಳು ಶ್ರೀ ಸುಬ್ರಹ್ಮಣ್ಯಕ್ಕೆ ಬಂದು ಆಗಿನ ಟ್ರಸ್ಟಿಗಳಲ್ಲಿ ಶೃಂಗೇರಿ ಮಠದ ಏಳಿಗೆ ವಿಚಾರದಲ್ಲಿ ಮೊಕ್ತಾ ಮಾತಾಡಿದ ಪ್ರಕಾರ ಈ ಕೆಳಗಿನ ನಿರ್ಣಯವು ದೇವಳದ ಕೌನ್ಸಿಲಿನಲ್ಲಿ ಮಂಜೂರು ಮಾಡಲ್ಪಟ್ಟಿದೆ.

ತಾ. 29-4-1957ರಲ್ಲು ಜರಗಿದ ದೇವಸ್ಥಾನದ ಆಡಳಿತೆ ಕೌನ್ಸಿಲ್ ಮೆಂಬರರ ಮೀಟಿಂಗ್‌ನಲ್ಲಿ ಶ್ರೀ ಶೃಂಗೇರಿ ಶಾಖಾ ಮಠದ ವಿಚಾರದಲ್ಲಿ ಆದ ನಿರ್ಣಯ :

ಹಾಜ್ರು - ಶ್ರೀಗಳಾದ ಎ. ಭೀಮ ಭಟ್, ಬಿ. ನಾರಾಯಣ ಶೇಕ ಡಾ. ಎಂ.ಎಸ್.ಎ. ಶರ್ಮಾ ನಿರ್ಣಯ ನಂ. 770(27).

ಶೃಂಗೇರಿ ಮಠದ ಧರ್ಮಾಧಿಕಾರಿಗಳಾದ ಬ್ರಹ್ಮಶ್ರೀ ಕೆ.ಯಸ್. ವೆಂಕಟ ಸುಬ್ಬಾ ಅವಧಾನಿಗಳವರು ನಿನ್ನೆದಿನ ಇಲ್ಲಿಗೆ ಬಂದಾಗ ಟ್ರಸ್ಟಿಗಳಲ್ಲಿ ವಿಚಾರ ವಿನಿಮಯ ಮಾಡಿದ ವಿಚಾರ-

ನಿರ್ಣಯ :- ದೇವಸ್ಥಾನದ ಆಡಳಿತೆಯಲ್ಲಿರುವ ಶೃಂಗೇರಿ ಮಠದ ಎದುರು ಗೋಪುರದ ಕಟ್ಟೋಣವು ಬಿರುಕು ಬಿಟ್ಟ ಕಾರಣ ಸದ್ರಿ ಕಟ್ಟೋಣವನ್ನು ಸಂಪೂರ್ಣವಾಗಿ ತೆಗೆದು ಹೊಸತಾಗಿ ಕಟ್ಟಿಸಬೇಕೆಂತಲೂ, ದೇವಸ್ಥಾನದ ಖರ್ಚಿನಿಂದ ಪ್ರಕೃತ ಶೃಂಗೇರಿ ಮಠದಲ್ಲಿ ನಡೆಯುತ್ತಿರುವ ಪೂಜಾದಿಗಳಿಗೆ ಈ ವರೆಗೆ ತಗಲಿದ ಖರ್ಚನ್ನು ಶೃಂಗೇರಿ ಮಠದಿಂದ ಒದಗಿಸಿ

ಕೊಡುತ್ತೇವಾಗಿಯೂ, ಇನ್ನು ಇದಕ್ಕಿಂತ ಹೆಚ್ಚಿನ ವಿದ್ಯಾವಂತರಿಂದ ವೇದೋಕ್ತ ಪೂಜಾದಿಗಳನ್ನು ಮಾಡಿಸಿದ್ದಲ್ಲಿ ಅದಕ್ಕಾಗುವ ಹೆಚ್ಚಿನ ಖರ್ಚನ್ನು ಕೊಡಿಸಿಕೊಡುತ್ತೇವಾಗಿಯೂ ಈ ಸನ್ನಿಧಿಗೆ ಚಿತ್ತೈಸಿದ ಸರ್ಕಾರಿ ಮಠದ ಧರ್ಮಾಧಿಕಾರಿಗಳು ಅಭಿಪ್ರಾಯಪಟ್ಟಿದ್ದರಿಂದ ಕಟ್ಟೋಣ ದುರಸ್ತಿ ಬಗ್ಗೆ ಇಂಜಿನೀಯರಿಂದ ಎಸ್ಟಿಮೇಟು ಮಾಡಿಸಿ ಕಳುಹಿಸಿ ಕೊಡಬೇಕಾಗಿಯೂ, ಗತ ಪೂಜಾದಿ ಖರ್ಚುಗಳ ಬಿಲ್ಲನ್ನು ಸಹಾ ಕಳುಹಿಸಿ ಕೊಡಬೇಕಾಗಿಯೂ ವಿಧಿಯುಕ್ತ ಪೂಜೆಯ ಒಬ್ಬ ವ್ಯಕ್ತಿಯನ್ನು ನೇಮಿಸಬೇಕಾಗಿಯೂ ನಿರ್ಣಯಿಸಲಾಯಿತು.

## ಈಗಿನ ಶೃಂಗೇರಿ ಜಗದ್ಗುರುಗಳಾದ ಅಭಿನವ ವಿದ್ಯಾತೀರ್ಥ ಮಹಾ ಸ್ವಾಮಿಗಳವರ ದಕ್ಷಿಣ ಕನ್ನಡ ಜಿಲ್ಲೆಯ ವಿಜಯ ಯಾತ್ರೆಯ ಸೂಕ್ಷ್ಮ ಪರಿಚಯ

ಈಗಿನ ಶ್ರೀ ಶೃಂಗೇರಿ ಜಗದ್ಗುರುಗಳಾದ ಶ್ರೀಮದಭಿನವ ವಿದ್ಯಾತೀರ್ಥ ಸ್ವಾಮಿಗಳವರು ತಮ್ಮ ಪರಿವಾರದೊಂದಿಗೆ ಇದೇ 20ನೇ ಶತಮಾನದ ಮಧ್ಯದ 1956ರ ಮಾರ್ಚ ತಿಂಗಳಲ್ಲಿ ತಮ್ಮ ವಿಜಯ ಯಾತ್ರೆಯೊಂದನ್ನು ಮೊತ್ತಮೊದಲ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೈಕೊಂಡರು. ಈ ಸಂದರ್ಭದಲ್ಲಿ ಜಗದ್ಗುರುಗಳವರು ಮೊದಲು ಧರ್ಮಸ್ಥಳಕ್ಕೆ ಬಂದು ಅಲ್ಲಿ ಮಂಜುನಾಥೇಶ್ವರನ ದರ್ಶನ ಮಾಡಿಕೊಂಡು ಅಲ್ಲಿಂದ ಅವರ ಶಿಷ್ಯವರ್ಗದ ದೇಶಸ್ಥ ಬ್ರಾಹ್ಮಣ ಸಮಾಜದವರ ಅಶ್ವತ್ಥಪುರ ಅಗ್ರಹಾರದ ಶ್ರೀರಾಮ ದೇವಸ್ಥಾನದ ಸಮೀಪದಲ್ಲಿ ನೂತನವಾಗಿ ಕಟ್ಟಿಸಲ್ಪಟ್ಟ ಮಂದಿರದಲ್ಲಿ ಅಮೃತ ಶಿಲೆಯಿಂದ ಕೆತ್ತಿದ ಶ್ರೀ ಶಂಕರ ಭಗವತ್ಪಾದರ ಮೂರ್ತಿಯೊಂದನ್ನು ಪ್ರತಿಷ್ಠಿಸಿ ಭಕ್ತಾದಿಗಳನ್ನು ಅನುಗ್ರಹಿಸಿದರು. ಅಲ್ಲಿಂದ ಹೊರಟವರು ಪೊಳಲಿ ರಾಜರಾಜೇಶ್ವರಿ ಅಮ್ಮನವರ ಸನ್ನಿಧಿಗೆ ಬಂದು ಸ್ವತಃ ಅಮ್ಮನವರನ್ನು ಪೂಜಿಸಿ ಅಲ್ಲಿಂದ ಕಾಸರಗೋಡು ತಾಲೂಕಿನಲ್ಲಿರುವ ಆಗಲ್ಪಾಡಿ ಮಠ, ಮಲ್ಲದ ಮಠ, ಕಾಸ್ರಗೋಡುನಲ್ಲಿರುವ ಮಲ್ಲಿಕಾರ್ಜುನ ದೇವಸ್ಥಾನ ಇತ್ಯಾದಿ ಸ್ಥಳಗಳನ್ನು ಸಂದರ್ಶಿಸಿ ಅಲ್ಲಿಂದ ಬಜಕೂಡ್ಲು ಮಹಾಲಿಂಗೇಶ್ವರ ದೇವಸ್ಥಾನಕ್ಕೆ ಚಿತ್ತೈಸಿ ಅಲ್ಲಿಂದ ತೋಟಕಾಚಾರ್ಯ ಸ್ಥಾಪನೆಗೆ ಒಳಪಟ್ಟ ಎಡನೀರು ಮಠಕ್ಕೆ ಬರುವಂಥವರಾದರು. ಅಲ್ಲಿ ಶ್ರೀಗಳವರು ಅಲ್ಲಿಯ ಸ್ವಾಮಿಗಳವರಿಂದ ಪಾದ ಪೂಜೆ ಕಾಣಿಕೆ ಭಿಕ್ಷೆ ಮೊದಲಾದ ಸಂಭ್ರಮದ ಸ್ವಾಗತವನ್ನು ಪಡೆದರು. ಆಮೇಲೆ ಅಲ್ಲಿಂದ ಹೊರಟ ಶ್ರೀಗಳವರು ಕೂಡ್ಲು, ಕುತ್ಯಾಳ ಗೋಪಾಲಕೃಷ್ಣ ದೇವಸ್ಥಾನದಲ್ಲಿ ದೇವರ ದರ್ಶನವಾದ ಮೇಲೆ ಪೂಜೆಗಳನ್ನು ಸ್ವೀಕರಿಸಿಕೊಂಡು ಎಪ್ರಿಲ್ 14ರಂದು ಅವರ ಶಿಷ್ಯ ವರ್ಗದ ಸ್ಥಳೀಯ ಸ್ಮಾರ್ತ ಶಿವ ಬ್ರಾಹ್ಮಣ ಸಮಾಜದವರ ಉಳ್ಳಾಲ (ಸೋಮೇಶ್ವರ) ಅದ್ವೈತಾಶ್ರಮಕ್ಕೆ ಚಿತ್ತೈಸಿದರು. ಅಲ್ಲಿ ಶ್ರೀ ಶಂಕರ ಭಗವತ್ಪಾದರ ಕಪ್ಪು ಶಿಲಾ ವಿಗ್ರಹವನ್ನು ವೇದೋಕ್ತ ರೀತಿಯಿಂದ ಪ್ರತಿಷ್ಠೆ ಮಾಡಿದ್ದು ಮಾತ್ರವಲ್ಲದೆ ಹತ್ತಿರದ ಸೋಮೇಶ್ವರದಲ್ಲಿ ಸಮುದ್ರ ಸ್ನಾನವನ್ನು ತೀರಿಸಿ ಶ್ರೀ ಸೋಮೇಶ್ವರನನ್ನು ಸಂದರ್ಶಿಸಿದರು. ಅಲ್ಲಿಂದ ತಾ. 16ರಂದು ಸಂಜೆ ಲೋಂಚಿನಿಂದ ನೇತ್ರಾವತಿ ನದಿಯನ್ನು ದಾಟಿ ಮಂಗಳೂರಿಗೆ ಆಗಮಿಸಿ ಕದಿರೆಯಲ್ಲಿರುವ ದಿ. ಆಯುರ್ವೇದ ಭೂಷಣ ಯಂ.ವಿ. ಶಾಸ್ತ್ರಿಗಳವರ ಗೋಪಾಲ ಬೇಷಾಜಾಶ್ರಮದಲ್ಲಿ ಬಂದಿಳಿದರು. ಅದೇ ದಿನ ಸಂಜೆ ಜಗದ್ಗುರುಗಳಾದ ಮೇಲಿನ ಸಮಾಜವರ ನೇತೃತ್ವದಿಂದ ಅಡ್ಡ ಪಾಲಕಿ ಮಹೋತ್ಸವವು ಗಿರಿಜಾ ಕಾಫಿ ವರ್ಕ್ಸ್ ಶ್ರೀ ಲಚ್ಚಯ್ಯ

ಶೆಟ್ಟರ ಮಗ ಶ್ರೀ ಗೋಪಾಲ ಶೆಟ್ಟ ಸಹಕಾರ ಪಡೆದು ಅಲ್ಲಿಂದ ಹೊರಟು ನಗರದ ಪ್ರಸಿದ್ಧ ಮುಖ್ಯ ಬೀದಿಗಳಲ್ಲಿ ವಾದ್ಯಘೋಷಗಳಿಂದಲೂ ವೇದ ಮಂತ್ರಗಳ ಪಠನೆಯಿಂದಲೂ ಅತೀ ವಿಜೃಂಭಣೆಯಿಂದ ಮೆರವಣಿಗೆ ಬಂದು ರಾತ್ರೆ (ಮೇಲಿನ ಸಮಾಜದವರ) ಶ್ರೀ ಸುಬ್ರಹ್ಮಣ್ಯ ಸಭಾಸದನದಲ್ಲಿ ಬಂದು ಇಳಿಯಿತು. ಶ್ರೀಗಳವರು ಏಪ್ರಿಲ್ ತಾರೀಕು 17ರಿಂದ 23ರ ವರೆಗೆ ಶ್ರೀ ಸುಬ್ರಹ್ಮಣ್ಯ ಸದನದಲ್ಲೆ ಇದ್ದು ನಗರದ ಹೆಚ್ಚಿನ ಎಲ್ಲಾ ಹಿಂದೂ ವರ್ಗದವರ ಮನ್ನಣೆಯನ್ನು ಪಡೆದು ಅನೇಕರಿಂದ ಪಾದಪೂಜಾದಿಗಳನ್ನು ಸ್ವೀಕರಿಸಿ ಅವರಿಗೆಲ್ಲಾ ಯೋಗ್ಯ ರೀತಿಯಿಂದ ಫಲ ಮಂತ್ರಾಕ್ಷತೆಗಳನ್ನು ಕೊಟ್ಟು ಅನುಗ್ರಹಿಸಿದರು. ಈ ಮಧ್ಯದಲ್ಲಿ ಶ್ರೀಗಳವರು ನಗರದಲ್ಲಿರುವ ಮಂಗಳಾವತೀ ದೇವಸ್ಥಾನ, ಶ್ರೀ ಶರಭೇಶ್ವರ ದೇವಸ್ಥಾನ, ಕದ್ರಿ ಮಂಜುನಾಥೇಶ್ವರ ದೇವಸ್ಥಾನ ಮೊದಲಾದ ದೇವಾಲಯಗಳನ್ನು ಸಂದರ್ಶಿಸಿದ್ದು ಮಾತ್ರವಲ್ಲದೆ ನಗರಕ್ಕೆ ಸ್ವಲ್ಪ ದೂರದಲ್ಲಿರುವ ಪಾವಂಜೆ ಶ್ರೀ ಜ್ಞಾನಶಕ್ತಿ ಸುಬ್ರಹ್ಮಣ್ಯ ದೇವರ ದರ್ಶನ ಮಾಡಿ ಅಲ್ಲಿಯೂ ಶಿಷ್ಯ ವೃಂದವನ್ನು ಅನುಗ್ರಹಿಸಿ ಬಂದರು. ಮಂಗಳೂರಿನಿಂದ ಪೆರಡಾಲ್ ಮಹಾಜನ್ ಸಂಸ್ಕೃತ ಕಾಲೇಜಿಗೆ ಚಿತ್ತೈಸಿ ಅಲ್ಲಿಯ ಸಂಸ್ಕೃತ ಪ್ರಾಧ್ಯಾಪಕರನ್ನು ಅನುಗ್ರಹಿಸಿ ಅಲ್ಲಿಂದ ಕಾರ್ಕಳಕ್ಕೆ ತೆರಳುವವರಾದರು. ಕಾರ್ಕಳದಲ್ಲಿ ಗೌಡ ಸಾರಸ್ವತ ಬ್ರಾಹ್ಮಣ ಸಮಾಜದವರ ಶ್ರೀನಿವಾಸ ಆಶ್ರಮದಲ್ಲಿ ಉಳಿದುಕೊಂಡು ಗೌಡ ಸಾರಸ್ವತ ಸಮಾಜದಿಂದ ಪಾದ ಪೂಜಾದಿಗಳನ್ನು ಸ್ವೀಕರಿಸಿ ಅಲ್ಲಿಯ ಅನಂತ ಪದ್ಮನಾಭ ಮತ್ತು ಶ್ರೀ ವೆಂಕಟ್ರಮಣ ದೇವರನ್ನು ಸಂದರ್ಶಿಸಿ ಶಂಕರನಾರಾಯಣಕ್ಕೆ ತೆರಳುವವರಾದರು.

ತಾ. 15-51956ರಂದು ಶ್ರೀಗಳವರು ಹಂಗಾರಕಟ್ಟೆ ಹತ್ತಿರ ಇರುವ ಸ್ಮಾರ್ತ ಸಂಪ್ರದಾಯದ ಬಾಳಕುದುರು ಮಠದಲ್ಲಿ ಸನ್ಮಾನಿತರಾಗಿ ಆ ವರ್ಷದ ಶ್ರೀ ಶಂಕರ ಜಯಂತೀ ಸಮಾರಂಭದ ಅಧ್ಯಕ್ಷ ಸ್ಥಾನವನ್ನು ವಹಿಸಿ ಅನುಗ್ರಹ ಭಾಷಣ ಮಾಡಿ ಅಲ್ಲಿಂದ ಬೀಳ್ಕೊಂಡ ಶ್ರೀಗಳವರು ಸಾಲಿಗ್ರಾಮಕ್ಕೆ ತಾ. 16ರಂದು ಚಿತ್ತೈಸಿದರು. ಅಲ್ಲಿ ಗುರು ನರಸಿಂಹ ದೇವರ ದರ್ಶನ ಮಾಡಿ ಸ್ಮಾರ್ತ ಸಂಪ್ರದಾಯದ ಕೂಟ ಮಹಾ ಜಗತ್ತಿನ ಶಿಷ್ಯ ವರ್ಗದವರಾದ ಕೋಟ ಬ್ರಾಹ್ಮಣರಿಂದ ಹೆಚ್ಚಿನ ಸನ್ಮಾನವನ್ನು ಪಡೆದು ಅಲ್ಲಿಯ ಅವರ ಸಮಾಜದ ವಾಣೀ ವಿಲಾಸ ಸಂಸ್ಕೃತ ಶಾಲೆಗೆ ಸಂದರ್ಶನವಿತ್ತು ಅಲ್ಲಿಯ ವಿದ್ವಾಂಸರನ್ನು ಅನುಗ್ರಹಿಸಿ ಕುಂದಾಪುರಕ್ಕೆ ತೆರಳುವವರಾದರು.

ಹಾಗೆಯೆ ಕುಂದಾಪುರ ತಾಲೂಕಿನಲ್ಲಿ ಕೆಲವು ಸ್ಥಳಗಳನ್ನು ಸಂದರ್ಶಿಸಿ ಕೊಂಡು ಅಲ್ಲಿಂದ ಪುನಃ ಓಂತಿರುಗಿ ಪುತ್ತೂರು ತಾಲೂಕಿನ ಮಹಾಲಿಂಗೇಶ್ವರ ದೇವಸ್ಥಾನಕ್ಕೆ ಆಗಮಿಸಿದರು.

---

§ ಪುಟ ನಂಬ್ರ 66ರಲ್ಲಿ ರಾಜಿ ಅರ್ಜಿಯಲ್ಲಿ ಬಿಟ್ಟುಹೋದ 6ನೇ ಕಲಂ:

6. ಸದ್ರಿ ದೇವಸ್ಥಾನದ ಆದಾಯ ಮತ್ತು ವೆಚ್ಚದ ಒಂದು ಲೆಕ್ಕವು ಪ್ರತ್ಯೇಕವಾಗಿ ಇಡಲ್ಪಟ್ಟು ವರ್ಷಕ್ಕೊಂದು ದಫೆ ಶ್ರೀ ಮಠದ ಅವಗಾಹನೆಗೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ಮೆನೇಜರವರು ಕಳುಹಿಸಿಕೊಡತಕ್ಕದ್ದು.

Sd. Agent

Approved by the Govt. of Mysore with their order No. 1112 my 309-40-4 dated 5-1-1942.

ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ಕೋಟ, ಶಿವಳ್ಳಿ, ಹವೀಕ, ಸ್ಥಾನಿಕಶಿವ ಬ್ರಾಹ್ಮಣ, ದೇಶಸ್ಥ ಕರಾಡ, ಚಿತ್ಪಾವನರೆಂಬ ಬ್ರಾಹ್ಮಣ ಪಂಗಡಗಳು ತಮ್ಮೊಳಗೆ ಭೇದಭಾವನ್ನು ಕಟ್ಟಿಕೊಳ್ಳದಂತೆ ಮಾಡಲು ಸಹಭೋಜನ ಸಂತರ್ಪಣೆಯನ್ನು ಮಾಡಿಸಿದರು. ಈ ಸಂದರ್ಭದಲ್ಲಿ ಶ್ರೀ ಸುಬ್ರಹ್ಮಣ್ಯದಿಂದ ಶ್ರೀಗಳವರೆಗೆ ಆಮಂತ್ರಣವು ಬಂದಿದ್ದರೂ ಮಳೆಗಾಲವು ಆರಂಭಿಸಿದ ಕಾರಣ ಅವರು ಪರಿವಾರ ಸಮೇತ ಸುಬ್ರಹ್ಮಣ್ಯಕ್ಕೆ ಬರಲು ಅನಾನುಕೂಲವೆಂದು ಕಂಡು ಬಂದದ್ದರಿಂದ ಶ್ರೀ ಸುಬ್ರಹ್ಮಣ್ಯದ ಪ್ರಯಾಣವನ್ನು ನಿಲ್ಲಿಸಬೇಕಾಯಿತು.

ಈ ರೀತಿ ಜಿಲ್ಲೆಯ ಹೆಚ್ಚಿನ ಎಲ್ಲಾ ಸ್ಥಳಗಳಲ್ಲಿ ಸಂಚರಿಸಿ ವಿಜೃಂಭಣೆಯ ಸ್ವಾಗತವನ್ನು ಪಡೆದುಕೊಂಡು ಶ್ರೀ ಜಗದ್ಗುರುಗಳವರು ಪುತ್ತೂರಿಂದ ಕೊಡಗಿನ ಮಡಿಕೇರಿಗೆ ತೆರಳುವವರಾದರು. ಉಡುಪಿಯ ಮಾಧ್ವರು ಮಾತ್ರ ಜಗದ್ಗುರು ಮಠದ ಗೌರವಕ್ಕೆ ಅನುಗುಣವಾದ ರೀತಿಯ ಆಮಂತ್ರಣವನ್ನು ಕೊಡದೇ ಇದ್ದುದರಿಂದ ಉಡುಪಿಯನ್ನು ಸಂದರ್ಶಿಸುವ ಸಂದರ್ಭವು ಶ್ರೀಗಳವರಿಗೆ ಒದಗಲಿಲ್ಲ. ಇವರ ಸಂಚಾರ ಕಾಲದಲ್ಲಿ ಮೈಸೂರು ಸರಕಾರದವರು ಇವರಿಗೂ ಇವರ ಪರಿವಾರದವರಿಗೂ ಶೃಂಗೇರಿ ಮಠದ ಗೌರವಕ್ಕೆ ತಕ್ಕುದಾದ ಯೋಗ್ಯ ಪೋಲಿಸ್ ಗೌರವ ರಕ್ಷಣೆಯನ್ನು ಕೊಟ್ಟಿದ್ದರು. ಈ ರೀತಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೃಂಗೇರಿಯ ಈಗಿನ ಜಗದ್ಗುರುಗಳವರ ವಿಜಯ ಯಾತ್ರೆಯು ಶಾಂತ ರೀತಿಯಿಂದ ವೈಭವಪೂರಿತವಾಗಿ ನಡೆಯಿತು. ಇವರ ವಿಜಯ ಯಾತ್ರೆಯಿಂದ ಶ್ರೀ ಶೃಂಗೇರಿ ಮಠಕ್ಕೆ ಸಾಧಾರಣ ಎರಡು ಮೂರು ಶತಮಾನಗಳಿಂದ ಬಿಟ್ಟುಹೋದ ಕನ್ನಡ ಜಿಲ್ಲೆಯ ಸಂಪರ್ಕವು ಪುನಃ ವ್ಯವಸ್ಥಿತ ರೀತಿಯಲ್ಲಿ ನೆಲೆಗೊಂಡಿತು.

ಸದಾಶಿವ ಸಮಾರಂಭಾಂ ಶಂಕರಾಚಾರ್ಯ ಮಧ್ಯಮಾಂ ।
ಅಸ್ಮದಾಚಾರ್ಯ ಪರ್ಯಂತಾಂ ವಂದೇ ಗುರು ಪರಂಪರಾಂ ॥

॥ ಶುಭಂ ಭದ್ರಂ ಮಂಗಳಂ ॥

## ಶ್ರೀ ಸುಬ್ರಹ್ಮಣ್ಯ ಮಠದ ಮಾಧ್ವ ವೈಷ್ಣವ ಸ್ವಾಮಿಗಳು ಇವರಿಂದ ದೇವಳಕ್ಕೆ ಒದಗಿದ ಲೋಪದೋಷಗಳು

ಈ ಸುಬ್ರಹ್ಮಣ್ಯ ಮಠವು ದೇವಳದ ಹೊರ ಅಂಗಣದ ಮೂಡು ಆಗ್ನೇಯ ಮೂಲೆಯಲ್ಲಿದೆ. ಇದರ ಸರ್ವೆ ನಂಬ್ರವು 82-2 ಆಗಿರುತ್ತದೆ. ಕ್ರಿಸ್ತಶಕ 1905ನೇ ಇಸವಿಯ ಸೆಟ್ಲ್‌ಮೆಂಟಿನ ಪ್ರಕಾರ ಮುಂಚಿನ ಈ ಮಠದ ಅಡಿಸ್ಥಳದ ಮೂಲಿ ವರ್ಗವನ್ನು ಪರಿಶೀಲಿಸಿ ನೋಡುವಾಗ ಈ ಸರ್ವೆ ನಂಬ್ರ 82-2 ಸ್ಥಾನಿಕ ಸ್ಮಾರ್ತ ಬ್ರಾಹ್ಮಣ ಇಂಜಾಡಿ ಕೃಷ್ಣಯ್ಯ ವರ್ಗದಲ್ಲಿ ಹೆಬ್ಬಾರ ಸುಬ್ರಾಯರ ಕುಡ್ತಲೆಗೆ ಸೇರಿದ್ದಾಗಿ ಇತ್ತೆಂದು ತಿಳಿದು ಬರುತ್ತದೆ. ಇದರ ವಿಸ್ತೀರ್ಣ ಬರೇ 24 ಸೆಂಟ್ಸು ಮಾತ್ರ. ಶ್ರೀ ಸುಬ್ರಹ್ಮಣ್ಯ ದೇವಸ್ಥಾನವು ಸ. ನಂಬ್ರ 82-1ರಲ್ಲಿದೆ. ಇದು ಪರಂಬೋಕು ಸ್ಥಳವಾಗಿದೆ. ಈ ಪರಂಬೋಕು ಸ್ಥಳದಲ್ಲಿ ದೇವಸ್ಥಾನವೂ ಅದರ ಹೊರ ಅಂಗಣವೂ ಸೇರಿದೆ. ಈಗ ಈ ಮಾಧ್ವ ಮಠದ ಸ್ವಾಮಿಗಳ ಆರಾಧ್ಯ ದೇವರಾದ ಸಂಪುಟ ನರಸಿಂಹ ದೇವರು ದೇವಸ್ಥಾನದ ಪರಂಬೋಕು ಸ್ಥಳದಲ್ಲಿ ಅಂದರೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ಒಳ ಅಂಗಣದ ಆಗ್ನೇಯ ಮೂಲೆಯಲ್ಲಿ ಇರುವ ಗುಡಿಯಲ್ಲಿದೆ. ಒಂದು ಸ್ವತಂತ್ರ ಮಠದ

ದೇವರು ಒಂದು ಸಾರ್ವಜನಿಕ ದೇವಸ್ಥಾನದ ಒಳ ಅಂಗಣದ ಗುಡಿಗೆ ಹೇಗೆ ಮತ್ತು ಏಕೆ ಬಂತು?

ಈ ಮಠದಲ್ಲಿ ಅಣ್ಣ ತಮ್ಮಂದಿರಿಬ್ಬರು ಸ್ವಾಮಿಗಳಾಗಿದ್ದುಕೊಂಡು ದೇವಳದ ಒಳ ಅಂಗಣದ ಆಗ್ನೇಯ ಮೂಲೆಯಲ್ಲಿರುವ ಗುಡಿಯಲ್ಲಿ ಇರಿಸಲ್ಪಟ್ಟ ತಮ್ಮ ವಠಾರದಲ್ಲಿದ್ದ ಸಂಪುಟ ನರಸಿಂಹ ದೇವರ ಅರ್ಚಕತನವನ್ನು ಮಾಡುತ್ತಾರೆ. ಈ ಮಠದ ಮೆನೇಜರರೂ ಸ್ವಾಮಿಗಳಾದ ಅಣ್ಣನೇ ಆಗಿರುತ್ತಾರೆ. ಈ ಮಠವನ್ನು ಮಠವೆಂದು ಹೇಳುವ ಬದಲು ಒಂದು ಕುಟುಂಬದ ಮನೆಯೆಂದು ಹೇಳಿದರೂ ತಪ್ಪಾಗಲಾರದು.

ಅತಿ ಪೂರ್ವದಲ್ಲಿ ಅಂದರೆ 18ನೇ ಶತಮಾನದ ಆದಿಯಲ್ಲಿ ಈ ಮಠದವರಿಗೆ ಸ್ವಂತ ಮಠವು ಶ್ರೀ ಸುಬ್ರಹ್ಮಣ್ಯ ಕ್ಷೇತ್ರದಲ್ಲಿ ಇದ್ದಿಲ್ಲವೆಂದೂ ಈ ಸ್ವಾಮಿಗಳು ತಮ್ಮ ಉಡುಪಿಯ ಮಾಧ್ವರನ್ನು ಕೂಡಿಕೊಂಡು ಸುಬ್ರಹ್ಮಣ್ಯಕ್ಕೆ ಚಂಪಾ ಷಷ್ಠಿಯ ಸಮಯ ಉತ್ಸವಕ್ಕೆ ಬಂದು ಕ್ಷೇತ್ರದಲ್ಲಿರುವ ಭಿಕ್ಷುಕ ಮಠದಲ್ಲಿ ಉಳಿದುಕೊಂಡು ಉತ್ಸವ ಮುಗಿದ ನಂತರ ಹೋಗುತ್ತಿದ್ದರೆಂದು ಗುರುವಂಶ ಕಾವ್ಯದ ಆಧಾರದಿಂದ ತಿಳಿದು ಬರುತ್ತದೆ. 18ನೇ ಶತಮಾನದ ಆದಿಯಲ್ಲಿ ಆಗಿನ ಶೃಂಗೇರಿ ಜಗದ್ಗುರುಗಳಾದ ಶ್ರೀ ಸಚ್ಚಿದಾನಂದ ಭಾರತಿ ಸ್ವಾಮಿಗಳು ಶ್ರೀ ಸುಬ್ರಹ್ಮಣ್ಯಕ್ಕೆ ಚಿತ್ತೈಸಿದ ಸಮಯ ತಾವು ಗಲಾಟೆ ಎಬ್ಬಿಸಿ ಅವಮಾನಿತರಾಗಿ ಹೋದ ಮಾಧ್ವ ಸ್ವಾಮಿಗಳೊಬ್ಬರು. ತನ್ನ ಸ್ಥಾನವನ್ನು ಸುಬ್ರಹ್ಮಣ್ಯದಲ್ಲಿ ಸ್ಥಿರಪಡಿಸಲು ಅನುಕೂಲವಾಗುವಂತೆ ಆಗಿನ ಪಾಳೆಗಾರರ ಬಲ್ಲಾಳ ರಾಯರ ಒಪ್ಪಿಗೆ ಪಡೆದು ಸುಬ್ರಹ್ಮಣ್ಯದ ಹತ್ತಿರ ಇರುವ ಸಂಕೇತ ಕುಕ್ಕೆ ಗ್ರಾಮದ ಇಂಜಾಡಿಯಲ್ಲಿ ಮಠವೊಂದನ್ನು ಕಟ್ಟಿಕೊಂಡು ಕುಳಿತರೆಂದೂ ತಿಳಿದು ಬರುತ್ತದೆ. ಕೆಲವು ಸಮಯದ ನಂತರ ಅಂದರೆ ಸಾಧಾರಣ 19ನೇ ಶತಮಾನದ ಆದಿಯಲ್ಲಿ ಆಗಿನ ಸ್ವಾಮಿಗಳು ಇಂಜಾಡಿಯಲ್ಲಿದ್ದ ತನ್ನ ಮಠವು ಸುಟ್ಟು ಹೋಯಿತೆಂಬ ನೆವನದಿಂದ ಸುಬ್ರಹ್ಮಣ್ಯನ ಆಗಿನ ಆಡಳಿತೆದಾರರಾದ ಸ್ಮಾರ್ತ ಶಿವ ಬ್ರಾಹ್ಮಣರಾದ ಹೆಬ್ಬಾರರ ಸ್ನೇಹವನ್ನು ಬೆಳೆಸಿಕೊಂಡು ಅವರ ಆಶ್ರಯವನ್ನು ಪಡೆದು ದೇವಸ್ಥಾನದ ಅಷ್ಟೋತ್ತರ ಉಪಾದಿಯೊಂದನ್ನು ವಹಿಸಿಕೊಂಡು ದೇವಸ್ಥಾನದ ಪೌಳಿಯ ಆಗ್ನೇಯ ಮೂಲೆಯಲ್ಲಿ ವಿನಾಯಕ ದೇವರ ಗುಡಿಯ ಎದುರಲ್ಲಿ ತನ್ನ ಕೈ ಪೂಜೆಯ ನರಸಿಂಹ ಸಾಲಿಗ್ರಾಮ ಇರುವ ಸಂಪುಟವನ್ನು ಇಟ್ಟುಕೊಂಡು ವಾಸಿಸಲು ಆರಂಭಿಸಿದರೆಂದೂ ಹಾಗೆ ದೇವಳದ ಉದ್ಯೋಗವನ್ನು ಮಾಡುತ್ತಿದ್ದ ಮಾಧ್ವ ಸ್ವಾಮಿಗಳು ಕಡುಮಾಧ್ವರಾದ ಮೈಸೂರು ದಿವಾನ್ ಪೂರ್ಣಯ್ಯನವರ ಕೃಪೆಗೆ ಪಾತ್ರರಾಗಿದ್ದಾರೆಂದೂ ತಿಳಿದು ಬರುತ್ತದೆ. ಹಾಗೆ ಅವರ ವಿನಾಯಕ ಗುಡಿಯ ಎದುರಲ್ಲಿ ನರಸಿಂಹ ದೇವರ ಸಂಪುಟವನ್ನು ಇಟ್ಟು ಪೂಜಿಸಿಕೊಂಡು ಬಂದುದರಿಂದ ಆ ಅಂಬಲಕ್ಕೆ ನರಸಿಂಹ ಅಂಬಲವೆಂಬ ಹೆಸರು ಕಾಯಂ ಆಗಿ ನಿಂತಿತು. ಇವರ ಮಠವೂ, ಇವರ ಗುಡಿಯೂ ಅದಕ್ಕೆ ಮೊದಲು ದೇವಸ್ಥಾನದ ಹೊರಗೆ ಸಾಧಾರಣ ಅರ್ಧ ಮೈಲು ದೂರದಲ್ಲಿ ಇದ್ದುದರಿಂದ ಇವರು ಒಬ್ಬ ದೊಡ್ಡ ಸಂಸ್ಥಾನವಂದಿಕರೆಂಬ ಹೆಸರನ್ನು ಇರಿಸಿಕೊಂಡದ್ದಾಗಿದೆ. ಇವರು ಸನ್ಯಾಸಿಗಳಾಗಿದ್ದುದರಿಂದ ಇವರಿಗೆ ದೇವಸ್ಥಾನದ ಮರು ಮರ್ಯಾದೆ ಕೊಟ್ಟು ಪರ್ವಕಾಲಗಳಲ್ಲಿ ಆಮಂತ್ರಣ

---

§ ಇದಕ್ಕೆ ಸಂಬಂಧಪಟ್ಟ ದಾಖ್ಲೆಗಳನ್ನು ಪರಿಶಿಷ್ಟ ಭಾಗದಲ್ಲಿ ನೋಡಿರಿ.

ಕೊಡುತ್ತಿದ್ದರು. ಈ ರೀತಿಯ ಮರ್ಯಾದೆಗಳನ್ನೆಲ್ಲಾ ತನ್ನ ಹಕ್ಕಿನದೆಂದು ಮಾಡಿಕೊಂಡು ದೇವಳದ ಆಡಳಿತೆಗೆ ಪ್ರವೇಶಿಸುವವರಾದರು.

ಹೀಗಿರುವ ಸಂದರ್ಭದಲ್ಲಿ ಶ್ರೀ ಸುಬ್ರಹ್ಮಣ್ಯ ದೇವರ ದರ್ಶನಕ್ಕೆ ಬಂದ ಶಿವಶಂಕರ ಬ್ರಹ್ಮಚಾರಿ ಎಂಬವರಿಂದ ಆಗಿನ ಸ್ವಾಮಿಗಳ ಶಿಷ್ಯ ವರದರಾಜ ಸ್ವಾಮಿಗಳೆಂಬವರು ಸ್ವರ್ಣಕ್ರಿಯೆ ಅಂದರೆ ಚಿನ್ನ ಮಾಡುವ ಕ್ರಮ ಕಲಿತು ಚಿನ್ನ ಮಾಡುತ್ತಾ ತಮ್ಮ ಹೆಸರಲ್ಲಿ ನಾಣ್ಯಗಳನ್ನು ಮಾಡಲು ಕ್ರಮ ಕಲಿತು ಚಿನ್ನ ಮಾಡುತ್ತಾ ತಮ್ಮ ಹೆಸರಲ್ಲಿ ನಾಣ್ಯಗಳನ್ನು ಮಾಡಲು ಆರಂಭಿಸಿದರೆಂದೂ ಈ ವಿಷಯವು ಸರಕಾರಕ್ಕೆ ತಿಳಿದೊಡನೆ ಸರಕಾರದ ದಲ್ವಾಯಿತರು ಬಂದು ಇವರನ್ನು ವಿಚಾರಿಸುವಾಗ ಈ ಶಿಷ್ಯ ಸ್ವಾಮಿಗಳು ಕೊಡಗಿಗೆ ಹತ್ತಿರ ಇರುವ ರಾಮನಾಥಪುರ ಎಂಬಲ್ಲಿಗೆ ಓಡಿಹೋಗಿ ಅಲ್ಲಿ ಕೆಲವು ಕಾಲ ಇದ್ದು ಅಲ್ಲಿ ಇರುವ ಒಂದು ಸುಬ್ರಹ್ಮಣ್ಯ ದೇವಸ್ಥಾನವನ್ನು ತಮ್ಮದನ್ನಾಗಿ ಮಾಡಿಕೊಂಡು ಅಲ್ಲಿಯೇ ಇದ್ದರೆಂದು ತಿಳಿದುಬರುತ್ತದೆ.

ಇದಕ್ಕೆ ದೃಷ್ಟಾಂತವಾಗಿ ಈಗಲೂ ಈ ಮಾಧ್ವ ಮಠಕ್ಕೆ ರಾಮನಾಥಪುರದಲ್ಲಿ ಒಂದು ಸುಬ್ರಹ್ಮಣ್ಯ ದೇವಸ್ಥಾನ ಇರುವುದನ್ನು ಕಾಣಬಹುದು. ಈ ಸುಬ್ರಹ್ಮಣ್ಯದಂತೆ ಷಷ್ಠಿ ಸಮಯದಲ್ಲಿ ಅಲ್ಲಿ ಉತ್ಸವಗಳು ಈಗಲೂ ನಡೆಯುತ್ತವೆ. ಈಗಲೂ ಆ ಸಮಯದಲ್ಲಿ ಈ ಮಠದವರ ಕಡೆಯಿಂದ ಯಾರಾದರೊಬ್ಬರು ಅಲ್ಲಿಗೆ ಹೋಗುತ್ತಾರೆ. ಇಲ್ಲಿ ಸಂಪಾದಿಸಿದ ಹಣದಿಂದ ಆ ದೇವಸ್ಥಾನಕ್ಕೆ ಬೇಕಾದ ಬೆಳ್ಳಿ ಪಾಲಕಿ ವಗೈರೆ ಅನೇಕ ಸೊತ್ತುಗಳನ್ನು ಇಲ್ಲಿ ಮಾಡಿಸಿರುವುದು ತಿಳಿದುಬರುತ್ತದೆ.

ಮಾಧ್ವ ಬ್ರಾಹ್ಮಣರಲ್ಲಿ ಅವರವರ ಮಠಗಳ ಪದ್ಧತಿ ಪ್ರಕಾರ ಮಠಗಳ ತಾರತಮ್ಯವನ್ನು ತೋರಿಸುವುದಕ್ಕೆ ಅವರು ಹಾಕಿಕೊಳ್ಳುವ ಗೋಪೀನಾಮ ಮತ್ತು ಮುದ್ರೆಗಳಲ್ಲಿ ವ್ಯತ್ಯಾಸಗಳಿವೆ. ಅವರವರ ಮುದ್ರೆನಾಮಗಳಿಂದ ಅವರು ಇಂತಹ ಮಠದ ಶಿಷ್ಯರೆಂದು ಗುರುತಿಸಬಹುದಾಗಿದೆ. ಆ ಪ್ರಕಾರ ಈ ದೇವಳದಲ್ಲಿ ಈಗ ಪೂಜೆ ಮತ್ತು ತಂತ್ರ ಮಾಡುವ ಆಸ್ರಣ್ಣರುಗಳು ಸೋದೆ ಮಠದ ಶಿಷ್ಯರಾಗಿದ್ದರೂ, ಈ ಮಠದ ಸ್ವಾಮಿಗಳು ಈ ದೇವಸ್ಥಾನದ ಆಡಳಿತೆ ತಮಗೆ ಬಂದ ನಂತರ ಆಸ್ರಣ್ಣರಿಗೂ ಆಡಳಿತೆ ಸನದು ಸಿಕ್ಕುವಂತೆ ಮಾಡಿಸಿ ಅವರ ಮನಸ್ಸನ್ನು ಒಲಿಸಿ ಮುದ್ರೆಯನ್ನು ಒತ್ತಾಯದಿಂದ ಕೊಡಿಸಿದರೆಂದೂ ತಿಳಿದು ಬರುತ್ತದೆ.

ಈ ಸ್ವಾಮಿಗಳು ದೇವಸ್ಥಾನದ ಆಡಳಿತೆಯು ತಮ್ಮ ಪಾರಂಪರ್ಯ ಹಕ್ಕಿನದೆಂದು ಸ್ಥಿರಪಡಿಸಲು ಇಂಜಾಡಿಯಲ್ಲಿದ್ದ ತಮ್ಮ ಮುಂಚಿನ ವಾಸ್ತವ್ಯದ ಕುರುಹು ಕೂಡಾ ಸಿಕ್ಕದಂತೆ ಮಾಡಲು ಅಲ್ಲಿಯ ಬಾವಿಯನ್ನು ಸಹ ಮುಚ್ಚಿಸಿದರೆಂದು ತಿಳಿದು ಬರುತ್ತದೆ. 1828ರಲ್ಲಿ ಸೋಮೇಶ್ವರ ಭಟ್ಟರೆಂಬವರಿಂದ ಕುಮಾರ ಸೂಕ್ತ ಪಾರಾಯಣ ಉಪಾಧಿಯನ್ನು ಕೂಡ ಈ ಮಠದ ಸ್ವಾಮಿಗಳು ಅಡವಿಗೆ ಪಡಕೊಂಡು ತನ್ನ ಮುಂಚಿನ ಅಷ್ಟೋತ್ತರ ಉಪಾಧಿಯೊಂದಿಗೆ ಇದನ್ನು ಸೇರಿಸಿ ಅವುಗಳಿಗೆ ಸಿಕ್ಕುವ ಪಡಿ ಅಕ್ಕಿಯನ್ನು ದೇವಸ್ಥಾನದಲ್ಲಿ ಪಡೆಯುತ್ತಿದ್ದರೆಂದು ತಿಳಿದು ಬರುತ್ತದೆ.

1845ರಲ್ಲಿ ಸರಕಾರದ ಸನದಿನಿಂದ ದೇವಳದ ಆಡಳಿತೆ ಸ್ವಾಮಿಗಳಿಗೆ ಬಂದನಂತರ ಅವರು ಈಗ ವಾಸಿಸುವ ಮಠದ ಅಡಿಸ್ಥಳವನ್ನು ಹೆಬ್ಬಾರ ಸುಬ್ರಾಯರಿಂದ ಪಡಕೊಂಡು ಆಮೇಲೆ ಮಠವನ್ನು ಕಟ್ಟಿಸಿದ್ದಾಗಿದೆ. ಅದಕ್ಕೆ ಮುಂಚೆ ಆ ಸ್ಥಳವು ದೇವಳದಲ್ಲಿ ನಡೆಯುತ್ತಿದ್ದ

ಸಮಾರಾಧನೆಯ ಊಟದ ಎಂಜಲೆಲೆಗಳನ್ನು ಬಿಸಾಡುವ ಸ್ಥಳವಾಗಿತ್ತಂತೆ. ಈ ಮಠಕ್ಕೆ ಈಗಿನ ಸುಬ್ರಹ್ಮಣ್ಯ ಗ್ರಾಮವೆಂದು ಕರೆಯಲ್ಪಡುವ ಮುಂಚಿನ ಕಸಾ ಕುಕ್ಕೆ, ಸಂಕೇತ ಕುಕ್ಕೆ ಮತ್ತು ಕುಳುಕುಂದ ಗ್ರಾಮಗಳಲ್ಲಿಯೂ ಪೈಮಾಶಿಯಾದ ಯಾವ ಮೂಲಿ ವರ್ಗಗಳು ಇಲ್ಲದೇ ಇರುವುದರಿಂದಲೂ ಇಂಜಾಡಿ ಎಂಬಲ್ಲಿ ಮಾತ್ರ ಮಠದ ಮಾರಿಪತ್ತು (ಅಂದರೆ ಮಠ ಇರುವ ಸ್ಥಳ) ಎಂಬ ಸ್ವಲ್ಪ ಸ್ಥಳ ಮಾತ್ರ ಇದ್ದುದರಿಂದ ಈ ಮಠವು ಅನಾದಿಯಿಂದಲೂ ಇಲ್ಲಿ ಇದ್ದದ್ದಲ್ಲವೆಂದು ನಿಶ್ಚಯಿಸಬಹುದು.

ಶ್ರೀ ಸುಬ್ರಹ್ಮಣ್ಯ ದೇವಸ್ಥಾನಕ್ಕೂ ಈ ಮಾಧ್ವ ಮಠಕ್ಕೂ 1845ರ ವರೆಗೆ ಏನೊಂದೂ ಸಂಬಂಧವಿರಲಿಲ್ಲ. ದೇವಳವು ಶೈವ ಸಂಬಂಧವಾಗಿದ್ದುದರಿಂದಲೂ ಈ ಸ್ವಾಮಿಗಳು ಮಾಧ್ವ ವೈಷ್ಣವ ತತ್ವವನ್ನು ಒಳಗೊಂಡದ್ದಾಗಿ ಇದ್ದುದರಿಂದಲೂ ದೇವಳಕ್ಕೆ ಅವರ ಸಂಬಂಧವಿರಲು ಕಾರಣವೂ ಇಲ್ಲ. ಈ ಸ್ವಾಮಿಗಳು ಶಿವ ವ ಶಿವಸಂಬಂಧವಾದ ಸುಬ್ರಹ್ಮಣ್ಯ, ಗಣಪತಿ ಇತ್ಯಾದಿ ದೇವರುಗಳ ಪೂಜೆ ಮಾಡುವುದಿಲ್ಲ. ಮತ್ತು ಆ ದೇವರುಗಳ ಪ್ರಸಾದ ತೀರ್ಥಗಳನ್ನು ಸೇವಿಸುವುದಿಲ್ಲ. ಲಿಂಗಪೂಜೆ ಇವರ ತತ್ವಕ್ಕೆ ವಿರೋಧ. ಅಲ್ಲದೆ ಶೈವಾಗಮ ವಿಚಾರವು ಇವರಿಗೆ ಗೊತ್ತಿಲ್ಲ. ಹೀಗಿರುತ್ತ ಈ ದೇವಳಡ ಆಡಳಿತೆಗೆ ಇವರು ಏಕೆ ಬಂದರು ಎಂಬುದು ಪ್ರಶ್ನೆ. ಕಾರಣ - ಇವರಿಗೆ ಇಲ್ಲಿಯ ಪೂಜೆ ಮುಖ್ಯವಾಗಿರಲಿಲ್ಲವೆಂದು ತಿಳಿದು ಬರುತ್ತದೆ.

ಈ ಮಠದ ಸ್ವಾಮಿಗಳಲ್ಲಿ ಮೊದಲು ಈ ದೇವಳದ ಆಡಳಿತೆಗೆ ಬಂದ ವಿದ್ಯಾರಾಜತೀರ್ಥ ಸ್ವಾಮಿಗಳೆಂಬವರು ದೇವಳಕ್ಕೆ ವರ್ಷಂಪ್ರತಿ ಬರುವ ಆದಾಯ ಮತ್ತು ಸರಕಾರದ ತಸದೀಕು ರೂಪ್ಯಾ 4400ಗಳಿಗೆ ಆಶೆಪಟ್ಟು ತಮಗೆ ಆಡಳಿತೆ ಸಿಕ್ಕುವ ಕೆಲವು ವರ್ಷಗಳ ಹಿಂದೆಯೇ ದೇವಳದ ಆಡಳಿತೆಗಾಗಿ ಹೊಂಚುಹಾಕುತ್ತಾ ಇದ್ದರು. ಅವರು ದೇವಳದ ಪೌಳಿಯಲೆ ಉಪಾಧಿವಂತರಾಗಿ ವಾಸಿಸುತ್ತಿದ್ದುದರಿಂದ ದೇವಳದ ಎಲ್ಲಾ ವಿಷಯಗಳು ಆಗಿಂದಾಗ ಅವರಿಗೆ ಸಿಕ್ಕುತ್ತಿತ್ತು. ಆಡಳಿತೆ ಸಿಕ್ಕಬೇಕಾದರೆ ಊರಿನ ಖದಿಂ ಮೊಕ್ತೇಸರರಾದ ಅಲ್ಲಿಯ ಸ್ಮಾರ್ತ ಶಿವ ಬ್ರಾಹ್ಮಣ ಹೆಬ್ಬಾರರ ಒಪ್ಪಿಗೆ ವಿನಃ ಸಿಕ್ಕಲು ಸಾಧ್ಯವಿಲ್ಲವೆಂದೂ ಅವರು ಅರಿತಿದ್ದರು. ಆ ಸಮಯದಲ್ಲಿ ಮಹಾ ರಥೋತ್ಸವದ ವೇಳೆ ಒಬ್ಬ ಯಾತ್ರಿಕನು ರಥದ ಅಡಿಗೆ ಬಿದ್ದು ಮರಣಪಟ್ಟದ್ದರಿಂದ ಆಡಳಿತೆಯವರಾದ ಹೆಬ್ಬಾರರು ಸ್ವಲ್ಪ ಹೆದರಿದ ವಿಷಯವನ್ನು ತಿಳಿದು ಆಗಿನ ಸ್ವಾಮಿಗಳು ತನಗೂ ಪೂಜೆ ಮತ್ತು ತಂತ್ರ ಮಾಡುತ್ತಿರುವ ಅವರ ಮಠದವರೇ ಆದ ಆಸ್ರಣ್ಣರುಗಳಿಗೂ ದೇವಳವ ಆಡಳಿತೆಯಲ್ಲಿ ಇವರೊಂದಿಗೆ ಸೇರಿಸಿಕೊಳ್ಳುವಂತೆ ಸರಕಾರದವರ ಮುಖಾಂತರ ಒಪ್ಪಿಗೆ ಕೊಟ್ಟಲ್ಲಿ ರಥದಡಿಗೆ ಬಿದ್ದು ಸತ್ತ ಯಾತ್ರಿಕನ ಮರಣದಿಂದ ಬರುವಂತಹ ಎಲ್ಲಾ ತೊಂದರೆಗಳನ್ನು ತಾನು ಪರಿಹರಿಸುವೆನೆಂದು ಆಗಿನ ಹೆಬ್ಬಾರರನ್ನು ನಂಬಿಸಿ ಅವರಿಂದ ಒಪ್ಪಿಗೆ ಪಡೆದುಕೊಂಡು ಹೆಬ್ಬಾರರೊಂದಿಗೆ ಆಡಳಿತೆಗೆ ಸೇರಿಕೊಂಡರು. ಹಾಗೆ ಆಡಳಿತೆಗೆ ಪ್ರವೇಶಿಸಿದ ಸ್ವಾಮಿಗಳು, ಆಗ ಸುಬ್ರಹ್ಮಣ್ಯವು ಬಂಟ್ವಾಳ ತಾಲೂಕಿಗೆ ಸೇರಿದ್ದರಿಂದ ಆಗಿನ ಬಂಟ್ವಾಳ ತಹಶೀಲ್ದಾರ ರಂಗಪ್ಪ ಎಂಬವರನ್ನು ತಮ್ಮ ಕೈವಶ ಮಾಡಿಕೊಂಡು ಅವರ ಸಹಾಯದಿಂದ ಆಗಿನ ಜಿಲ್ಲಾ ಕಲೆಕ್ಟರ್ ಬ್ಲಾಯರ್ ದೊರೆಯವರನ್ನು ಸಮಜಾಯಿಸಿ 7 ಜನ ಆಡಳಿತೆದಾರರ ಪೈಕಿ ಹೆಬ್ಬಾರರ ಕಡೆಯ 4 ಜನರನ್ನು ಕೆಲವು ಕ್ಷುಲ್ಲಕ ಕಾರಣ ಕೊಟ್ಟು ಆಡಳಿತೆಯಿಂದ ವಿರಹಿತ ಪಡಿಸಿ ಸ್ವಾಮಿಗಳೂ ಮತ್ತು ಆಸ್ರಣ್ಣರುಗಳು ಮಾತ್ರ ಆಡಳಿತೆಯನ್ನು

ವಹಿಸಿಕೊಂಡರೆಂದೂ ಆ ಮೂವರೊಳಗೆ ಸ್ವಾಮಿಗಳು ದೇವಳದ ಮುಖ್ಯಾಡಳಿತವನ್ನು ವಹಿಸಿಕೊಂಡರೆಂದು ತಿಳಿದು ಬರುತ್ತದೆ. ಆಗಿನ ಏಳು ಜನ ಆಡಳಿತೆದಾರರಲ್ಲಿ 1) ಹೆಬ್ಬಾರ ನಾರ್ಣಪ್ಪ 2) ಹೆಬ್ಬಾರ ನಾರಾಯಣ (ಇವರು ಊರ ಖದೀಂ ಮೊಕ್ತೇಸರರು) 3) ಪಾಠಾಳಿ ರಾಮಪ್ಪ 4) ಕೃಷ್ಣಾಚಾರ್ಯ (ಜತೆ ಮೊಕ್ತೇಸರರು) 5)ವಿದ್ಯಾರಾಜತೀರ್ಥ ಸ್ವಾಮಿ 6) ಪಂಚಟಕೃಷ್ಣ ಆಸ್ರಣ್ಣ 7) ಸುಬ್ರಾಯ ಆಸ್ರಣ್ಣ (ಈ ಮೂವರು ಸನದಿ ಮೊಕ್ತೇಸರರು) ಇವರಲ್ಲಿ ಮೊದಲಿನ ನಾಲ್ಕು ಜನರು ಸ್ಥಳೀಯ ಸ್ಮಾರ್ತ ಶಿವ ಬ್ರಾಹ್ಮಣರು. ಆ ಮೇಲಿನ ಮೂರು ಜನರು ಮಾಧ್ವ ಶಿವಳ್ಳಿಯವರು. ಈ ಮೂರು ಜನರಿಗೆ ಸನದು ಸಿಕ್ಕಿದ್ದು 1255ನೇ ಫಸಲಿ ಅಂದರೆ 29-11-1845ರಲ್ಲಿ ನೇಮಕವಾಗಿದ್ದಾಗಿರುತ್ತದೆ. ಈ ಸನದಿ ಮೊಕ್ತೇಸರರ ನೇಮಕದ ವೇಳೆ ಸ್ಥಳದ ಸ್ಮಾರ್ತ ಶಿವ ಬ್ರಾಹ್ಮಣರಾದ ಅಲ್ಲಿಯ ಪಠೇಲ ಲಿಂಗಪ್ಪಯ್ಯ ಎಂಬವರು ಕೂಡ ಆಡಳಿತೆಗೆ ಅರ್ಜಿ ಸಲ್ಲಿಸಿದ್ದರು. ಊರಿನ ಯೋಗ್ಯರು ಯಾರೂ ಮುಂದೆ ಬಾರದೇ ಇದ್ದುದರಿಂದ ಸ್ವಾಮಿಗಳಿಗೂ ಪೂಜೆಯವರಿಗೂ ಸನದು ಕೊಟ್ಟಿದ್ದಾಗಿ ನೇಮಕದ ಹುಕುಂನಲ್ಲಿ ತಿಳಿದು ಬರುತ್ತದೆ. ಪಠೇಲ್ ಲಿಂಗಪ್ಪಯ್ಯನವರನ್ನು ಏಕೆ ನೇಮಕ ಮಾಡಲಿಲ್ಲ ಎಂಬ ವಿಷಯದಲ್ಲಿ ಸರಿಯಾದ ಕಾರಣ ಕೊಡಲು ಸಾಧ್ಯವಿಲ್ಲವೆಂದು ಕಲೆಕ್ಟರರ ಹುಕುಂನಲ್ಲಿ ತಿಳಿದು ಬರುವುದರಿಂದ ಅದರ ಕಾರಣವು ಆಗ ಜಿಲ್ಲೆಯಲ್ಲಿ ನಡೆದ ಕಲ್ಯಾಣಪ್ಪನ ಕಾಟುಕಾಯಿ ಎಂಬ ಬ್ರಿಟಿಷ್ ವಿರೋಧಿ ಸ್ವಾತಂತ್ರ ಸಮರದಲ್ಲಿ ಸ್ಥಳೀಯ ಸ್ಮಾರ್ತ .ಶಿವ ಬ್ರಾಹ್ಮಣ ಸಮಾಜದವರು ಸೇರಿರುವ ಆಪಾದನೆಯು ಇದರಲ್ಲಿ ಕೂಡಿರಬಹುದೆಂದು ತಿಳಿಯಬೇಕಾಗುತ್ತದೆ.

ಆ ಸಮಯದಲ್ಲಿ ಸ್ಥಳದ ಸ್ಮಾರ್ತ ಶಿವ ಬ್ರಾಹ್ಮಣ ಸಂಕಪ್ಪ ಎಂಬವರು ದೇವಸ್ಥಾನದ ಮಣೆಗಾರರಾಗಿಯೂ, ಮಹದೇವ ಭಟ್ಟ ಮತ್ತು ಶೃಂಗೇರಿ ಶಾಖಾ ಮಠದ ಅರ್ಚಕ ಅಚ್ಚಣ್ಣ ಶಾಸ್ತ್ರಿ ಎಂಬವರು ದೇವಳದ ಉಪಾಧಿವಂತರಾಗಿದ್ದರು. ಮೊದಲಿನ ನಾಲ್ಕು ಜನ ಮೊಕ್ತೇಸರರು ವಜಾ ಆದೊಡನೆ ಮುಖ್ಯ ಆಡಳಿತೆದಾರರಾದ ಸ್ವಾಮಿಗಳು ತಮ್ಮ ಕರ್ತವ್ಯಕ್ಕೆ ವಿರೋಧ ಬಂದ ದೇವಳದ ಉಪಾಧಿವಂತರನ್ನೂ ಉದ್ಯೋಗಸ್ಥರನ್ನೂ ತೆಗೆದುಹಾಕಿ ಅವರಿಗೆ ಬೇಕಾದವರನ್ನೇ ದೇವಳದ ಕೆಲಸಗಳಿಗೆ ನೇಮಿಸಿಕೊಂಡರು. ಇದರಿಂದಾಗಿ .ಅವರಿಗೆ ದೇವಳದ ಸರ್ವಾಧಿಕಾರವು ಬಂದಂತಾಯಿತು.

ಅವರ ಈ ರೀತಿಯ ಅಧಿಕಾರದಿಂದ ಅವರು ದೇವರಿಗೆ ಭಕ್ತಾದಿಗಳು ತಂದ ಕಾಣಿಕೆಗಳನ್ನು ಬಲಾತ್ಕಾರದಿಂದ ಎರಡು ಪಾಲು ಮಾಡಿಸಿ ಒಂದು ಭಾಗವನ್ನು ತಮ್ಮ ಮಠಕ್ಕೂ ಕೊಡಿಸುವಂತೆ ಮಾಡಿಸುತ್ತಿದ್ದರು. ಕೊಡಲು ಒಪ್ಪದಿದ್ದವರಿಗೆ ಮಾಡಿಸಲ್ಪಡುವ ಸುಬ್ರಹ್ಮಣ್ಯನ ಸೇವೆಯನ್ನು ಸರಿಯಾಗಿ ಮಾಡಿಸದೆ ಭಕ್ತಾದಿಗಳ ಮನಸ್ಸನ್ನು ನೋಯಿಸುತ್ತಿದ್ದರೆಂದು ತಿಳಿದು ಬರುತ್ತದೆ. ಅಲ್ಲದೆ ದೇವಳದಲ್ಲಿ ತಯಾರಾಗುತ್ತಿದ್ದ ಪ್ರಸಾದ ಮತ್ತು ದೇವಳಕ್ಕೆ ಬರುತ್ತಿದ್ದ ಬಲಿಪಾಡು ಅಕ್ಕಿ ವಗೈರೆಗಳಲ್ಲಿನ ಹೆಚ್ಚಿನ ಅಂಶವನ್ನು ಮಠಕ್ಕೆ ಸಂಬಂಧಪಟ್ಟವರಿಗೆ ಕೊಟ್ಟು ಇತರರಿಗೆ ಅಲ್ಪಸ್ವಲ್ಪ ಕೊಡುತ್ತಾ ಬರಲು ಆರಂಭಿಸಿದರು. ಈ ರೀತಿಯ ಸ್ವಾಮಿಗಳ ದುರಾಡಳಿತೆಯನ್ನು ಕಂಡು ಅವರ ಜತೆ ಮೊಕ್ತೇಸರರುಗಳಾದ ಆಸ್ರಣ್ಣರುಗಳು ಮತ್ತು ಆಗಿನ ದೇವಳದ ಮಣೆಗಾರ ಸಂಕಪ್ಪ ಎಂಬವರು ಇವರ ದುರಾಡಳಿತ ವಿಚಾರವನ್ನು ಸರಕಾರಕ್ಕೆ ತಿಳಿಸಿದ್ದರಿಂದ ಆಗಿನ ಕಲೆಕ್ಟರ್ ತೋಮಸ್ ಲೋಬಿಯರ್ ಎಂಬವರು ದೇವಳಕ್ಕೆ ಸಲ್ಲುತ್ತಿದ್ದ ರೂ.

4,400 ತಸದೀಕು ಹಣವನ್ನು ಸ್ವಾಮಿಗಳಿಗೆ ಕೊಡಿಸುವುದನ್ನು ನಿಲ್ಲಿಸಿ ಬಹುಮತ ಪ್ರಕಾರ ಇತರ ಎರಡು ಜನ ಮೊಕ್ತೇಸರರಿಗೆ ಕೊಡುವಂತೆ ಹುಕುಂ ಕಳುಹಿಸಿ ವ್ಯವಸ್ಥೆ ಮಾಡಿಸಿದರು. ಇದರಿಂದಾಗಿ ಸ್ವಾಮಿಗಳ ನಿರಂಕುಶ ಪ್ರಭುತ್ವಕ್ಕೆ ಸ್ವಲ್ಪ ಆತಂಕವುಂಟಾಯಿತು. ಇದು 1850ನೇ ಇಸವಿಯಲ್ಲಿ ನಡೆಯಿತು. ಈ ಸಂದರ್ಭದಲ್ಲಿ ಸ್ವಾಮಿಗಳು ಪುನಃ ಊರಿನ ಹೆಬ್ಬಾರರ ವಿಶ್ವಾಸವನ್ನು ಗಳಿಸಲು ಅವರಿಗೆ ಪುನಃ ಆಡಳಿತೆಯನ್ನು ಕೊಡಿಸುವುದು ಮಾತ್ರವಲ್ಲದೆ ಅವರ ಆರು ಉಪಾಧಿಗಳನ್ನು ಅವರಿಗೆ ಕೊಡಿಸಿ ದೇವಳದ ಮಣೆಗಾರತನವನ್ನು ಅವರ ಮತದವರಿಗೆ ಕೊಡಿಸಿ ಹೆಬ್ಬಾರರುಗಳನ್ನು ತಮ್ಮ ಸಹಾಯಕರನ್ನಾಗಿ ಮಾಡಿಕೊಂಡರು. ಆದರೆ ಹೆಬ್ಬಾರರ ಆಡಳಿತೆಯು ಸರಕಾರದವರ ಮುಖಾಂತರ ಹುಕುಂ ಪ್ರಕಾರ ಬಾರದೆ ಇದ್ದುದರಿಂದ ಅದು ಸಿಂಧುವಾಗಿ ಪರಿಗಣಿಸಲ್ಪಡಲಿಲ್ಲ. (Vide O.S. 27, 1886ರ Exibits, V, VI, VII) ಅಂತು ಸ್ವಾಮಿಗಳು ಸರಕಾರದವರ ಮನಸ್ಸನ್ನು ಸರಿಪಡಿಸಿ ಕೆಲವು ವರ್ಷಗಳ ನಂತರ ಪುನಃ ತಸದೀಕು ಹಣ ತನಗೆಯೇ ಸಿಕ್ಕುವ ಹಾಗೆ ಮಾಡಿಕೊಂಡರು.

1861ನೇ ಇಸವಿಯಲ್ಲಿ ಆಗಿನ ಸ್ವಾಮಿ ವಿದ್ಯಾರಾಜರು ಕೊಲೆರಾ ರೋಗದಿಂದ ದೈವಾಧೀನರಾದುದರಿಂದ ಅವರ ನಂತರ ಅವರ ಸ್ಥಾನಕ್ಕೆ ವಿದ್ಯಾಪೂರ್ಣ ಸ್ವಾಮಿಗಳೆಂಬವರು ಆಡಳಿತೆಗೆ ಬಂದರು. ಇವರ ನೇಮಕ ಕೂಡ ಮುಂಚಿನ ಪದ್ಧತಿಯಂತೆ ಹೆಬ್ಬಾರರ ಒಪ್ಪಿಗೆ ಪ್ರಕಾರವೇ ನೇಮಕವಾಯಿತು. ಹಾಗೆ ನೇಮಿಸಲ್ಪಟ್ಟ ಹುಕುಂನಲ್ಲಿ ಸ್ವಾಮಿಯು ರೂ. 560 ತಸದೀಕು ಸಿಕ್ಕುವ ಒಂದು ಮಠದ ಅಧಿಕಾರಿ ಎಂತಲೂ, ಊರಿನಲ್ಲಿ ಇತರ ಘನಹೊಂದಿದ ಮನುಷ್ಯರು ಇಲ್ಲವೆಂತಲೂ ಕಾಣಿಸಿ ಸ್ವಾಮಿಗಳಿಗೆ ನೇಮಕ ಮಾಡಿದ್ದು ಚೋದ್ಯವಾಗಿ ಕಾಣುತ್ತದೆ.

ಹೀಗೆ ಸ್ವಾಮಿಗಳಿಗೆ ಆಡಳಿತೆ ನೇಮಕವಾದರೂ ದೇವಳದ ಗರ್ಭಗೃಹದ ಒಳಗಿನ ಗುಪ್ತ ಭಂಡಾರದ ಬೀಗದ ಕೈಗಳು ಸ್ಥಳದ ಸ್ಮಾರ್ತರಾದ ಹೆಬ್ಬಾರರ ಸ್ವಾಧೀನವೇ ಇದ್ದವು. ಅಲ್ಲದೆ ಅವರ 6 ಉಪಾಧಿಗಳು ಅವರಿಗೆ ಇದ್ದುದರಿಂದ ಸ್ವಾಮಿಗಳಿಗೆ ಪೂರ್ಣ ಒಳಗಿನ ಅಧಿಕಾರ ನಡೆಸಲು ಕಷ್ಟವಾಗುತ್ತಿತ್ತು. ಈ ಸಂದರ್ಭದಲ್ಲಿ ಸ್ವಾಮಿಗಳು ಗರ್ಭಗೃಹದ ಒಳಗಿನ ಗುಪ್ತ ಭಂಡಾರದ ಬೀಗದ ಕೈಗಳನ್ನು ಹೆಬ್ಬಾರರಿಂದ ತನ್ನ ಸ್ವಾಧೀನ ಮಾಡಲು ಪ್ರಯತ್ನಿಸಿದ್ದರಿಂದ ಪುನಃ ಸ್ವಾಮಿಗಳಿಗೂ ಹೆಬ್ಬಾರರಿಗೂ ಮನಸ್ತಾಪ ಉಂಟಾಗಲೂ ಆರಂಭವಾಯಿತು. ಮತ್ತು ಅವರೊಳಗೆ ಜಗಳಗಳು ಆರಂಭವಾಯಿತು.

ಹೀಗೆ ಹೆಬ್ಬಾರರಿಗೂ ಸ್ವಾಮಿಗಳಿಗೂ ಮನಸ್ತಾಪವು ಹೆಚ್ಚಾದಂತೆ ಸ್ವಾಮಿಗಳು ಇವರ ಅಧಿಕಾರಗಳನ್ನು ಕಮ್ಮಿ ಮಾಡಿಸುತ್ತ ಬಂದು ಇವರು ದೇವಳದ ಊರ ಮೊಕ್ತೇಸರರಾಗಿದ್ದರೂ ಹೆಬ್ಬಾರ ಉದ್ಯೋಗಸ್ಥರೆಂದು ಮಾಡಿ ಅವರಿಗೆ ಹಿಂಸೆ ಕೊಡಲು ತೊಡಗಿದರು. ಈ ಸಂದರ್ಭದಲ್ಲಿ ಕೆಲವು ವ್ಯವಹರಣೆಗಳು ಕೂಡಾ ನಡೆದಿವೆ. 1876ರಲ್ಲಿ ಈ ಸ್ವಾಮಿಗಳು ಸ್ಮಾರ್ತರಾದ ಹೆಬ್ಬಾರರ ಮತದವರನ್ನು ತಮ್ಮ ಮಾಧ್ವಮತದವರಿಂದ ಕೆಳತರಗತಿಯವರೆಂದು ಮಾಡಲೋಸುಗ ತನಗೆ ಮಣೆ ಇಟ್ಟು ಗೌರವ ಕೊಡಲಿಲ್ಲ ಎಂಬ ಕ್ಷುಲ್ಲಕ ಕಾರಣಗಳನ್ನು ತೆಗೆದುಕೊಂಡು ಹೆಬ್ಬಾರರ ಮೇಲೆ ರೂ. 200ಕ್ಕೆ O.S. 279 of 1876 ಎಂಬ ಮಾನನಷ್ಟ ವ್ಯಾಜ್ಯವನ್ನು ಪುತ್ತೂರು ಡಿ.ಮು. ಕೋರ್ಟಿನಲ್ಲಿ ಮಾಡಿದರು. ಈ ವ್ಯಾಜ್ಯದಲ್ಲಿ ಸ್ವಾಮಿಗಳಿಗೆ ಅವಗುಣವಾಯಿತು. ಸ್ವಾಮಿಗಳ ಗಿಂಡಿಮಾಣಿಯೇ ಸ್ವಾಮಿಗಳ ಮಣೆ ಇಡುವವನೆಂದೂ

ಆಡಳಿತೆ ನಡೆಸುವ ಹೆಬ್ಬಾರನೆಂಬವನು ಮಣೆ ಇಡುವ ಕಾರಣವಿಲ್ಲ ಎಂದು ತೀರ್ಮಾನವಾಯಿತು. ಸ್ವಾಮಿಗಳು ಇದರ ಮೇಲೆ ಮಾಡಿದ A.S. No. 518/1878ರ ಸಬ್‌ಕೋರ್ಟು ಅಪೀಲ್‌ನಲ್ಲೂ ಮೂಲ ತೀರ್ಮಾನವೇ ಖಾಯಂ ಆಯಿತು. ಈ ಪ್ರಕಾರದ ಮಾನನಷ್ಟ ವ್ಯಾಜ್ಯದಲ್ಲಿ ಸ್ವಾಮಿಗಳು ಸೋತು ಹೆಬ್ಬಾರರುಗೆದ್ದುದರಿಂದ ಕೋಪದಿಂದ ಸ್ವಾಮಿಗಳು ಹೆಬ್ಬಾರರ ಎಲ್ಲಾ ಹೆಚ್ಚಿನ ಅಧಿಕಾರಗಳನ್ನು ತೆಗೆದುಹಾಕಿದರು. ಇದರಿಂದಾಗಿ ದೇವಳದ ಆಡಳಿತೆಗೋಸ್ಕರ ಸಿವಿಲ್ ವ್ಯಾಜ್ಯ ಒಂದನ್ನು ಹೆಬ್ಬಾರರು ಸ್ವಾಮಿಗಳ ಮೇಲೆ ಹೂಡಿದರು. ಇವರಲ್ಲಿ ಹೆಬ್ಬಾರರಿಗೆ ಲಿಮಿಟೇಶನ್ ಅಂದರೆ ವ್ಯಾಜ್ಯ ಮಾಡುವ ಅವಧಿ ದಾಟಿದ್ದರಿಂದ ಸ್ವಾಮಿಗಳಿಗೆ ಗುಣವಾಯಿತು.

ಈ ವಿದ್ಯಾಪೂರ್ಣ ಸ್ವಾಮಿಗಳು ಅದೇ 1882ರಲ್ಲಿ ಮೈಲಿಗೆ ರೋಗ ತಗಲಿ ಕಾಲವಾದರು ಎಂದು ತಿಳಿದುಬರುತ್ತದೆ. ಈ ಮೈಲಿಗೆ ರೋಗವು ಅದೆ ವರ್ಷದಲ್ಲಿ ಅಲ್ಲಿಯ ಪೂಜೆ ಮತ್ತು ತಂತ್ರಿಗಳ ಕುಟುಂಬಕ್ಕೂ ಅಲ್ಲದೆ ಇನ್ನಿತರ ಅನೇಕರಿಗೆ ಉಂಟಾಗಿ ಊರಿನಲ್ಲಿ ಹೆಚ್ಚಿನವರೆಲ್ಲಾ ಊರಿಬಿಟ್ಟು ಹೋಗಿದ್ದರೆಂದೂ, ದೇವಸ್ಥಾನದಲ್ಲಿ ಆಗ ಅಲ್ಲಿಯ ಮಣೆಗಾರರಾದ ಸ್ಥಳೀಯ ಸ್ಮಾರ್ತ ಶಿವ ಬ್ರಾಹ್ಮಣರಾದ ನೂಚಿಲ ಶ್ಯಾಮಣ್ಣ ಎಂಬ ಒಬ್ಬರು ಮಾತ್ರ ಸಾಧಾರಣ 1882ರ ಮಾರ್ಚಿ ತಿಂಗಳಿಂದ ಸಪ್ಟಂಬರ ತಿಂಗಳ ವರೆಗೆ ದೇವಸ್ಥಾನದ ಪೂಜೆ ವಗೈರೆ ಎಲ್ಲಾ ಕೆಲಸಗಳನ್ನು ಮಾಡಿಕೊಂಡಿದ್ದರೆಂದು ತಿಳಿದು ಬರುತ್ತದೆ. ಸಾಧಾರಣ 1880-82ರ ವರೆಗೆ ಈ ದೇವಸ್ಥಾನದ ಒಳಗೆ ಅಡಗಿ ಇರುವ ಶ್ರೀ ಸಿದ್ಧಿವಿನಾಯಕ ದೇವರ ವಿಗ್ರಹವು ಹೊರಗೆ ಈಗ ಮಠದವರಿಂದ ಆಕ್ರಮಿಸಲ್ಪಟ್ಟ ನರಸಿಂಹ ದೇವರ ಗುಡಿಯಲ್ಲಿ ಇದ್ದಿರಬೇಕೆಂದು ದೇವಳದ ವರ್ಗ ಊಳಿಗ ಪುಸ್ತಕದಲ್ಲಿ ವಿನಾಯಕ ದೇವರ ಅಮಾನತು ಎಂಬ ಹೆಸರಿನಿಂದ ಬರೆಯಲ್ಪಟ್ಟ ಲೆಕ್ಕದಿಂದ ತಿಳಿಯಬಹುದಾಗಿದೆ. ಸಾಧಾರಣ 1879ರಲ್ಲಿ ದೇವಸ್ಥಾನವನ್ನು ರಿಪೇರಿ ಮಾಡುವ ನೆವನದಿಂದ ಅನೇಕ ಕಡೆಗಳಿಂದ ಮರಮಟ್ಟು ವಗೈರೆ ಸಂಗ್ರಹಿಸುವ ಕೆಲಸದಲ್ಲಿ ಆಗಿನ ವಿದ್ಯಾಪೂರ್ಣರು ತುಂಬಾ ಪ್ರಯತ್ನಪಟ್ಟಿದ್ದಾರೆಂತಲೂ ಸಾಧಾರಣ 1880-81ರಲ್ಲಿ ದೇವಸ್ಥಾನ ರಿಪೇರಿಯೊಂದಿಗೆ ವಿನಾಯಕ ದೇವರ ಗುಡಿಯಾದ ಈಗಿನ ನರಸಿಂಹ ಗುಡಿಯ ಹಿಂಬದಿಗೆ ಒಂದು ಕೋಣೆಯನ್ನು ಸೇರಿಸಿ ಅದನ್ನು ನರಸಿಂಹ ದೇವರ ಗರ್ಭಗುಡಿಯನ್ನಾಗಿ ಮಾಡಿಕೊಂಡರೆಂದೂ ಆ ಸಂದರ್ಭದಲ್ಲಿ ಒಬ್ಬಿಬ್ಬರು ಹೆಬ್ಬಾರರುಗಳು ದೇವಳದ ಒಳಗೆಯೇ ಮೃತಪಟ್ಟಿರುವರೆಂದು ತಿಳಿದು ಬರುತ್ತದೆ.

ಅದೇ ಸಮಯದಲ್ಲಿ ಈಗ ಮಠದ ಸ್ವಾಮಿಯವರು ವಾಸ್ತವ್ಯ ಇರುವ ಮಠದ ಅಡಿಸ್ಥಳವನ್ನು ಹೆಬ್ಬಾರ ಸುಬ್ರಾಯರೆಂಬವರಿಂದ ಪಡಕೊಂಡು ಅದರಲ್ಲಿ ಅವರ ವಸತಿ ಮಠವನ್ನು ಕೂಡಾ ಹಾಗ ಸಂಗ್ರಹಿಸಿದ ಮರದಿಂದಲೇ ಕಟ್ಟಿಸಿಕೊಂಡರೆಂದೂ ತಿಳಿದು ಬರುತ್ತದೆ. ಅಂತೂ 1880ರ ವರೆಗೆ ವಿನಾಯಕ ದೇವರು ತನ್ನ ಗುಡಿಯಲ್ಲೇ ಇದ್ದಿರಬಹುದೆಂದು ತಿಳಿದು ಬರುತ್ತದೆ. ವಿನಾಯಕ ದೇವರು ತನ್ನ ಗುಡಿಯಲ್ಲೇ ಇದ್ದಿರಬಹುದೆಂದು ತಿಳಿದು ಬರುತ್ತದೆ. ವಿನಾಯಕ ದೇವರ ವಿಗ್ರಹವನ್ನು ಸ್ಥಾನಚ್ಯುತಿಗೊಳಿಸಿದ್ದು ದೇವಳದ ಸೊತ್ತುಗಳ ದುರುಪಯೋಗ, ದೇವಸ್ಥಾನದೊಳಗೆ ಹೆಬ್ಬಾರರ ಮರಣ ಇತ್ಯಾದಿ ದೋಷಗಳಿಂದಲೇ ಆಗ ಸುಬ್ರಹ್ಮಣ್ಯದಲ್ಲಿ ಮಹಾಮಾರಿ ರೋಗ ಬಂದು ಸ್ವಾಮಿಗಳು ಮತ್ತು ಆಸ್ರಣ್ಣರುಗಳು ಮೊದಲಾದವರ ಮರಣಗಳು

ಸಂಭವಿಸಲು ಕಾರಣವಾಯಿತೆಂದು ಊಹಿಸಲೂ ಸಾಧ್ಯವಿದೆ.

1882ನೇ ಇಸವಿ ಸಪ್ಟಂಬರ ತಿಂಗಳು ಮರಣ ಹೊಂದಿದ ವಿದ್ಯಾಪೂರ್ಣರ ಸ್ಥಾನಕ್ಕೆ ವ್ಯಾಸತೀರ್ಥರೆಂಬ ಒಬ್ಬ ಸ್ವಾಮಿಗಳು ನೇಮಿಸಲ್ಪಟ್ಟರು. ಇವರು ದೇವಸ್ಥಾನದ ಆಡಳಿತೆಯನ್ನು ವಹಿಸಿಕೊಳ್ಳುವಾಗ ಇವರಿಗೆ ಬರೇ 20-22 ವರ್ಷ ಪ್ರಾಯ. ಆ ಸಮಯದಲ್ಲಿ ಇವರ ಅಣ್ಣ ರಾಮಕೃಷ್ಣ ಐತಾಳ ವ, ಆಚಾರ್ಯ ಎಂಬವರು ಇವರ ಮಠದಲ್ಲಿ ಏಜಂಟರಾಗಿದ್ದರು. ಈ ಸ್ವಾಮಿಗಳು ಸುಬ್ರಹ್ಮಣ್ಯದಿಂದ ಸಾಧಾರಣ 108 ಮೈಲು ದೂರ ಇರುವ ಉಡುಪಿ ಹತ್ತಿರದ ಪಡಮುನ್ನೂರು ಮಾಗಣೆ ತೋಡಲೂರು ಗ್ರಾಮ ಎಂಬಲ್ಲಿಂದ ಬಂದವರು. ಇವರು ಸನ್ಯಾಸವಾದನಂತರ ಸುಬ್ರಹ್ಮಣ್ಯಕ್ಕೆ ಬಂದವರೆಂದು ತಿಳಿದುಬರುತ್ತದೆ. ಇವರು ವಿದ್ಯಾಪೂರ್ಣರ ಕಾಲದಲ್ಲೆ ಇಲ್ಲಿಗೆ ಬಂದರೆಂದು ತಿಳಿದುಬರುತ್ತದೆ. ಇವರು ವಿದ್ಯಾಪೂರ್ಣರ ಕಾಲದಲ್ಲೆ ಇಲ್ಲಿಗೆ ಬಂದುಕೊಂಡಿದ್ದು ದೇವಸ್ಥಾನದ ಎಲ್ಲಾ ವಿಚಾರಗಳನ್ನು ಅರಿತುಕೊಂಡವರಾಗಿದ್ದರು.

ಇವರು ದೇವಳದ ಆಡಳಿತೆಗೆ ಪ್ರವೇಶಿಸಿದೊಡನೆಯೇ ಆಗ ದೇವಳದ ಮೆನೇಜರಾಗಿದ್ದ ಸ್ಮಾರ್ತ ಶಿವ ಬ್ರಾಹ್ಮಣರಾದ ನೂಚಿಲ ಶ್ಯಾಮಣ್ಣ ಎಂಬವರನ್ನು ದೇವಸ್ಥಾನದಿಂದಲೇ ಹೊರ ಹಾಕಿದರು. ಆ ಮೇಲೆ ತನ್ನ ಜತೆ ಮೊಕ್ತೇಸರುಗಳಾದ ಎರಡು ಜನ ಆಸ್ರಣ್ಣರುಗಳನ್ನು ಅವರ ಮೊಕ್ತೇಸರಿಕೆಯಿಂದ ವಜಾ ಮಾಡಿಸಿದರು. ಹೇಗೆಂದರೆ ಒಬ್ಬರನ್ನು ಸ್ವಲ್ಪ ಹಣ ಕೊಟ್ಟು ರಾಜಿ ಅರ್ಜಿ ಕೊಡಿಸಿದ್ದೂ, ಮತ್ತೊಬ್ಬರ ಆಡಳಿತೆಯನ್ನು ಮೂವತ್ತು ವರ್ಷಕ್ಕೆ ತನ್ನ ಹೆಸರಿಗೆ ತಹನಾಮೆ ಬರೆಸಿಕೊಂಡು ಮೊಕ್ತೇಸರಿಕೆ ಹಕ್ಕನ್ನು ತನ್ನ ಸ್ವಾಧೀನ ಮಾಡಿಸಿಕೊಂಡದ್ದು ಆಗಿದೆ. ಇದರಿಂದಾಗಿ ಈ ವ್ಯಾಸತೀರ್ಥ ಸ್ವಾಮಿಗಳು ದೇವಳದಲ್ಲಿ ಏನು ಅನ್ಯಾಯವೆಸಗಿದರೂ ಇವರನ್ನು ಕೇಳುವವರಿಲ್ಲದಂತಾಗಿ 1883ರಿಂದ ಇವರು ಸರ್ವಾಧಿಕಾರಿಯಾಗಿ ಮೆರೆದರು. ಇವರ ಉದ್ಧಟತನಕ್ಕೆ ಹೆದರಿ ಆಗಿನ ದೇವಸ್ಥಾನದ ಕಮಿಟಿ ಮೆಂಬರರುಗಳು ಸಹಾ ಸುಬ್ರಹ್ಮಣ್ಯಕ್ಕೆ ಬರಲು ಹೆದರುತ್ತಿದ್ದರೆಂದು ತಿಳಿದು ಬರುತ್ತದೆ.

ಇವರು ಆಡಳಿತೆಗೆ ಪ್ರವೇಶಿಸುವವರೆಗೆ ಶ್ರೀ ಸುಬ್ರಹ್ಮಣ್ಯ ದೇವರಿಗೆ ಶ್ರೀ ಸುಬ್ರಹ್ಮಣ್ಯೇಶ್ವರನೆಂಬ ಹೆಸರಿತ್ತು. ಭಕ್ತಾದಿಗಳು ಸುಬ್ರಹ್ಮಣ್ಯೇಶ್ವರನೆಂಬ ಹೆಸರಿತ್ತು. ಭಕ್ತಾದಿಗಳು ಸುಬ್ರಹ್ಮಣ್ಯೇಶ್ವರನೆಂಬ ಹೆಸರಿಂದಲೇ ಕಾಣಿಕೆಗಳನ್ನು ಸಲ್ಲಿಸುತಿದ್ದರು. ಈ ಸ್ವಾಮಿಗಳು ಆಡಳಿತೆಗೆ ಪ್ರವೇಶಿಸಿ ಸರ್ವಾಧಿಕಾರಿಯಾದ ನಂತರ ತನ್ನ ಮಠಕ್ಕೆ ಸುಬ್ರಹ್ಮಣ್ಯ ಮಠವೆಂದೂ ತನ್ನ ಹೆಸರು ಸುಬ್ರಹ್ಮಣ್ಯ ಸ್ವಾಮಿ ಎಂದೂ ಇರಿಸಿಕೊಂಡು ಶ್ರೀ ಸುಬ್ರಹ್ಮಣ್ಯೇಶ್ವರನಿಗೂ ಶ್ರೀ ಸುಬ್ರಹ್ಮಣ್ಯ ಸ್ವಾಮಿ ಎಂಬ ಹೆಸರನ್ನು ಇರಿಸಿ ಜನತೆಗೆ ಪ್ರಚಾರಪಡಿಸಿದರು. ಅಂದಿನಿಂದ ತನ್ನ ಹೆಸರೂ ಸುಬ್ರಹ್ಮಣ್ಯ ದೇವರ ಹೆಸರೂ ಒಂದೇ ರೀತಿಯಾದುದರಿಂದ ಶ್ರೀ ಸುಬ್ರಹ್ಮಣ್ಯ ಸ್ವಾಮಿಗೆಂದು ದೇವಸ್ಥಾನಕ್ಕೆ ಬಂದ ವಂತಿಗೆ ವರಾಡಗಳನ್ನು ಸುಬ್ರಹ್ಮಣ್ಯ ಸ್ವಾಮಿಯಾದ ತನಗೆ ಬಂದದ್ದೆಂದು ಮಾಡಿಕೊಂಡು ದೇವಸ್ಥಾನಕ್ಕೆ ಬರುತ್ತಿದ್ದ ವಂತಿಗೆ ವರಾಡಗಳ ಹೆಚ್ಚಿನ ಅಂಶವನ್ನು ತನ್ನದನ್ನಾಗಿ ಮಾಡಿಕೊಂಡರೆಂದು ತಿಳಿದು ಬರುತ್ತದೆ.

1883ರಲ್ಲು ಈ ವ್ಯಾಸತೀರ್ಥ ಸ್ವಾಮಿಗಳ ದುರಾಡಳಿತವನ್ನು ಕಂಡು ಆಗಿನ ದೇವಸ್ಥಾನದ ಕಮಿಟಿಯವರಾದ ಶ್ರೀನಿವಾಸ ಭಟ್ಟ ನಾರಾಯಣ ಶಗ್ರಿತ್ತಾಯ ಮತ್ತು ಕೃಷ್ಣ ಶಿಬರಾಯ ಈ ಮೂರು ಜನರು ಆಗಿನ ಆಡಳಿತೆ ಮೆಂಬರರಾದ ರಾಮಕೃಷ್ಣ ಆಸ್ರಣ್ಣರ ಅರ್ಜಿ

ಪ್ರಕಾರ ತನಿಖೆ ನಡೆಸಿ ಅನೇಕ ದೇವಳದ ಉದ್ಯೋಗಸ್ಥರುಗಳಿಂದ ಹೇಳಿಕೆಗಳನ್ನು ಪಡಕೊಂಡು ಸ್ವಾಮಿಗಳನ್ನು ತಪ್ಪಿತಸ್ಥರನ್ನಾಗಿ ಮಾಡಿ ಅವರನ್ನು ದೇವಸ್ಥಾನದ ಆಡಳಿತೆಯಿಂದ ಅಮಾನತುಗೊಳಿಸಿದರು. ಹೀಗೆ ಅಮಾನತುಗೊಳಿಸಲ್ಪಟ್ಟ ಸ್ವಾಮಿಗಳು ಈ ಸುಬ್ರಹ್ಮಣ್ಯ ದೇವಸ್ಥಾನವು ತನ್ನ ಮಠದ ಶಿಲಶಿಲಾ ಹಕ್ಕಿನದೆಂದು ದೇವಳದ ಆಡಳಿತೆಯು ತನಗೆ ಸಿಕ್ಕಬೇಕೆಂದು ವಾದಿಸಿ O.S. 27 of 1886 ವ್ಯಾಜ್ಯ ಒಂದನ್ನು ದೇವಳದ ಕಮಿಟಿಯವರ ಮೇಲೆ ಹೂಡಿದರು. ಈ ವ್ಯಾಜ್ಯದಲ್ಲಿ ಸ್ವಾಮಿಗಳು ಒಂದು ಪೋರ್ಜರಿ ತಾಮ್ರ ಶಾಸನವನ್ನು ತಯಾರು ಮಾಡಿಸಿ ತಮ್ಮ ನರಸಿಂಹ ಗುಡಿಯಲ್ಲಿ ಇರಿಸಿ ಅದನ್ನು ಸ್ವಲ್ಪ ಸಮಯದ ನಂತರ 1886ನೇ ಇಸವಿ ಸಪ್ಟಂಬರದಲ್ಲಿ ಆ ಗುಡಿಯನ್ನು ರಿಪೇರಿ ಮಾಡಿಸುವ ನೆವನದಿಂದ ಅಗೆಯುವಾಗ ತಾಮ್ರ ಶಾಸನ ಒಂದು ಸಿಕ್ಕಿತೆಂದು ಅದರಲ್ಲಿ ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ಆಡಳಿತೆಯು ಮಠದ ಸ್ವಾಮಿಯವರಿಗೆ ಬಲ್ಲಾಳರಾಯ ಬಿಟ್ಟಿದ್ದೆಂದು ಮಾಡಿಸಿ ಆ ಶಾಸನವನ್ನು ಮೇಲಿನ ವ್ಯಾಜ್ಯದಲ್ಲಿ ಹಾಜರುಪಡಿಸಿದರು. ಇದಕ್ಕೆ ಆಧಾರವಾಗಿ ಈ ಕೆಳಗಿನ ಪತ್ರದಿಂದ ಈ ಪೋರ್ಜರಿ ಶಾಸನದಲ್ಲಿ ಆಗ ಯಾರ್ಯಾರು ಸೇರಿರುವರು ಎಂಬುದು ವಿಶದವಾಗುತ್ತದೆ. ಅದರಲ್ಲಿ ಸ್ವಾಮಿಗಳು ಹಾಜರುಪಡಿಸಿದ ತಾಮ್ರ ಶಾಸನವು ಪೋರ್ಜರಿಯೆಂದೂ ನಿಶ್ಚಯಿಸಲ್ಪಟ್ಟು ಅವರ ಮೇಲೆ 13 ತಪ್ಪುಗಳು ಹೊರಿಸಲ್ಪಟ್ಟು ಕಮಿಟಿಯವರು ಅವರನ್ನು ಅಮಾನತುಪಡಿಸಿದ್ದು ಸರಿಯೆಂದೂ, ತಾಮ್ರ ಶಾಸನವು ಪೋಜರಿ ಎಂದೂ ತಾ. 27-9-1887ರಲ್ಲಿ ಆಗಿನ ಮಂಗಳೂರು ಸಬ್ ಕೋರ್ಟಿನ ಸಬ್ ಜಡ್ಜ್ ಶ್ರೀಮಾನ್ ಗೋಪಾಲ ನಾಯರ್‌ರವರಲ್ಲಿ ಇತ್ಯರ್ಥವಾಯಿತು. ಮಠದ ಸ್ವಾಮಿಗಳನ್ನು ಅಮಾನತುಗೊಳಿಸಿದ ಮೇಲೆ ದೇವಸ್ಥಾನದ ಆಡಳಿತೆಗೆ ಬೆಳ್ತಂಗಡಿಯಲ್ಲಿ ಮಾಗಣೆ ಶ್ಯಾನುಬಾಗನಾಗಿದ್ದ ಬಾಗಲೋಡಿ ರಾಮಕೃಷ್ಣಯ್ಯನನ್ನು ಕಮಿಟಿಯವರು ನೇಮಕ ಮಾಡಿದರು.

ಈ ಸ್ವಾಮಿಗಳು ಹಾಜರುಪಡಿಸಿದ ಪೋರ್ಜರಿ ತಾಮ್ರ ಶಾಸನದ ವಿಷಯದಲ್ಲಿ ಮೇಲಿನ O.S. No. 27/1876ರ ವ್ಯಾಜ್ಯದ ತೀರ್ಪಿನಲ್ಲಿ ಆಗಿನ ಸಬ್ ಜಡ್ಜರಾದ ಶ್ರೀ ಗೋಪಾಲನ್ನಾಯರ್‌ರವರು ಈ ರೀತಿ ವರ್ಣಿಸಿದ್ದಾರೆ.

"The strange mode of its discovery as told by the plaintiff and his 4th witness Venkatramana Bhata at once reminded me of the following passage in a work on "India and its native princess" by that great French Traveller M. Lovice Rousselt (Page 187) "like the monks" of the middle ages, who took advantage of the general ignorance to forge royal charters, the brahmins of our day employ the same means to increase their possesions. With great solemanity they dig up a plate of Copper previously oxidized and burried by themselves, on wich to the astonishment of all it is recorded that God "Krishna or some mytheological hero, had granted them two or three thousands years before, the very land they Covet. The real owners of the land are then without pity, and if any Venture to doubt the authenticity of the charter, they take good care to Conceal their thoughts for fear of bringing upon themselves the venjence of the all powerful Cast of preiests."

ಇದರ ತಾತ್ಪರ್ಯವೇನೆಂದರೆ :

ನಮ್ಮ ದೇಶದಲ್ಲಿ ಈಗಿನ ಬ್ರಾಹ್ಮಣರು ಮಧ್ಯಕಾಲದ ಐರೋಪ್ಯ ಯತಿಗಳಂತೆ, ತಾವು ಆಕ್ರಮಿಸಬೇಕೆಂದಿದ್ದ ಸ್ಥಳದಲ್ಲಿ ತಮಗೆ ಅನುಕೂಲವಾಗುವಂತೆ ಬರೆದ ಕೃತ್ರಿಮ ತಾಮ್ರ ಶಾಸನವನ್ನು ತಾವೇ ಹುದಿಗಿಟ್ಟು ಸ್ವಲ್ಪ ಸಮಯದ ನಂತರ ಹತ್ತು ಜನರ ಎದುರಿನಲ್ಲಿ ಅಜ್ಞರಾದ ಇತರರು ಆಶ್ಚರ್ಯಪಡುವಂತೆ ಹೊರತೆಗೆದು ಇದು ಸಾಧಾರಣ ಒಂದೆರಡು ಸಾವಿರ ವರ್ಷಗಳ ಹಿಂದೆ ಶ್ರೀ ಕೃಷ್ಣ ವ, ಯಾರಾದರೂ ಯುಗ ಪುರುಷರು ತಮಗೆ ದಾನತತ್ತ ಮಾಡಿದ್ದೆಂದು ಶ್ರುತಪಡಿಸಿ ಅಲ್ಲಿಯ ನ್ಯಾಯವಾದ ಹಕ್ಕುದಾರರನ್ನು ಆಕ್ರಮಣಕಾರರೆಂದು ನಿರ್ದಯೆ ಮತ್ತು ಬಲಾತ್ಕಾರದಿಂದ ಹೊರಹಾಕಿ ಆಕ್ರಮಿಸಿದ ಸ್ಥಳವನ್ನೇ ತಮ್ಮ ಸ್ಥಳವೆಂದು ಅನುಭವಿಸುತ್ತಾರೆ. ಅದರ ನ್ಯಾಯವಾದ ಹಕ್ಕುದಾರರು ಆ ಸ್ಥಳದ ಅಧಿಕಾರಿಗಳೆಂದು ತಿರುಗಿ ಆ ಸ್ಥಳವನ್ನು ಪ್ರವೇಶಿಸಬಹುದೆಂಬ ಭಯದಿಂದಲೂ, ಮತ್ತು ಇತರ ಶಕ್ತಿಯುತ ಜಾತಿಗಳಿಗೆ ಈ ಗುಟ್ಟು ಸಿಕ್ಕದಂತೆಯೂ ಬಹಳ ಜಾಗರೂಕತೆಯನ್ನು ತೆಗೆದುಕೊಳ್ಳುತ್ತಾರೆ.

ಇದೇ ಜಜ್‌ಮೆಂಟಿನಲ್ಲಿ ಪಾರ 16ರಲ್ಲಿ ಸ್ಮಾರ್ತ ಶಿವ ಬ್ರಾಹ್ಮಣರಾದ ಸ್ಥಾನಿಕ ಹೆಬ್ಬಾರರ ಅಧಿಕಾರ ಸ್ಥಾನಮಾನಗಳನ್ನೂ ತೋರಿಸಿಕೊಟ್ಟು 18ನೇ ಪಾರದಲ್ಲಿ ಜಡ್ಜರು 1817ರ ಮುಂಚೆ ಸ್ಥಾನಿಕರು ಮತ್ತು ಊರಿನ ಮುಖ್ಯಸ್ಥರು ಆಡಳಿತೆಯಲ್ಲಿ ಇದ್ದರೆಂದು ತಿಳಿಸಿದ್ದರಿಂದ ಈ ದೇವಸ್ಥಾನದ ನ್ಯಾಯವಾದ ಹಕ್ಕುದಾರರು ಸ್ಮಾರ್ತರಾದ ಸ್ಥಾನಿಕರೆಂದೂ ವೈಷ್ಣವ ಮಾಧ್ವರ ಆಡಳಿತೆ ಬಂದ ನಂತರ ಅಲ್ಲಿಯ ನ್ಯಾಯವಾದ ಹಕ್ಕುದಾರರನ್ನು ನಿರ್ದಯೆ ಮತ್ತು ಬಲತ್ಕಾರದಿಂದ ಹೊರಹಾಕಿ ಅವರ ಸ್ಥಾನವನ್ನು ಫೋರ್ಜರಿ ಶಾಸನದ ಆಧಾರದಿಂದ ಆಕ್ರಮಿಸಲು ಪ್ರಯತ್ನಿಸಿದ್ದೆಂದು ಸ್ಪಷ್ಟವಾಗ್ತುದೆ.

ಸ್ವಾಮಿಗಳು ಈ ತೀರ್ಪಿನ ಮೇಲೆ ಮದ್ರಾಸಿನಲ್ಲಿ A.S. 31 of 1888 ಎಂಬ ಅಪೀಲನ್ನು ದಾಖ್ಲು ಮಾಡಿದರು. ಇದರಲ್ಲಿ ಸ್ವಾಮಿಗಳ ಹಾಜರುಪಡಿಸಿದ ತಾಮ್ರ ಶಾಸನವು ಫೋರ್ಜರಿಯೆಂದು ಮಂಜೂರು ಮಾಡಲ್ಪಟ್ಟು ದೇವಳಕ್ಕೆ ಹೊಸತಾಗಿ ನೇಮಕ ಮಾಡಲ್ಪಟ್ಟ ಬಾಗಲೋಡಿ ರಾಮಕೃಷ್ಣಯ್ಯನು ಕೂಡ ಅಷ್ಟು ಯೋಗ್ಯನಲ್ಲವಾದುದರಿಂದ ಸ್ವಾಮಿಯನ್ನು ದೇವಳದ ಆಡಳಿತದಲ್ಲಿ ಒಬ್ಬ ಸದಸ್ಯನನ್ನಾಗಿ ಮಾತ್ರ ಉಳಿಸಿ ಅವರನ್ನು ಮುಖ್ಯ ಆಡಳಿತೆಯಿಂದ ವಿರಹಿತಪಡಿಸಿದರು. ಇವರಲ್ಲಿ ಸರ್ವಶ್ರೀಗಳಾದ ಮುತ್ತುಸ್ವಾಮಿ ಅಯ್ಯರ್ ಮತ್ತು ವಿಲ್ಕಿನ್‌ಸನ್ ಎಂಬವರು ಹೈಕೋರ್ಟು ಜಡ್ಜರಾಗಿದ್ದರು. ಈ ತೀರ್ಪು 24-10-1888ರಲ್ಲಿ ಆಯಿತು. ಇವರಿಂದಾಗಿ ಆಮೇಲೆ ಸ್ವಾಮಿಗಳು ಆಡಳಿತೆಯ ಒಬ್ಬ ಸದಸ್ಯನಾಗಿ ಮಾತ್ರ ಉಳಿದರು.

ಮೇಲಿನ ವ್ಯಾಜ್ಯದಲ್ಲಿ ತಾಮ್ರ ಶಾಸನವು ಫೋರ್ಜರಿ ಆದುದರಿಂದ ಸ್ವಾಮಿಗಳು ಫೋರ್ಜರಿ ಮಾಡಿದರೆಂಬ ತಪ್ಪಿನ ಮೇಲೆ ಬಾಗಲೋಡಿ ರಾಮಕೃಷ್ಣಯ್ಯನವರು ಸ್ವಾಮಿಗಳ ಮೇಲೆ ಕೋರ್ಟಿಗೆ Mis Petition No. 440/1890ನ್ನು ದಾಖ್ಲು ಮಾಡಿದ್ದರು.

1892ರಲ್ಲಿ ದೇವಳದ ಆಡಳಿತೆ ನಡೆಸುತ್ತಿದ್ದ ಬಾಗಲೋಡಿ ರಾಮಕೃಷ್ಣಯ್ಯನು ಮೃತಪಟ್ಟ ನಂತರ ಅವರ ಮಗ ಬಾಗಲೋಡಿ ಭೋಜರಾಯರೆಂಬವರು ಆಡಳಿತೆಗೆ ಕಮಿಟಿಯವರಿಂದ ನೇಮಿಸಲ್ಪಟ್ಟರು. ಇವರೆಲ್ಲಾ ಶಿವಳ್ಳಿ ಮಾಧ್ವ ವೈಷ್ಣವರು. ಹಾಗೆ ನೇಮಿಸಲ್ಪಟ್ಟ ಭೋಜರಾಯರನ್ನು ಸ್ವಾಮಿಗಳು ಆಡಳಿತೆ ನಡೆಸಲು ಬಿಡದೆ ಅವರ ಅಧಿಕಾರವನ್ನು ಬಲಾತ್ಕಾರದಿಂದ ತಾನು

ತೆಗೆದುಕೊಂಡು 1899ರ ವರೆಗೆ ತಾನೇ ದೇವಳದ ಸರ್ವಾಧಿಕಾರಿಗಳಾದರು.

1892ರಿಂದ 1899ರ ವರೆಗಿನ 7 ವರ್ಷಗಳ ಆಡಳಿತೆ ನಡೆಸಿದ ವ್ಯಾಸತೀರ್ಥ ಸ್ವಾಮಿಯಿಂದ ಈ ದೇವಳದ ಸೊತ್ತುಗಳು ತುಂಬಾ ದುರುಪಯೋಗ ಮಾಡಲ್ಪಟ್ಟಿವೆ ಎಂದು ತಿಳಿದು ಬರುತ್ತದೆ.

C.C. No. 7 of 1898 ಪ್ರಕಾರ ಈ ವ್ಯಾಸ ತೀರ್ಥ ಸ್ವಾಮಿಯವರು ತಾನು ದೇವಸ್ಥಾನದ ಚಿನ್ನಾಭರಣಗಳ ಮತ್ತು ಇತರ ಬೆಲೆಬಾಳುವ ಎಲ್ಲಾ ಸೊತ್ತುಗಳನ್ನು ತನ್ನ ಅಧಿ ೀನದಲ್ಲಿಟ್ಟುಕೊಂಡುದ್ದರಿಂದ ಸಾಧಾರಣ ಈಗ 20,000 ರೂಪ್ಯಾ ಬೆಲೆಬಾಳುವ ಚಿನ್ನಾಭರಣಗಳು 4 ತಿಂಗಳು ಮುಂಚೆಯೇ ದೇವಸ್ಥಾನದಲ್ಲಿ ಕಳವಾಯಿತೆಂದು ಸುಳ್ಳು ಫಿರ್ಯಾದಿ ಕೊಟ್ಟು ತಾನೇ ದೇವಸ್ಥಾನದ ಚಿನ್ನಾಭರಣಗಳನ್ನು ದೇವಸ್ಥಾನದ ಪೂಜೆಯವರಾದ ಸುಬ್ರಾಯ ಆಸ್ರಣ್ಣರ ಮುಖಾಂತ್ರ ಮಂಗಳೂರು ಬೇಂಕಿನಲ್ಲಿ ಅಡವಿಗೆ ಕೊಟ್ಟು ಆ ಹಣವನ್ನು ದುರುಪಯೋಗ ಮಾಡಿದ್ದಕ್ಕೆ ಮೇಲಿನ ಕ್ರಿಮಿನಲ್ ವ್ಯಾಜ್ಯವು ಸ್ವಾಮಿಯ ಮೇಲೆ ಮಾಡಿದ್ದಾಗಿರುತ್ತದೆ. ಆದರೆ ಪಿರ್ಯಾದಿ ಕೊಟ್ಟ ದೇವಸ್ಥಾನದ ಆಡಳಿತೆಯವರಾದ ರಾಮಕೃಷ್ಣ ಆಸ್ರಣ್ಣರು ಆಗಲೇ ಮರಣಪಟ್ಟದ್ದರಿಂದ ಸ್ವಾಮಿಯು ಆ ಕೇಸಿನಿಂದ ಹೊರಬಂದರು ಎಂದು ತಿಳಿದು ಬರುತ್ತದೆ.

ಪಿರ್ಯಾದು ಮಾಡಿದ ರಾಮಕೃಷ್ಣ ಆಸ್ರಣ್ಣರ ಮರಣದ ನಂತರ ಬಾಗಲೋಡಿ ಭೋಜರಾಯನ್ನೂ ಸುಬ್ರಾಯ ಆಸ್ರಣ್ಣರನ್ನೂ ಪ್ರತಿವಾದಿಗಳನ್ನಾಗಿ ಮಾಡಿ ಅವರ ಮೇಲೆ 21-10-1899ರಲ್ಲಿ ಅದೇ ವ್ಯವಹರಣೆಯನ್ನು C.C. No. 126/1899ರ ಪ್ರಕಾರ ಪುನಃ ಮುಂದರಿಸಿದರು. ಇದರಲ್ಲಿ ಮೂರು ತಪ್ಪುಗಳು 1) ಸ್ವಾಮಿಯವರು ಮದ್ರಾಸ್ ಬೇಂಕಿನಲ್ಲಿ 13 ಸೊತ್ತುಗಳನ್ನು 3-5-1897ರಲ್ಲಿ ಅಡವಿಗೆ 2ನೇ ಪ್ರತಿವಾದಿ ಸುಬ್ರಾಯ ಆಸ್ರಣ್ಣರ ಮುಖಾಂತ್ರ ಇಡ್ಸಿದ್ದು. 2) 2 ಸೊತ್ತುಗಳನ್ನು ಅಗ್ರಹಾರ ರಾಮಕೃಷ್ಣಯ್ಯನವರಲ್ಲಿ 8-4-1897ರಲ್ಲಿ ಸ್ವಾಮಿ ಬಗ್ಗೆ ಅದೇ ಸುಬ್ರಾಯ ಆಸ್ರಣ್ಣರು ಅಡವಿಗೆ ಇಟ್ಟದ್ದು. 3) 1897 ಫೆಬ್ರವರಿಯಲ್ಲಿ ಒಂದು ಸೊತ್ತನ್ನು ಕುಂಜಂಬು ಸುಬ್ಬ ಗೌಡನಲ್ಲಿ ಸ್ವಾಮಿಯರೇ ಅಡವಿಗೆ ಇಟ್ಟದ್ದು. ಮೇಲೆ ಹೇಳಿದ ಸೊತ್ತುಗಳೆಂದರೆ ಶ್ರೀ ಸುಬ್ರಹ್ಮಣ್ಯ ದೇವರ ಮೇಲೆ ಅಲಂಕರಿಸಲ್ಪಡುವ ಚಿನ್ನದ ರತ್ನಗಳಿಂದ ಕೂಡಿದ ಪದಕವುಳ್ಳ ಸರಗಳಾಗಿವೆ.

ಈ ಸ್ವಾಮಿಯವರು ಈ ರೀತಿ ದೇವಸ್ಥಾನದ ಸೊತ್ತುಗಳನ್ನು ದುರುಪಯೋಗ ಪಡಿಸಿದ್ದಕ್ಕಾಗಿ ಅವರನ್ನು ಕಮಿಟಿಯವರು ಜುಲೈ 1899ರಲ್ಲಿ ದೇವಸ್ಥಾನದ ಆಡಳಿತೆಯಿಂದ ವಜಾಪಡಿಸಿದರು. (Dismissed)

C.C. No. 127 of 1900 ಇದರಲ್ಲಿ ಸ್ವಾಮಿಯವರಿಗೆ (Breach of Trust) ದೇವಸ್ಥಾನಕ್ಕೆ ನಂಬಿಕೆ ದ್ರೋಹ ಮಾಡಿದನೆಂದು 17-5-1901ರಲ್ಲು ಶಿಕ್ಷೆಯಾಯಿತು. (Convicted) ಅದರಲ್ಲಿ ಬೆಳ್ಳಿಯ ತಟ್ಟೆಗಳನ್ನು ತಪ್ಪಿಸಿದ್ದಕ್ಕೆ ರೂಪ್ಯಾ 500 ಚಿನ್ನದ ಚಕ್ರಸರಗಳನ್ನು ವಂಚಿಸಿದ್ದಕ್ಕೆ ರೂಪ್ಯಾ 500 ಚಿನ್ನದ ತಗಡು ಮುಚ್ಚಿದ ಕಟ್ಟಿಗೆ ಕೋಲುಗಳನ್ನು ತಪ್ಪಿಸಿದಕ್ಕೆ ರೂ. 1000 ಹೀಗೆ ಒಟ್ಟು ರೂ. 2000 ಇವರಿಗ ಜುಲ್ಮಾನೆ ಆಯಿತು. ಹೈಕೋರ್ಟು ಅಪೀಲಿನಲ್ಲೂ ತಾ. 30-9-1901ರಲ್ಲಿ ಜುಲ್ಮಾನೆಯೂ ಕಾಯಂ ಆಯಿತು.

1897ರಲ್ಲಿ ದೇವಸ್ಥಾನದಲ್ಲಿ ಮೇಲಿನ ವ್ಯಾಸತೀರ್ಥ ಸ್ವಾಮಿ ಕಾಲದಲ್ಲೆ ದಕ್ಷಿಣ ಕನ್ನಡ ಜಿಲ್ಲಾ ಸಪ್ಲಿಮೆಂಟ್ ತಾ. 6-11-1897 ಗಜೆಟಿನಲ್ಲಿ ಪ್ರಕಟಿಸಲ್ಪಟ್ಟ ಪ್ರಕಾರ 5-9-1897ರಲ್ಲು ಆಗ ರೂಪ್ಯಾ 60412-12 ಆಣೆ ಬೆಲೆಬಾಳುವ ದೇವಸ್ಥಾನದ ಸೊತ್ತುಗಳು ಕಂದಹಾರಿಗಳಿಂದ ದರೋಡೆ ಮಾಡಲ್ಪಟ್ಟಿವೆ ಎಂದು ಸುಬ್ರಹ್ಮಣ್ಯಾ ಸ್ಟೇಷನ್ ಕ್ರಮ ನಂಬ್ರ 11/1897 I.P.C. 397ರಲ್ಲಿ ತಿಳಿದು ಬರುತ್ತದೆ. ಆ ಪಟ್ಟಿಯಲ್ಲಿ ನಂಬ್ರ 16ನೇ ಸೊತ್ತು ಈ ದೇವಳದಲ್ಲಿ ಅಡಗಿರುವ ಸಿದ್ಧಿವಿನಾಯಕ ದೇವರ ಕೊಂಡಿ ಸರವಾಗಿದೆ. ಈ ಸರದಲ್ಲಿ ಪದಕದ ಹಾಗೆ ಒಂದು ಖಾಲಿ ಚಿನ್ನದ ರೂಪ್ಯಾ ಪಟ್ಟಿ ಅಗಲದ ಪದಕಕ್ಕೆ ವಿಳಾಸ ಇರುತ್ತದೆ. ಚಿನ್ನ ಅಂದಾಜು ಸೇರು ಒಂದು. ಅದರ ಆಗಿನ ಮೌಲ್ಯ ರೂಪ್ಯಾ 600 ಆಗಿರುತ್ತದೆ.

ಈ ದರೋಡೆ ಕೂಡಾ ಸ್ವಾಮಿಯವರು ಬನಾವಟು ಮಾಡಿದ್ದಾಗಿಯೂ ಆಗಿನ ಅವರ ದುರಾಡಳಿತೆಯಿಂದ ಊಹಿಸಬೇಕಾಗುತ್ತದೆ.

ಅಂತೂ 1899ರಲ್ಲಿ ವ್ಯಾಸತೀರ್ಥ ಸ್ವಾಮಿಗಳ ಅನ್ಯಾಯಗಳನ್ನು ತಡೆಯಲಾರದೆ ಆಗಿನ ಆಡಳಿತೆ ಕಮಿಟಿಯವರು ಸ್ವಾಮಿಗಳನ್ನು ಆಡಳಿತೆಯಿಂದ ತೆಗೆದು ಅವರ ಸ್ಥಾನಕ್ಕೆ ಈ ಮೊದಲು 1892ರಲ್ಲಿ ನೇಮಿಸಲ್ಪಟ್ಟ ಬಾಗಲೋಡಿ ಭೋಜರಾಯರನ್ನೇ ನೇಮಿಸಿದರು. (Cal C. 27/1900 Deposition of Bhoja Rao Page 2, Exihit 4 appointed Muktesar on 28-2-1892.)

ಹಾಗೆ ದೇವಸ್ಥಾನದ ಆಡಳಿತೆಯಿಂದ ತೆಗೆದುಹಾಕಲ್ಪಟ್ಟ ವ್ಯಾಸತೀರ್ಥ ಸ್ವಾಮಿಗಳು ಈಗ ಆಡಳಿತೆಯನ್ನು ವಹಿಸಿಕೊಂಡ ಭೋಜರಾಯರ ಮತ್ತು ನರಸಿಂಹ ಆಸ್ರಣ್ಣರ ಮೇಲೆ 1899ನೇ ಇಸವಿಯಲ್ಲಿ ದೇವಸ್ಥಾನಕ್ಕೆ ಬರುವ ರೂಪ್ಯಾ 4400 ತಸದೀಕು ತನಗೆ ಸಿಕ್ಕಬೇಕೆಂದು O.S. No 74/1903 ವ್ಯಾಜ್ಯ ಒಂದನ್ನು ಹೂಡಿದರು. ಈ ವ್ಯಾಜ್ಯವು ಪ್ರತಿವಾದಿಗಳಿಗೆ ಖರ್ಚು ಸಮೇತ ಕೊಡುವಂತೆ ತಾರೀಕು 8-2-1905ರಲ್ಲಿ ತೆಗೆದುಹಾಕಲ್ಪಟ್ಟಿತು.

ವ್ಯಾಸತೀರ್ಥ ಸ್ವಾಮಿಯವರು ಸುಬರಾಯ ಆಸ್ರಣ್ಣರ ಮುಖಾಂತ್ರ ಆಗ ಸಾಧಾರಣ 5000 ರೂಪ್ಯಾ ಬೆಲೆಬಾಳುವ ಚಿನ್ನಾಭರಣಗಳನ್ನು ಮದ್ರಾಸ್ ಬೇಂಕಿನಲ್ಲಿ ಅಡವು ಇಟ್ಟ ಬಾಬ್ತು ಅದರ ವಸೂಲಿಗೆ ಭೋಜರಾಯರು 1) ಸ್ವಾಮಿ 2)ಸುಬ್ರಾಯ ಆಸ್ರಣ್ಣ 3) ನರಸಿಂಹ ಆಸ್ರಣ್ಣ ಈ ಮೂರು ಜನರ ಮೇಲೆ O.S. No. 66 of 1903 ವ್ಯಾಜ್ಯವನ್ನು ಹೂಡಿದರು. ಈ ವ್ಯಾಜ್ಯದಲ್ಲಿ ಸ್ವಾಮಿಗಳು ಮೇಲಿನ ಹಣವನ್ನು ದೇವಸ್ಥಾನಕ್ಕೆ ತುಂಬಿಸುವಂತೆ ಡಿಕ್ರಿ ಆಯಿತು. ಆದರೆ 1906ರಲ್ಲಿ ವ್ಯಾಸತೀರ್ಥ ಸ್ವಾಮಿಯು ಮರಣಹೊಂದಿದುದರಿಂದ ಈ ಹಣವನ್ನು ವ್ಯಾಸತೀರ್ಥ ಸ್ವಾಮಿಯ ನಂತರ ಅವರ ಮಠಕ್ಕೆ ನೇಮಕಹೊಂದಿದ ವಿಶ್ವಜ್ಞ ತೀರ್ಥಸ್ವಾಮಿಯರು ಕೊಡಬೇಕೆಂದು ಮಾಡಿದ R.E.A. 101 of 1907 and C.M.A. 240 of 1908 High Courtನಲ್ಲೂ ವ್ಯಾಸತೀರ್ಥ ಸ್ವಾಮಿಯವರು ದುರುಪಯೋಗ ಮಾಡಿದ ಹಣವನ್ನು ವಿಶ್ವಜ್ಞ ತೀರ್ಥ ಸ್ವಾಮಿಯವರು ಕೊಡಲು ಬಾಧ್ಯರಲ್ಲವೆಂದಾಗಿ ಅದು ಬಿಟ್ಟು ಹೋಯಿತು.

ಇಷ್ಟು ಅನರ್ಥ ಪರಂಪರೆಗಳನ್ನು ಈ ದೇವಸ್ಥಾನಕ್ಕೆ ತಂದುಹಾಕಿದ ವ್ಯಾಸತೀರ್ಥ ಸ್ವಾಮಿಗಳು ಕಟ್ಟಕಡೆಗೆ 1906 ದಶಂಬರ ತಿಂಗಳಲ್ಲಿ ಉಡುಪಿಗೆ ಹತ್ತಿರವಿರುವ ಮಲ್ಪೆ ಎಂಬಲ್ಲಿ ಚಿತ್ತಭ್ರಮೆಯುಂಟಾಗಿ ಕಾಲವಾದರೆಂದು ತಿಳಿದು ಬರುತ್ತದೆ.

ಶ್ರೀ ವ್ಯಾಸತೀರ್ಥ ಸ್ವಾಮಿಗಳ ನಂತರ ಬಂದ ಶ್ರೀ ವಿಶ್ವಜ್ಞ ತೀರ್ಥ ಸ್ವಾಮಿಗಳು ಕ್ರೋಧಿ ಸಂವತ್ಸರದಲ್ಲಿ ಅಂದರೆ 1904-1905ರಲ್ಲಿ ಮಠದ ಆಡಳಿತೆಯನ್ನು ವಹಿಸಿಕೊಂಡರೆಂದು ತಿಳಿದುಬರುತ್ತದೆ. ಇವರು 1894-95ರಲ್ಲು ಸನ್ಯಾಸ ತೆಗೆದುಕೊಂಡದ್ದಾಗಿ ತಿಳಿಮಬರುತ್ತದೆ.

ಅಂತೂ ಸಾಧಾರಣ 1845ರಿಂದ 1899ರ ವರೆಗೆ ಈ ದೇವಸ್ಥಾನದ ಆಡಳಿತೆಗೆ ವಿದ್ಯಾರಾಜ, ವಿದ್ಯಾಪೂರ್ಣ ಮತ್ತು ವ್ಯಾಸತೀರ್ಥರೆಂಬ ಮೂರು ಜನ ಮಾಧ್ವ ಸ್ವಾಮಿಗಳವರಿಂದ ಗ್ರಹಣ ಹಿಡಿದಂತೆ ಆಗಿತ್ತು.

ವ್ಯಾಸತೀರ್ಥರ ನಂತರ ಅವರ ಸ್ಥಾನಕ್ಕೆ ಬಂದ ವಿಶ್ವಜ್ಞ ತೀರ್ಥ ಸ್ವಾಮಿಗಳು ದೇವಳದ ಆಡಳಿತೆಯು ಬಿಟ್ಟುಹೋದ ಮೇಲೆಯು ಕೂಡಾ ದೇವಸ್ಥಾನದ ಮೇಲೆ ತಮ್ಮ ಮಠಕ್ಕೆ ದೇವಳದಲ್ಲಿ ಕೆಲವು ಹಕ್ಕು ಬಾಧ್ಯತೆಗಳಿಗಾಗಿ O.S. 145 of 1913 ವ್ಯಾಜ್ಯ ಒಂದನ್ನು ಆಗಿನ ಆಳಳಿತೆದಾರರಾದ ಭೋಜರಾಯರು ಮತ್ತು ನರಸಿಂಹ ಆಸ್ರಣ್ಣರ ಮೇಲೆ ಹೂಡಿದರು. ಈ ವ್ಯಾಜ್ಯದಲ್ಲಿ 1) ಅವರಿಗೆ ಸಿಕ್ಕುವ ಮರ್ಯಾದೆಗಳು 2) ಕೆಲವು ಉತ್ತಾರಗಳು 3) ಉರ್ಲಿ ಅಕ್ಕಿ ಮತ್ತು ಬಾಳುತ್ತಾರ ಅಕ್ಕಿ 4) ಉಪಾಧಿಗಳು ತಮಗೆ ಸಿಕ್ಕಬೇಕೆಂದು ಅಲ್ಲದೆ ತನಗೆ ದೇವಸ್ಥಾನ ದೇವತಾ ವಿನಿಯೋಗಗಳ ಮೇಲ್ತನಿಕೆ ಅಧಿಕಾರ ಉಂಟೆದೂ ಅವರು ವಾದಿಸಿದ್ದಾಗಿರುತ್ತದೆ. ಇದರಲ್ಲಿ ಮಠದ ಏಜಂಟ್ ಸ್ವಾಮಿಗಳ ತಮ್ಮ ಲಕ್ಷ್ಮೀನಾರಾಯಣ ಆಚಾರ್ಯರು ಸ್ವಾಮಿಗಳು ಸುಬ್ರಹ್ಮಣ್ಯ ದೇವರಿಗೆ ಪೂಜೆ ಮಾಡುವುದಿದ್ದರೂ ಅವರು ಸುಬ್ರಹ್ಮಣ್ಯ ದೇವರ ತೀರ್ಥ ಪ್ರಸಾದಗಳನ್ನು ಮಾಧ್ವ ವೈಷ್ಣವರಾದುದರಿಂದ ಸ್ವೀಕರಿಸುವ ಕ್ರಮವಿಲ್ಲವೆಂದು ಹೇಳಿಕೆ ಕೊಟ್ಟಿರುತ್ತಾರೆ. ಅಲ್ಲದೆ ಶ್ರೀ ಸುಬ್ರಹ್ಮಣ್ಯ ಗೇವರು ಅವರ ವೈಷ್ಣವ ಸಮ್ಮಂಧವಾದ ನರಸಿಂಹ ದೇವರಿಂದ ಕೆಳತರಗತಿಯವರೆಂದು ಮೇಲು ಕೀಳೆಂಬ ಭೇದ ಭಾವನೆಯನ್ನು ಕಲ್ಪಿಸಿದ್ದು ಇವರ ಮಾಧ್ವ ಮಠದ ಮತಭೇದವನ್ನು ತೋರಿಸಿಕೊಡುತ್ತದೆ.

ಈ O.S. 145/1913 ವ್ಯಾಜ್ಯದ ಜಜ್‌ಮೆಂಟನ್ನು ಪರಿಶೀಲಿಸುವಾಗ ಈ ಮಾಧ್ವ ಸ್ವಾಮಿಗಳು ಶ್ರೀ ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ತನಗೆ ದೇವಸ್ಥಾನಕ್ಕೆ ಸಂಬಂಧಪಟ್ಟ ಶೈವಾಗಮ ವಿಚಾರ ಏನೂ ತಿಳಿಯದಿದ್ದರೂ, ತಾನು ದೇವಸ್ಥಾನದ ವಿನಿಯೋಗಾದಿಗಳನ್ನು ನಡಿಸುವವನೆಂದು ನಟನೆ ಮಾಡುತ್ತಾ ದೇವಸ್ಥಾನದ ಹೆಚ್ಚಿನ ಕೆಲ್ಸಗಳಲ್ಲಿ ತಾನು ಅವುಗಳ ಮೇಲಾಧಿಕಾರಿಯೆಂದು ವರ್ತಿಸುತ್ತಾ ದೇವಸ್ಥಾನದಿಂದ ಅಕ್ಕಿ ಹಣ ವಗೈರೆ ಪಡೆಯುತ್ತಿದ್ದರೆಂದು ಸ್ಪಷ್ಟವಾಗುತ್ತದೆ.

ಈ ಸ್ವಾಮಿಗಳು ಮೊತ್ತಮೊದಲು ಬರೆ ಮೂರು ಉಪಾಧಿಗಳನ್ನು ಅಂದರೆ, ಅಷ್ಟೋತ್ತರ, ಮೃತ್ಯುಂಜಯ ಮತ್ತು ಮೂಲ ಮಂತ್ರ ಪಾರಾಯಣಗಳನ್ನು ಮಾಡುವವರಾಗಿ ನೇಮಕಪಟ್ಟು ಇವುಗಳಿಗಾಗಿ ಎರಡೂವರೆ ಹಾನೆ ಅಕ್ಕಿ ಸಂಬಳ ತೆಗೆದುಕೊಳ್ಳುತ್ತಿದ್ದರೆಂದ ತಿಳಿದು ಬರುತ್ತನೆ. ಶಿವನನ್ನೇ ದ್ವೇಷಿಸುವ ಈ ಸ್ವಾಮಿಗಳು ಈಶ್ವರನಿಗೆ ಸಮ್ಮಂಧಪಟ್ಟ ಮೃತ್ಯುಂಜಯ ಜಪ ವ ಸುಬ್ರಹ್ಮಣ್ಯ ಮೂಲ ಮಂತ್ರ ಅಷ್ಟೋತ್ತರಗಳನ್ನು ಈ ದೇವಸ್ಥಾನದಲ್ಲಿ ಪಠಿಸುತ್ತಾರೆ ಎಂಬುದು ವಿಚಿತ್ರವಾಗಿದೆ.

ಈ ವ್ಯಾಜ್ಯದಲ್ಲಿ ಇವರಿಗೆ ದೇವಸ್ಥಾನಕ್ಕೆ ಸಂಬಂಧಪಟ್ಟ ಮಠದ ಹಕ್ಕು ಬಾಧ್ಯತೆಗಳು ಬಿಟ್ಟುಹೋಗಿ ಮಠಕ್ಕೆ ಬರೆ ಸ್ವಲ್ಪ ಬಾಳುತ್ತಾರದ ಮತ್ತು ಉರ್ಲಿ ಅಕ್ಕಿ ಸಿಕ್ಕುವಂತೆ ಆಯಿತು. ಆಮೇಲೆ ಈ ಮಠದ ಸ್ವಾಮಿಗಳು ದೇವಸ್ಥಾನದ ಉಪಾಧಿ ನಡಿಸುವ ಉದ್ಯೋಗಸ್ಥರಾಗಿ

ಉಳಿದರು. ಹಾಗಿದ್ದರೂ 1958ರ ವರೆಗೂ ದೇವಸ್ಥಾನದ ಆಸ್ರಣ್ಣರುಗಳನ್ನು ಪೂಜಗೆ ಸ್ನಾನ ಮಾಡಿಸಲು ಪ್ರಮಾಣ ಮಾಡಿಸುವ ಕ್ರಮವನ್ನು ಇವರು ಬಂದೇ ಮಾಡಿಸುತ್ತಿದ್ದುದನ್ನು ಬಿಡಲಿಲ್ಲ.

1922ರಲ್ಲಿ ಪುನಃ ಮಠದ ವಿಶ್ವಜ್ಞ ತೀರ್ಥ ಸ್ವಾಮಿಗಳು O.S. 332 of 1922 ವ್ಯಾಜ್ಯ ಒಂದನ್ನು ಆಗಿನ ಆಡಳಿತದಾರರಾದ ಬಾಗಲೋಡಿ ಅನಂತರಾಮಯ್ಯನವರ ಮೇಲೆ ಹೂಡಿದರು. ಇದರಲ್ಲಿ ದೇವಸ್ಥಾನದ ಮಹಾದ್ವಾರದಿಂದ ಅವರ ನರಸಿಂಹ ದೇವರ ಉತ್ಸವವನ್ನು ಕಾಯಂ ಆಗಿ ದೇವಳದ ಅದಿಕಾರಿಗಳಲ್ಲಿ ಕೇಳದೆ ಹೊರ ಮತ್ತು ಒಳಗೆ ಕೊಂಡುಹೋಗುವ ಹಕ್ಕನ್ನು ಸ್ಥಾಪಿಸಲೂ ಮತ್ತು ಹೊಸತಾಗಿ ಮಠದವರು ಅವರ ನರಸಿಂಹ ದೇವರಿಗೆ ತಯಾರಿಸಿದ ರಥ ಒಂದನ್ನು ಸುಬ್ರಹ್ಮಣ್ಯ ದೇವರ ಅಂಗಣದಲ್ಲಿ ಎಳೆಯುವ ಹಕ್ಕನ್ನು ಸ್ಥಾಪಿಸಲೂ ಪ್ರಯತ್ನಿಸಿದರು. ಇದರಲ್ಲಿ ನರಸಿಂಹ ದೇವರು ಸುಬ್ರಹ್ಮಣ್ಯ ದೇವರ ಪರಿವಾರ ದೇವರಲ್ಲ, ಅದು ಅವರ ಸ್ವಂತ ಮಠದ ದೇವರು ಎಂಬುದನ್ನು ಒಪ್ಪಿದ್ದಾರೆ.

ಈ ವ್ಯಾಜ್ಯದಲ್ಲಿ ಗುಡಿಯು ಸುಬ್ರಹ್ಮಣ್ಯ ದೇವಸ್ಥಾನದ ಒಳಗೆ ಈಗ ಇರುವುದರಿಂದ ಅವರ ನರಸಿಂಹ ಜಯಂತಿ ಉತ್ಸವದ ಸಮಯ ಅವರು ದೇವಸ್ಥಾನದ ಅಧಿಕಾರಿಗಳಲ್ಲಿ ಕೇಳಿಕೊಂಡು ತಮ್ಮ ಉತ್ಸವವನ್ನು ನಡೆಸಬೇಕು. ದೇವಸ್ಥಾನವು ಅವರಿಗೆ ಒಪ್ಪಿಗೆ ಕೊಡಬೇಕು ಎಂದು ಇತ್ಯರ್ಥವಾಯಿತು. ಆದರೆ ದೇವಸ್ಥಾನದ ಒಳಗೆ ಇರುವ ನರಸಿಂಹ ಗುಡಿಯನ್ನು ಮತ್ತು ನಡೆಯನ್ನು ಕಟ್ಟಿದ್ದು ಮಠದವರು ಎಂದು ತೀರ್ಪು ಕೊಡಲಿಲ್ಲ.

ಈ ವ್ಯಾಜ್ಯದ ಜಜ್‌ಮೆಂಟಿನಿಂದ ಈ ಕೆಳಗಿನ ಇನ್ನೂ ಕೆಲವು ವಿಷಯಗಳು ಸ್ಪಷ್ಟವಾಗುತ್ತವೆ. ಅವುಗಳು ಹೀಗಿವೆ :

ಮಠಕ್ಕೆ ಪ್ರತ್ಯೇಕ ಧಾರಾಳ ಆಸ್ತಿ ಉತ್ಪತ್ತಿಗಳು ಇವೆ. ಆಡಳಿತೆಯು ದೇವಸ್ಥಾನದ ಆಡಳಿತೆಯಿಂದ ಬೇರಾಗಿದೆ. ದೇವಸ್ಥಾನದ ಕ್ರಮಗಳಿಗೂ ಮಠದ ಕ್ರಮಗಳಿಗೂ ತುಂಬಾ ವ್ಯತ್ಯಾಸವಿದೆ. ಸುಬ್ರಹ್ಮಣ್ಯ ದೇವಸ್ಥಾನದ ದೇವರು ಶಿವ ಅಂಶ, ಮಠದ ಗುಡಿಯಲ್ಲಿರುವ ನರಸಿಂಹ ದೇವರು ವಿಷ್ಣು ಅಂಶ ಪೂಜಾ ಕ್ರಮಗಳಲ್ಲಿ ಶ್ರೀ ಸುಬ್ರಹ್ಮಣ್ಯ ದೇವರಿಗೆ ಆಗಮೋಕ್ತ ಪೂಜೆ, ನರಸಿಂಹ ದೇವರಿಗೆ ತಂತ್ರಸಾರ ರೀತ್ಯಾ ಪೂಜೆ, ಶ್ರೀ ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ಅಶುದ್ಧ ಆದರೆ ಶುದ್ಧ ಮಾಡಲು ಸಂಪ್ರೋಕ್ಷಣಾ ಕ್ರಮ ನರಸಿಂಹ ಗುಡಿಯಲ್ಲಿ ಉದ್ವಾರ್ಚನೆ ಕ್ರಮ. ಮಠದಲ್ಲಿ ಸ್ವಾಮಿಯೇ ಪೂಜೆ ಮಾಡಬೇಕು. ದೇವಸ್ಥಾನದಲ್ಲಿ ಗೃಹಸ್ಥಾಶ್ರಮಿಗಳ ಪೂಜೆ. ಮಠದ ದೇವರನ್ನು ಎಲ್ಲಿಗೂ ಕೊಂಡುಹೋಗಬಹುದು. ಅದು ಚಲನ ಪ್ರತಿಷ್ಠೆ ಆದುದರಿಂದ ಶುದ್ಧ ಮಾಡುವಾಗ ಉದ್ವಾರ್ಚನ ಪದ್ಧತಿ ಪ್ರಕಾರ ದೇವರನ್ನು ಹೊಳೆಯ ವರೆಗೆ ಕೊಂಡುಹೋಗಿ ಹೊಳೆಯಲ್ಲಿ ತೊಳೆದುಕೊಂಡು ಬರುವುದು ಕ್ರಮ. ಆದರೆ ಸುಬ್ರಹ್ಮಣ್ಯ ದೇವರನ್ನು ಹೊರಗೆ ಕೊಂಡು ಹೋಗುವ ಪದ್ಧತಿ ಇಲ್ಲ.

ಹೀಗಿದ್ದರೂ ಈ ನರಸಿಂಹ ಗುಡಿಗೆ ದೇವಸ್ಥಾನದಿಂದ ಪರಿವಾರ ದೇವರಾದ ಉಮಾಮಹೇಶವರ ದೇವರಿಗೆ ಸಲ್ಲುವಂತೆ ಪರ್ವಕಾಲಗಳಲ್ಲಿ ಅವಲಕ್ಕಿ ತೆಂಗಿನಕಾಯಿ ಸಲ್ಲುವುದು ವಿಚಿತ್ರವಾಗಿದೆ. ಇದರಿಂದಾಗಿ ಈ ಗುಡಿಯು ಒಂದು ಕಾಲದಲ್ಲಿ ದೇವಸ್ಥಾನದ ಪರಿವಾರ ದೇವರಾದ ವಿನಾಯಕ ದೇವರ ಗುಡಿಯಾಗಿತ್ತೆಂದೂ, ಈ ದೇವಸ್ಥಾನವು ಈ ಮಾಧ್ವ ಮಠದ ಸ್ವಾಮಿಯರ ಆಡಳಿತೆಗೆ ಬಂದ ನಂತರವೇ ಈ ಮಠದ ನರಸಿಂಹ ದೇವರ ಸಂಪುಟವು ಈ

ಗುಡಿಯ ಒಳಗೆ ಪ್ರವೇಶಿಸಿ ಶ್ರೀ ವಿನಾಯಕ ದೇವರ ವಿಗ್ರಹವನ್ನು ಶ್ರೀ ಸುಬ್ರಹ್ಮಣ್ಯ ದೇವರ ಮೂಲಸ್ಥಾನದಲ್ಲಿ ಸೇರ್ಸಿದೆಂದು ಸ್ಪಷ್ಟಪಡಿಸಬಹುದಾಗಿದೆ.

ಈ ಮಠದ ಸ್ವಾಮಿಗಳು ಒಂದು ದೊಡ್ಡ ಸಂಸ್ಥಾನ ವಂದಿಕರೆಂದು ಹೇಳಿಕೊಳ್ಳುತ್ತಾರೆ. ಇವರ ಮಠಕ್ಕೆ ರೂಪ್ಯಾ 500 ತಸದೀಕು ಇದೆ. ಹೀಗಿರುವಾಗ ಇವರ ಮಠದ ನರಸಿಂಹ ದೇವರು ಒಂದು ಸಾರ್ವಜನಿಕ ಶಿವಸಂಬಂಧವಾದ ಸುಬ್ರಹ್ಮಣ್ಯ ದೇವಸ್ಥಾನದ ಒಳ ಅಂಗಣದ ಆಗ್ನೇಯ ಮೂಲೆಯ ಅತಿ ಇಕ್ಕಟ್ಟಾದ ಸ್ಥಳದಲ್ಲಿ ಹೇಗೆ ಬಂತು? ಎಂಬುದು ಪ್ರಶ್ನಾರ್ಹವಾಗಿದೆ. ಇವರ ದೇವರಿಗೆ ಸ್ವಂತವಾದ ಅಂಗಣಗಳಿಲ್ಲ, ಸ್ವಂತ ಪೌಳಿಗಳಲಿಲ್ಲ, ತನ್ನದೇ ಆದ ಆರಿಕಿಟ್ಟಿಲು ಇಲ್ಲ, ಇವರ ದೇವರು ಉತ್ಸವ ಕಾಲದಲ್ಲಿ ಶ್ರೀ ಸುಬ್ರಹ್ಮಣ್ಯ ದೇವರ ಗುಡಿಗೆ ಪ್ರದಕ್ಷಿಣೆ ಬರಬೇಕು. ರಥಾದಿ ಉತ್ಸವಗಳು ಸುಬ್ರಹ್ಮಣ್ಯ ದೇವಸ್ಥಾನದ ಅಂಗಣದಲ್ಲೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ಅಂಗಣದಲ್ಲೆ ಶ್ರೀ ಸುಬ್ರಹ್ಮಣ್ಯ ದೇವರಿಗೆ ಸುತ್ತು ಬಂದು ಶ್ರೀ ಸುಬ್ರಹ್ಮಣ್ಯ ದೇವರ ಬೀದಿಯಲ್ಲೇ ರಥೋತ್ಸವ ನಡೆಸಬೇಕು. ಪ್ರತಿ ಒಂದು ಕೆಲಸಗಳಿಗೂ ಶ್ರೀ ಸುಬ್ರಹ್ಮಣ್ಯ ದೇವಸ್ಥಾನವನ್ನೇ ಹೊಂದಿಕೊಂಡು ಇರಬೇಕು. ಇವರಿಗೆ ತಂತ್ರಸಾರ ಪ್ರಕಾರ ಉತ್ಸವ ಕಾಲದಲ್ಲಿ ಇವರ ಪರಿವಾರ ದೇವರಿಗೆ ತಂತ್ರ ತೂಗಬೇಕಾದರೆ ಇವರಿಗೆ ಸ್ವಂತ ಬಲಿಕಲ್ಲುಗಳಿಲ್ಲ, ಶ್ರೀ ಸುಬ್ರಹ್ಮಣ್ಯ ದೇವರ ಬಲಿಕಲ್ಲುಗಳಿಗೆ ಬಲಿತೂಗಬೇಕು. ಈ ಎಲ್ಲಾ ಕಾರಣಗಳಿಂದ ಈ ಮಠದ ದೇವರು ಒಂದು ಕಾಲದಲ್ಲೆ ಈ ಸುಬ್ರಹ್ಮಣ್ಯ ದೇವಳದ ಹೊರಗೆ ಸ್ವಲ್ಪ ದೂರದಲ್ಲಿ ಎಲ್ಲಿಯೋ ಸ್ವಂತ ಗುಡಿಯಲ್ಲಿ ಇದ್ದಿರಬೇಕೆಂದು ನಿಶ್ಚಯಿಸಬಹುದಾಗಿದೆ. ಸ್ವತಂತ್ರವಾಗಿದ್ದ ಶ್ರೀ ನರಸಿಂಹ ದೇವರನ್ನು ಈ ರೀತಿಯ ಇಕ್ಕಟ್ಟಿನ ಸ್ಥಳದಲ್ಲಿ ತಂದಿಟ್ಟು ದೇವಳಕ್ಕೆ ಬಂದ ಭಕ್ತಾದಿಗಳಿಂದ ತಮ್ಮ ಮಠಕ್ಕೂ ಉತ್ಪತ್ತಿ ಬರುವಂತೆ ಮಾಡಿಕೊಂಡಿರುವ ಈ ಸ್ವಾಮಿಗಳು ಶ್ರೀ ನರಸಿಂಹ ದೇವರ ಭಕ್ತರೆಂದು ಹೇಳಲೂ ಬರುವುದಿಲ್ಲ. ತಮ್ಮ ದೇವರನ್ನು ತಮ್ಮ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡು ಇರುವುದು ವ್ಯಕ್ತವಾಗುತ್ತದೆ. ಉಡುಪಿಯಲ್ಲಿ ವೇಣುಗೋಪಾಲಕೃಷ್ಣ ಮೂರ್ತಿಯನ್ನು ಕಡಗೋಲು ಕೃಷ್ಣನೆಂದು ಮಾಡಿಕೊಂಡು ಶ್ರೀ ಅನಂತೇಶ್ವರ ಚಂದ್ರಮೌಳೀಶ್ವರ ದೇವರುಗಳಿಂದ ಮೂಲಗೇಣಿಗೆ ಪಡಕೊಂಡ ಈಶಾನ್ಯ ಮೂಲೆಯನ್ನು ತಮ್ಮದನ್ನಾಗಿ ಮಾಡಿಕೊಂಡು ಈ ಇಕ್ಕಟ್ಟಾದ ಸ್ಥಳದಲ್ಲಿ ಇವರ ದೇವರನ್ನು ಇಟ್ಟು ಇತರರಿಗೆ ಸರಿಯಾಗಿ ದರ್ಶನ ಸಿಕ್ಕದಂತೆ ಪೂಜಿಸುತ್ತಾ ತಮ್ಮದೇ ಆದ ಕೃಷ್ಣ ಮಠಕ್ಕೆ ಉತ್ಸವಾದಿಗಳಲ್ಲಿ ಉತ್ಸವ ಬಲಿ ಬರದೆ ಶ್ರೀ ಅನಂತೇಶ್ವರ ಚಂದ್ರಮೌಳೀಶ್ವರ ದೇವರಿಗೆ ಪ್ರದಕ್ಷಿಣೆ ಬರುತ್ತಿರುವ ಸಾಮರಸ್ಯವೇ ಈ ಸುಬ್ರಹ್ಮಣ್ಯ ಕ್ಷೇತ್ರದಲ್ಲಿ ಈ ಮಾಧ್ವ ಸ್ವಾಮಿಗಳು ಕೂಡ ಮಾಡುತ್ತಿರುವುದಾಗಿದೆ. ಈ ಸ್ವಾಮಿಗಳವರು ಒಂದು ಕಡೆಯಿಂದ ತನ್ನ ದೇವರನ್ನೆ ಇಕ್ಕಟ್ಟಿನ ವಾದಗ್ರಸ್ತ ಸ್ಥಳದಲ್ಲಿಟ್ಟು ಹಿಂಸಿಸುವುದು ಇನ್ನೊಂದು ಕಡೆಯಿಂದ ಸಾರ್ವಜನಿಕ ದೇವಸ್ಥಾನದ ಪ್ರಧಾನ ದೇವರ ಸೇವೆಗೆ ಬಂದ ಭಕ್ತಾದಿಗಳಿಗೂ ದೇವಳದ ಆಡಳಿತೆದಾರರಿಗೂ ಹಿಂಸಿಸುತ್ತಿರುವುದು ಬಹಳ ವ್ಯಸನಾಸ್ಪದ ವಿಷಯವಾಗಿದೆ.

ಈ ಸುಬ್ರಹ್ಮಣ್ಯ ದೇವಸ್ಥಾನದ ತೆಂಕುಪೌಳಿಯ ಆಗ್ನೇಯ ಪಾರ್ಶ್ವದ ಮೂರನೇ ಒಂದು ಅಂಶವನ್ನು ಈ ಸ್ವಾಮಿಗಳು ಸಾಧಾರಣ ಒಂದು ಶತಮಾನದಿಂದ ಆಕ್ರಮಿಸಿಕೊಂಡುದ್ದರಿಂದ ಆ ಪೌಳಿಯು ಕಳೆದ 1955ರ ವರೆಗೆ ಇಬ್ಬರೊಳಗಿನ ಜಗಳದಿಂದ ರಿಪೇರಿ ಇಲ್ಲದೆ ಅತಿ ಜೀರ್ಣಾವಸ್ಥೆಯಲ್ಲಿತ್ತು. 1953ರಿಂದ ನೇಮಕವಾದ ಧರ್ಮದರ್ಶಿಗಳು ಈ ದುರವಸ್ಥೆಯನ್ನು

ಕಂಡು ಆಗ ಇದ್ದ ವೃದ್ಧ ಸ್ವಾಮಿಗಳಾದ ಶ್ರೀ ವಿಶ್ವಜ್ಞ ತೀರ್ಥರೊಂದಿಗೆ ರಾಜಿ ಮಧ್ಯಸ್ಥಿಕೆ ಮಾಡಿಕೊಂಡು ತೆಂಕು ಪೌಳಿಯನ್ನು ಸಹಸ್ರ ಸಂಖ್ಯೆ ಹಣ ವೆಚ್ಚ ಮಾಡಿ ಕಟ್ಟಿಸಿದರು. ಕಟ್ಟಿಸಿ ಆದೊಡನೆ ಅವರ ಮುಂಚಿನ ಆಕ್ರಮಿತ ದೇವಸ್ಥಾನದ ಅಂಶವನ್ನು ಅವರಿಗೆ ಬಿಟ್ಟುಕೊಟ್ಟರೂ ಪೌಳಿಯ ಮಾಳಿಗೆ ಕೂಡಾ ತನಗೆ ಸಿಕ್ಕಬೇಕೆಂದು ದೇವಳದ ತೆಂಕು ಆಗ್ನೇಯ ಮೂಲೆಯೇ ಅವರ ಹಕ್ಕಿನದೆಂದು ಸ್ವಾಮಿಗಳು ದೇವಳದ ಮೇಲೆ O.S. 198/1958 ವ್ಯಾಜ್ಯ ಒಂದನ್ನು ಪುತ್ತೂರು ಮುನ್ಸಿಫ್ ಕೋರ್ಟಿನಲ್ಲಿ ದಾಖ್ಲು ಮಾಡಿದರು. ಈ ವ್ಯಾಜ್ಯದಲ್ಲಿ ಮಾಧ್ವರಾದ ವೆಂಕಟ್ರಮಣ ಮಂಡೆಚ್ಚರು ತಾನು ದೇವಸ್ಥಾನದ ಟ್ರಸ್ಟಿಯಾಗಿದ್ದು ಜಾತಿ ವಾತ್ಸಲ್ಯದಿಂದ ಮಠದವರ ಸಹಾಯಕ್ಕೆ ನಿಂತು ದೇವಳಕ್ಕೆ ವಿರೋಧವಾಗಿ ಹೇಳಿಕೆಯನ್ನಿತ್ತದ್ದು ವ್ಯಸನಾಸ್ಪದವಾಗಿದೆ. ಆದರೆ O.S. 198/1958 ವ್ಯಾಜ್ಯವು ಠಸೆ ಫೀಸು ಕಮ್ಮಿ ಆದುದರಿಂದ ಮುನ್ಸಿಫ್ ಕೋರ್ಟಿನಲ್ಲಿ ತೆಗೆದುಹಾಕಲ್ಪಟ್ಟಿತು. ಆ ಮೇಲೆ ಪುನಃ ಸ್ವಾಮಿಗಳು ಮಂಗಳೂರು ಸಬ್‌ಕೋರ್ಟಿನಲ್ಲಿ O.S. 138/1959 ವ್ಯಾಜ್ಯ ಒಂದನ್ನು ಆದಕ್ಕಾಗಿಯೇ ದಾಖ್ಲು ಮಾಡಿದರು.

ಆ ವ್ಯಾಜ್ಯಕ್ಕೆ ಪ್ರತಿಯಾಗಿ ದೇವಸ್ಥಾನದ ರಕ್ಷಣೆಗೋಸ್ಕರ ಆಗಿನ ದೇವಸ್ಥಾನದ ಟ್ರಸ್ಟಿಗಳು ಮಾಧ್ವ ಸ್ವಾಮಿಗಳು ತಂದ ವ್ಯಾಜ್ಯವನ್ನು ಪ್ರತಿಭಟಿಸಿದ್ದಲ್ಲದೆ ಮಠದವರಿಂದ ಆಕ್ರಮಿಸಲ್ಪಟ್ಟ ದೇವಳದ ಆಗ್ನೇಯ ಮೂಲೆಯ ಗುಡಿಯು ಕೂಡಾ ದೇವಳದಲ್ಲಿ ಗೋಪ್ಯವಾಗಿರಿಸಲ್ಪಟ್ಟ ಸಿದ್ಧಿ ವಿನಾಯಕ ದೇವರ ಗುಡಿಯೆಂದೂ ಅದಕ್ಕೆ ಬೇಕಾದ ಪುರಾವೆಗಳನ್ನು ಕೊಟ್ಟು ಕಾನೂನು ಪ್ರಕಾರ ಎಂಡೋಮೆಂಟ್ ಕಮೀಶನರ ಒಪ್ಪಿಗೆ ಪಡೆದು O.S. No. 5 of 1961ನೇ ವ್ಯಾಜ್ಯ ಒಂದನ್ನು ಮಂಗಳೂರು ಸಬ್ ಕೋರ್ಟಿನಲ್ಲಿ ಹೂಡಿದರು. ಈ ವ್ಯಾಜ್ಯದಲ್ಲಿ ದೇವಸ್ಥಾನದ ಕಡೆಯಿಂದ ಹಳೆ ರಿಕಾರ್ಡುಗಳನ್ನು ಪರಿಶೀಲಿಸಿ ದಾವೆಯನ್ನು ತಯಾರುಪಡಿಸಿದವರು ಪ್ರಸಿದ್ಧ ವಕೀಲರಾದ ಶ್ರೀ ಕಾರ್ಕಳ ಸದಾಶಿವರಾಯರು. ಈ ವ್ಯಾಜ್ಯವನ್ನು ವ್ಯವಹರಿಸಿದವರು ಅವರ ಅಳಿಯ ಎಡ್ವೋಕೇಟ್ ಶ್ರೀ ಅಣ್ಣಪ್ಪ ಕಾಮತರು.

ಈ ಎರಡು ವ್ಯಾಜ್ಯಗಳು ಜತೆಯಲ್ಲಿ ತನ್ಕಿ ಮಾಡಲ್ಪಟ್ಟು ತಾ. 31-1-66ರಲ್ಲು ತೀರ್ಪು ಕೊಡಲ್ಪಟ್ಟಿತು. ಆದರೆ ಇದರಲ್ಲಿ ಜಡ್ಜರು ಮುಸಲ್ಮಾನರಾದುದರಿಂದ ಅವರಿಗೆ ಹಿಂದೂ ದೇವರುಗಳ ಅರಿವಿಲ್ಲದೆ ಮಠದ ಮುಖ್ಯ ವಾದಿ ವ ಪ್ರತಿವಾದಿಗಳಾದ ಸ್ವಾಮಿಗಳನ್ನಾಗಲೀ ಮಠದ ಏಜಂಟರನ್ನಾಗಲೀ ತನಿಖೆ ನಡೆಸದೆ ಪೌಳಿಯ ಅಂಶ ಮತ್ತು ಗುಡಿಯು ದೇವಸ್ಥಾನದ್ದಾದರೂ 12 ವರ್ಷ ಮೇಲ್ಪಟ್ಟು ಮಠದವರ ಸ್ವಾಧೀನಪಟ್ಟುದ್ದರಿಂದ ಮಠಕ್ಕೆ ಅವರ ಆಕ್ರಮಿತ ಸ್ಥಳಗಳನ್ನು ಬಿಟ್ಟುಕೊಡಬೇಕೆಂದೂ ಇದರಲ್ಲಿ ಆಕ್ರಮಿತ ನರಸಿಂಹ ಗುಡಿಯ ಎದುದರಲ್ಲಿದ್ದ ನರಸಿಂಹ ಅಂಬಲವೆಂದು ಮಠದವರಿಂದ ಹೇಳಲ್ಪಡುವ ಪೌಳಿಯ ಅಂಶವು ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ್ದೆಂದು ತೀರ್ಪನ್ನಿತ್ತರು. ಇದರಿಂದಾಗಿ ಸ್ವಾಮಿಗಳು ಆಕ್ರಮಿಸಿದ ನರಸಿಂಹ ಗುಡಿಗೆ ಒಳಕ್ಕೂ ಹೊರಕ್ಕೂ ಹೋಗುವ ದ್ವಾರವು ದೇವಸ್ಥಾನದ್ದಾದುದರಿಂದ ಸ್ವಾಮಿಗಳು ಬಿಕ್ಕಟ್ಟಿಗೆ ಬಿದ್ದು ಮಠ ಕೂಡಾ ವ್ಯಾಜ್ಯದಲ್ಲಿ ಸ್ವಲ್ಪ ಅಂಶ ಸೋತರೂ ತಾವು ಆ ಸೋಲನ್ನು ಮುಚ್ಚಿಕೊಂಡು ದೇವಸ್ಥಾನದ ಮೇಲೆ ವ್ಯಾಜ್ಯ ಮಾಡಿ ಗೆದ್ದು ಬಂದರೆಂದು ಸಾರ್ವಜನಿಕರಿಗೆ ತಮ್ಮ ಜಯವನ್ನು ಪತ್ರಿಕೆಯಲ್ಲಿ ಪ್ರಕಟಿಸಿದ್ದು ವಿಚಿತ್ರವಾಗಿದೆ.

ಹೀಗೆ ಮಠಕ್ಕೂ ದೇವಸ್ಥಾನಕ್ಕೂ ಅವಗುಣವಾದ ಈ ವ್ಯಾಜ್ಯಗಳಿಗೆ ಪುನಃ ನಂಬ್ರ

ಅಪೀಲ್‌ಗಳನ್ನು ದೇವಸ್ಥಾನದವರು ಮಠದವರ ಮೇಲೂ 30ನೇ ಅಪೀಲನ್ನು ಮಠದವರ ದೇವಸ್ಥಾನದವರ ಮೇಲೂ ನಮ್ಮ ಜಿಲ್ಲೆಯ ಸೆಶ್ಶನ್ ಜಡ್ಜರಲ್ಲಿ ದಾಖ್ಲು ಮಾಡಿದರು. ಈ ಮೂರು ಅಪೀಲ್‌ಗಳು ಈಗ ತನಿಕೆಗೆ ಬಾಕಿ ಉಳಿದಿವೆ. ಮೇಲೆ ವಿವರಿಸಿದ ಘಟನೆಗಳನ್ನು ಪರಿಶೀಲಿಸಿದು ಈ ಸುಬ್ರಹ್ಮಣ್ಯದ ಮಾಧ್ವ ಮಠದ ಸ್ವಾಮಿಗಳು ಈ ಸುಬ್ರಹ್ಮಣ್ಯಕ್ಕೆ ಸಾಧಾರಣ 1845ರಿಂದ ಇಂದಿನ ವರೆಗೆ ವ್ಯಾಜ್ಯಗಳ ಮೇಲೆ ವ್ಯಾಜ್ಯ ಮೊದಲಾದ ಅನೇಕ ವಿಧಗಳಿಂದ ಎಷ್ಟು ಹಿಂಸೆ ಕೊಟ್ಟಿರುತ್ತಾರೆ ಎಂಬುದು ವಾಚಕರಿಗೆ ವೇದ್ಯವಾಗಬಹುದು.

ಈ ವ್ಯಾಜ್ಯವನ್ನು ಹೂಡಿದ ವೃದ್ಧರಾದ ಶ್ರೀ ವಿಶ್ವಜ್ಞ ತೀರ್ಥರು ಅಪೀಲ್ ದಾಕ್ಲಾಗುವಾಗಲೇ ಮರಣಹೊಂದಿದರು. ಈಗ ಅವರ ತಮ್ಮ ವ ಶಿಷ್ಯ ಶ್ರೀ ವಿದ್ಯಾಸಿಂಧು ತೀರ್ಥರು ಮಠದ ಅಧಿಕಾರವನ್ನು ವಹಿಸಿಕೊಂಡರು. ಶ್ರೀ ವಿಶ್ವಜ್ಞ ತೀರ್ಥರ ಮರಣವಾದೊಡನೆ ಶ್ರೀ ವಿದ್ಯಾಸಿಂಧು ತೀರ್ಥರೂ ಕೂಡ ತಮ್ಮ ಆರೋಗ್ಯ ಸರಿ ಇಲ್ಲದೇ ಇದ್ದುದರಿಂದ ಮಠದ ಏಜಂಟರಾದ ತನ್ನ ಅಣ್ಣ ಪದ್ಮನಾಭ ಆಚಾರ್ಯರ ಎರಡನೆಯ ಮಗ ಗೋವಿಂದಾಚಾರ್ಯರ ಮಗನಿಗೆ ಸನ್ಯಾಸ ಕೊಟ್ಟು ತನ್ನ ಮಠದ ಕಿರಿಯ ಸ್ವಾಮಿಗಳನ್ನಾಗಿ ಮಾಡಿಕೊಂಡರು. ನೂತನ ಬಾಲ ಸ್ವಾಮಿಯವರ ಹೆಸರು ವಿದ್ಯಾಭೂಷಣ ತೀರ್ಥ ಸ್ವಾಮಿ ಎಂದು ತಿಳಿದು ಬರುತ್ತದೆ.

# ಸ್ಥಾನಚ್ಯುತಿಗೊಳಿಸಿ ಗೋಪ್ಯವಾಗಿ ಇರಿಸಲ್ಪಟ್ಟ ಸಿದ್ಧಿವಿನಾಯಕ ದೇವರು

ಈ ಕ್ಷೇತ್ರದಲ್ಲಿ ಶ್ರೀ ವಿನಾಯಕ ದೇವರ ವಿಗ್ರಹ ಒಂದು ಶ್ರೀ ಸುಬ್ರಹ್ಮಣ್ಯೇಶ್ವರನ ಗರ್ಭಗುಡಿಯ ಮೂಲಸ್ಥಾನದಲ್ಲಿ ಶ್ರೀ ಸುಬ್ರಹ್ಮಣ್ಯೇಶ್ವರನ ಎಡಬದಿಯಲ್ಲಿ ದೇವಳದ ಅರ್ಚಕ ಮತ್ತು ತಂತ್ರಿಗಳ ಹೊರತು ಇತರರ ಕಣ್ಣಿಗೆ ಬೀಳದಂತೆ ಗೋಪ್ಯವಾಗಿ ಇರಿಸಲ್ಪಟ್ಟಿದೆ. ಇದಕ್ಕೆ ಸಮ್ಮಂಧಪಟ್ಟ ಆಗ ರೂಪ್ಯಾ 500 ಬೆಲೆಬಾಳುವ ಪುತ್ಥಳಿ ಚಿನ್ನದ ಕವಚ, ಸಾಧಾರಣ 2500 ರೂಪ್ಯಾ ಬೆಲೆಬಾಳುವ ಬೆಳ್ಳಿ ಪಾಣಿಪಿಠ ಮತ್ತು ಒಂದು ಚಿನ್ನದ ಕಂಟಿ ಸರವು ಕೂಡಾ ದೇವಸ್ಥಾನದ ಟ್ರೆಜರಿಯಲ್ಲಿ ಉಪಯೋಗಿಸದೆ ಬಿದ್ದಿವೆ. 1880ನೇ ಇಸವಿ ವರೆಗೆ ದೇವಸ್ಥಾನದ ಊಳಿಗ ಪುಸ್ತಕದಲ್ಲಿ "ವಿನಾಯಕ ಅಮಾನತು" ಎಂಬ ಖರ್ಚು ಲೆಕ್ಕವು ಕಂಡುಬರುವುದರಿಂದಲೂ 1882ರಲ್ಲಿ "ವಿನಾಯಕ ಅಮಾನತು" ಎಂದು ಮಾತ್ರ ಬರೆದು ಖರ್ಚಿನ ಲೆಕ್ಕ ಕಾಣದೇ ಇರುವುದರಿಂದಲೂ 1882ರ ಆದಿಯಲ್ಲಿ ದೇವಳದ ಅರ್ಚಕ ಆಸ್ರಣ್ಣರೊಬ್ಬರೂ ಆಗಿನ ಆಡಳಿತೆದಾರರಾದ ಮಾಧ್ವ ಸ್ವಾಮಿಗಳಾದ ಶ್ರೀ ವಿದ್ಯಾಪೂರ್ಣರೂ ಮೈಲಿಗೆ ರೋಗದಿಂದ ನಿಧನಹೊಂದಿದ ಕಾರಣದಿಂದಲೂ ಸಾಧಾರಣ 1880-82ರ ಸಮಯ ಈ ವಿನಾಯಕ ವಿಗ್ರಹವು ತನ್ನ ಸ್ಥಾನವನ್ನು ಕಳಕೊಂಡಿರಬಹುದೆಂದು ಊಹಿಸಬೇಕಾಗುತ್ತದೆ.

ಅದೃಶ್ಯವಾದ ಶ್ರೀ ವಿನಾಯಕ ದೇವರ ಉಪದ್ರವ ಬಾರದಂತೆ ಜನತೆಯ ಕಣ್ಣನ್ನು ಕಟ್ಟಲು ಈ ಕೆಲವು ಕೃತ್ರಿಮ ತರದ ಪೂಜಾದಿಗಳು ದೇವಸ್ಥಾನದಲ್ಲಿ ನಡೆಯುತ್ತವೆ. ಉಪದ್ರವ ಕಂಡುಬಂದ ಎಡೆಗಳಲ್ಲಿ ವಿನಾಯಕ ಚತುರ್ಥಿ ದಿವಸ ಮಣ್ಣಿನ ಗಣಪತಿಯನ್ನು ಇಟ್ಟು ಪೂಜಿಸುವ ವ್ಯವಸ್ಥೆ ಮಾಡಲ್ಪಟ್ಟಿದೆ. ಈ ಗಣಪತಿಗಳಲ್ಲಿ ಮಡಿಗಣಪತಿ ಮತ್ತು ಬಣ್ಣದ ಗಣಪತಿಗಳೆಂದು ಎರಡು ವಿಧ. ಅರ್ಚಕರೆ ಸ್ನಾನಮಾಡಿ ಶುದ್ಧ ಮಣ್ಣಿನಿಂದ ಗಣಪತಿ ಮಾಡಿ ಪೂಜೆಗೆ ಇಡುವುದನ್ನು ಮಡಿ ಗಣಪತಿ ಎಂದೂ ಹೊರಗೆ ತಯಾರಾದ ಗಣಪತಿಯನ್ನು ತಂದು ಇಡುವ ಗಣಪತಿಗೆ ಬಣ್ಣದ ಗಣಪತಿ ಎಂದು ಹೆಸರು. ದೇವರ ಮಂಟಪದಲ್ಲಿ ಮಡಿ ಗಣಪತಿ ೧, ಚಾವಡಿಯಲ್ಲಿ ಮಡಿ ಗಣಪತಿ ೨, ಬಣ್ಣದ ಗಣಪತಿ ೧, ವಾಲಗದ ಗೋಪುರದಲ್ಲಿ ಬಣ್ಣದ ಗಣಪತಿ ೧, ಗೌರಿ ಮಂಟಪದಲ್ಲಿ ಬಣ್ಣದ ಗಣಪತಿ ೧, ಶೃಂಗೇರಿ ಮಠದಲ್ಲಿ ಮಡಿ ಗಣಪತಿ ೧, ಇದೇ ರೀತಿ ಮಾಧ್ವ ಮಠದ ಈಗಿನ ಸಂಪುಟ ನರಸಿಂಹ ಗುಡಿಯಲ್ಲಿಯಲ್ಲಿಯೂ ಮಡಿ ಗಣಪತಿ ೧, ಬಣ್ಣದ ಗಣಪತಿ ೧ ಈ ಪ್ರಕಾರ 9 ಗಣಪತಿ ಇಟ್ಟು ದೇವಸ್ಥಾನದಲ್ಲಿ 1008 ತೆಂಗಿನ ಕಾಯಿಗಳನ್ನು ಮಾಧ್ವ ಮಠದ ಗುಡಿಯಲ್ಲಿ 108 ತೆಂಗಿನ ಕಾಯಿಗಳನ್ನು ಒಡೆದು ಪಲ್ಲ ಹಾಕಿ ಪಲ್ಲಪೂಜೆ ಮಾಡುವ ಕ್ರಮವಿದೆ. ಮೊದಲು ದೇವಸ್ಥಾನದಲ್ಲಿ 108 ತೆಂಗಿನ ಕಾಯಿಗಳ ಗಣ ಹೋಮವೂ ಮಾಧ್ವ ಮಠದ ಗುಡಿಯಲ್ಲಿ 12 ತಂಗಿನ ಕಾಯಿಗಳ ಗಣ ಹೋಮವೂ ನಡೆಯುತ್ತಿತ್ತು. ಈಗ ಅದನ್ನು ನಿಲ್ಲಿಸಿ ದೇವಳದಲ್ಲಿ 12 ತೆಂಗಿನ ಕಾಯಿಗಳಿಗೂ, ಮಠದ ಗುಡಿಯಲ್ಲಿ 2 ಕಾಯಿಗಳಿಗೂ ಇಳಿಸಿರುತ್ತಾರೆ. ಅಲ್ಲದೆ ಮಾಧ್ವ ಮಠದ ಸ್ವಾಮಿಗಳು ಪ್ರತಿವರ್ಷ ಗಣೇಶ ಚತುರ್ಥಿ ದಿವಸ ತಮ್ಮ ಮಠದಲ್ಲಿ ಹೋಮ ಪೂಜೆಗಳನ್ನು ನಡೆಸುವುದಕ್ಕೆ ಮುಂಚಿತವಾಗಿ

ಶ್ರೀ ಸುಬ್ರಹ್ಮಣ್ಯನ ಗರ್ಭಗುಡಿಯಲ್ಲಿ ಗೋಪ್ಯವಾಗಿ ಇರಿಸಲ್ಪಟ್ಟ ಮಹಾಗಣಪತಿಯ ಸನ್ನಿಧಿಗೆ ಬಂದು ಮೊದಲು 2 ತೆಂಗಿನಕಾಯಿ ಮತ್ತು ಎರಡು ರೂಪ್ಯಾ ಪ್ರಾಯಶ್ಚಿತ್ತ ಇಡುತ್ತಿದ್ದರು. ಆಮೇಲೆ ಅದನ್ನು ಒಂದು ತೆಂಗಿನಕಾಯಿ ಮತ್ತು ನಾಲ್ಕಾಣೆಗೆ ಇಳಿಸಿರುತ್ತಾರೆ. ದೇವಳಕ್ಕೂ ಮಠಕ್ಕೂ ವ್ಯಾಜ್ಯ ಆರಂಭಿಸಿದ ಮೇಲೆ ಅದು ನಿಂತುಹೋಯಿತು. ಈ ಪ್ರಾಯಶ್ಚಿತ್ತದ ತೆಂಗಿನಕಾಯಿ ಮತ್ತು ಹಣವು ದೇವಳದ ತಂತ್ರಿಗಳಿಗೆ ಸಿಕ್ಕುತ್ತಿತ್ತು. ಆ ವಿಷಯವು ಅತಿ ಗುಟ್ಟಾದ ವಿಷಯ. ಇದರಿಂದ ದೇವಳದ ಮಾಧ್ವ ತಂತ್ರಿ ಮತ್ತು ಅರ್ಚಕರ ಸಹಕಾರದಿಂದಲೇ ಮುಂಚಿನ ಮಾಧ್ವ ಸ್ವಾಮಿಗಳು ವಿನಾಯಕ ವಿಗ್ರಹವನ್ನು ಸುಬ್ರಹ್ಮಣ್ಯನ ಗರ್ಭಗೃಹದಲ್ಲಿ ಗುಪ್ತವಾಗಿರಿಸಲ್ಪಟ್ಟಿರಬಹುದೆಂದು ತಿಳಿಯಬಹುದಾಗಿದೆ. ಈ ದೇವಳದಲ್ಲಿ ಮಹಾ ಗಣಪತಿಗೆ ಇಷ್ಟು ಬೆಲೆ ಬರುವ ಆಭರಣಗಳಿದ್ದು ಈ ರೀತಿಯ ಸೇವೆ ಸಲ್ಲುತ್ತಿರುವಾಗ ಆ ಅಡಗಿ ಕುಳಿತ ಗಣಪತಿ ವಿಗ್ರಹಕ್ಕೆ ತನ್ನದೇ ಆದ ಒಂದು ಗುಡಿ ಇದ್ದಿರಲೇಬೇಕು. ಅಲ್ಲದೆ ಶೈವ ಕ್ಷೇತ್ರವಾದ ಈ ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ಸುಬ್ರಹ್ಮಣ್ಯನಿಗೆ ಪರಿವಾರ ದೇವರಾಗಿ ಮಹಾ ಗಣಪತಿಯು ಸುಬ್ರಹ್ಮಣ್ಯನ ಬಲಭಾಗದಲ್ಲಿ ಅಂದರೆ ಆಗ್ನೇಯ ಮೂಲೆಯಲ್ಲಿ ಶಾಸ್ತ್ರೋಕ್ತವಾಗಿಯೂ ಇದ್ದಿರಲೇಬೇಕು. ಮಹಾಗಣಪತಿ ಇರಬೇಕಾದ ಗುಡಿಯಲ್ಲಿ ದೇವಳಕ್ಕೆ ಏನೂ ಸಂಬಂಧಪಡದ ಒಂದು ಮಾಧ್ವ ವೈಷ್ಣವಮಠದ ವೈಯ್ಯಕ್ತಿಕ ನರಸಿಂಹ ದೇವರು ಬಂದು ಆಕ್ರಮಿಸಿರುವುದು ವಿಚಿತ್ರವಾಗಿದೆ. ಶಿವಸಂಬಂಧವಾದ ದೇವಾಲಯಗಳಲ್ಲಿ ಗಣಪತಿ ಗುಡಿ ಇಲ್ಲದೇ ಇರುವುದು ಅಸಂಭವವು. ದೇವಸ್ಥಾನದಲ್ಲಿ ಮಣ್ಣಿನ ಗಣಪತಿ ಇಟ್ಟು ಪೂಜಿಸುವುದು ಕೃತ್ರಿಮ ಪದ್ಧತಿಯು. ಇದೊಂದು ಸೋಜಿಗವು. ಈ ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ಮಾತ್ರ ಕಂಡುಬರುವುದಾಗಿದೆ.

ಮಾಧ್ವ ಮಠದ ಸ್ವಾಮಿಗಳು ಆಕ್ರಮಿಸಲ್ಪಟ್ಟ ಗುಡಿಯಿಂದ ಹೊರಹೋಗಲು ಒಂದು ದ್ವಾರವನ್ನು ಗುಡಿಗೆ ಎದುರಾಗಿ ತೆಗೆದಿದ್ದರೂ, ಅವನ ನರಸಿಂಹ ಜಯಂತೀ ಉತ್ಸವ ಮತ್ತು ಉದ್ವಾರ್ಚನೆ ಸಮಯ ಅವರ ದೇವರು ಹೊರಹೋಗುವುದೂ ಒಳಕ್ಕೆ ಬರುವುದು ಶ್ರೀ ಸುಬ್ರಹ್ಮಣ್ಯ ದೇವರ ಮಹಾದ್ವಾರದ ಮೂಲಕವೇ ಆಗಿದೆ. ಅವರ ಗುಡಿಯ ಎದುರಿನ ದ್ವಾರದಿಂದಲ್ಲ. ಅವರ ಗುಡಿಯ ಎದುರು ಮೊದಲು ದ್ವಾರವಿದ್ದಿಲ್ಲವೆಂದು ವ್ಯಕ್ತವಾಗುತ್ತದೆ. ಅದೂ ಅಲ್ಲದೆ ಇನ್ನೊಂದು ನಿದರ್ಶನವೇನೆಂದರೆ ಮಠದವರು ಪೂಜೆ ಮಾಡಿ ಅವರ ಹೊರಬಾಗಿಲಿಗೆ ಬೀಗಹಾಕಿ ಹೋದೊಡನೆ ದೇವಳದ ಕಡೆಯವರು ಅವರ ಬಾಗಿಲಿಗೆ ಒಳಕೀಲು ಹಾಕಿ ಅವರು ಹಾಕಿದ ಬೀಗಕ್ಕೆ ಅರಗಿನ ಮುದ್ರೆ ಹಾಕುವ ಕ್ರಮವಿದೆ. ಹಾಗೆ ಮುದ್ರೆ ಹಾಕಿದ್ದನ್ನು ಮರುದಿವಸ ದೇವಸ್ಥಾನದ ಹೆಬ್ಬಾರನು ತೆಗೆಸಿಕೊಟ್ಟ ನಂತರವೆ ಮಠದವರು ತಮ್ಮ ಬೀಗ ತೆಗೆಯಬೇಕಾಗಿದೆ. ಮಠದವರು ಆಕ್ರಮಿಸಿದ ಗುಡಿಯೇ ದೇವಳದ ವಿನಾಯಕ ಗುಡಿಯಾಗಿತ್ತೆಂದು ದೃಢಪಡಿಸಲು ಇವರ ಆಕ್ರಮಣದ ನಂತರವೂ ಆ ಗುಡಿಗೆ ಚೌತಿ ಸಮಯ 5 ತೆಂಗಿನಕಾಯಿ ಹಬ್ಬದ ಸಮಯ 5 ಸೇರು ಅವಲಕ್ಕಿ ದೇವಳದಿಂದ ಸಲ್ಲುತ್ತದೆ ಅದನ್ನು ಮಠದವರು ಉಪಯೋಗಿಸುತ್ತಾರೆ. ಅದೂ ಅಲ್ಲದೆ ಮಠದವರು ವಿನಾಯಕ ಚೌತಿ ಸಂದರ್ಭದಲ್ಲಿ ಮೂರು ದಿವಸ ಅವರು ಆಕ್ರಮಿಸಿದ ಮಣ್ಣಿನ ಗುಡಿಯಲ್ಲಿ ಗಣಪತಿಯ ವಿಗ್ರಹವನ್ನು ಇಟ್ಟು ಪೂಜಿಸಿ ಕಡ ದಿನ ಪಾಲಕಿಯಲ್ಲಿ ಆ ಗಣಪತಿಯನ್ನು ಬೀದಿಯಲ್ಲಿ ಮೆರವಣಿಗೆ ಮಾಡಿ ಹೊಳೆಯಲ್ಲಿ ವಿಸರ್ಜನೆ ಮಾಡುವ ಕ್ರಮ ಇಟ್ಟುಕೊಂಡಿದ್ದಾರೆ. ಇದರಿಂದ

ಗೋಪ್ಯವಾಗಿರುವ ವಿಗ್ರಹವು ಆ ಗುಡಿಯಲ್ಲಿರುವಾಗ ವಿನಾಯಕ ಚೌತಿ ದಿವಸ ಆ ವಿನಾಯಕನಿಗೆ ಉತ್ಸವವು ವಿಜೃಂಭಣೆಯಲ್ಲಿ ನಡೆಯುತ್ತಿತ್ತೆಂದೂ ಅದನ್ನು ಮಠದವರೂ ನಡೆಸದಿದ್ದರೆ ಅವರಿಗೆ ಉಪದ್ರವಗಳುಂಟಾಗುತ್ತಿತ್ತೆಂಬುದನ್ನು ಊಹಿಸಬೇಕಾಗುತ್ತದೆ.

ಈ ಆಕ್ರಮಿತ ಗುಡಿಯಲ್ಲಿ ಶ್ರೀ ಮಹಾಗಣಪತಿ ವಿಗ್ರಹವು ಇರುತ್ತಿದ್ದ ಸಮಯದಲ್ಲೇ ಗುಡಿಯ ಹತ್ತಿರದ ಆಗ್ನೇಯ ಮೂಲೆಯ ಪೌಳಿಯಲ್ಲಿ ವಾಸಿಸುತ್ತಿದ್ದ ಸ್ವಾಮಿಗಳು ದೇವಳವನ್ನೇ ಆಕ್ರಮಿಸುವ ಹಂಚಿಕೆಯನ್ನು ಇಟ್ಟುಕೊಂಡು ಗಣಪತಿಯ ಪೂಜೆಯನ್ನು ತಾನೇ ಮಾಡುವುದಾಗಿ ಆಗಿನ ಆಡಳಿತೆದಾರರಾದ ಹೆಬ್ಬಾರರ ಮನ ಒಲಿಸಲು ಪ್ರಯತ್ನಪಟ್ಟರೆಂದು ತಿಳಿದು ಬರುತ್ತದೆ. ಮೊತ್ತಮೊದಲು ಹೆಬ್ಬಾರರು ಇದಕ್ಕೆ ಒಪ್ಪಿಗೆ ಕೊಡದೇ ಇದ್ದುದರಿಂದ ಸ್ವಾಮಿಗಳೂ ಅವರಿಗೆ ಅನೇಕ ಮಾನ ಮರ್ಯಾದೆಗಳೊಂದಿಗೆ ಸಾಲಿಗ್ರಾಮಗಳನ್ನು ಕೊಟ್ಟು ಮನ ಒಲಿಸಿ ಗಣಪತಿ ಗುಡಿಯ ಪೂಜೆಯನ್ನು ವಹಿಸಿಕೊಂಡರೆಂದು ತಿಳಿದುಬರುತ್ತದೆ. ಈ ಸಂದರ್ಭದಲ್ಲಿ ದೇವಳದ ಆಗಿನ ಅರ್ಚಕರಾದ ಸ್ಥಳದ ಸ್ಮಾರ್ತ ಶಿವ ಬ್ರಾಹ್ಮಣರಾದ ಮೊರೋಜ ನಾರಾಯಣ ಭಟ್ಟರು ಒಪ್ಪಿಗೆ ಕೊಡಲಿಲ್ಲ. ಇದರಿಂದಾಗಿ ಮಠದ ಸ್ವಾಮಿಗಳಿಗೂ ಮೋರೋಜರಿಗೂ ಗುಡಿಯ ಅರ್ಚಕತನಕ್ಕಾಗಿ ಬಹಳ ಹೊಡೆದಾಟಗಳು ಸಂಭವಿಸಿವೆ ಎಂದು ತಿಳಿದುಬರುತ್ತದೆ. ಸ್ವಾಮಿಗಳಿಗೆ ಮೊರೋಜರೊಡನೆ ಕೈ ಸಾಗದಿರಲು ಸ್ವಾಮಿಗಳು ಅರ್ಚಕರಾದ ಮೊರೋಜರ ಕುಟುಂಬಕ್ಕೆ ಕೃತ್ರಿಮ ಛಿದ್ರ ಮೊದಲಾದವುಗಳನ್ನು ಮಾಡಿಸಿ ಅನೇಕ ತರದ ಉಪದ್ರವಗಳನ್ನು ಕೊಟ್ಟು ಪೀಡಿಸಿ ಗುಡಿಯ ಅರ್ಚಕತನವನ್ನು ಸ್ವಾಧೀನಪಡಿಸಿಕೊಂಡರೆಂದು ತಿಳಿದುಬರುತ್ತದೆ. ಈ ಕೃತ್ರಿಮ ದೋಷವನ್ನು ಸರಿಪಡಿಸಲು ಸಾಧ್ಯವಾಗದೆ ಮೊರೋಜರು ತಮ್ಮ ದೇವಳದ ಅರ್ಚಕತನವನ್ನು ತನ್ನ ಬಳ್ಪ ಗ್ರಾಮದ ಕೃಷ್ಣ ಎಡಪ್ಪಡಿತ್ತಾಯರಿಗೆ ಬಿಟ್ಟುಹೋದರು. ಇದರಿಂದ ಅಷ್ಟರ ವರೆಗೆ ಇದ್ದ ಶ್ರೀ ಸುಬ್ರಹ್ಮಣ್ಯ ದೇವಳದ ಮತ್ತು ಗಣಪತಿ ಗುಡಿಯ ಅರ್ಚಕತನವು ಅಂದಿನಿಂದ ಮೊರೋಜರಿಗೆ ಬಿಟ್ಟುಹೋಯಿತು. ಇದು ಸಾಧಾರಣ 1820ನೇ ಇಸವಿ ನಡೆದಿರಬೇಕೆಂದು ತಿಳಿದು ಬರುತ್ತದೆ.

## ಇತರ ಪುಣ್ಯ ಸ್ಥಳಗಳು

**ದರ್ಪಣ ತೀರ್ಥ:** (ಕನ್ನಡಿ ಹೊಳೆ) ಶ್ರೀ ಸುಬ್ರಹ್ಮಣ್ಯೇಶ್ವರನ ಸನ್ನಿಧಿಯ ಎದುರಿನಲ್ಲಿ ಈಗ ದರ್ಪಣ ತೀರ್ಥವೆಂದು ಕರೆಯಲ್ಪಡುವ ಒಂದು ಚಿಕ್ಕ ಹೊಳೆಯು ಉತ್ತರದಿಂದ ದಕ್ಷಿಣಕ್ಕೆ ಹರಿಯುತ್ತಿದೆ. ಈ ಹೊಳೆಗೆ ಮೊದಲು ಭೀಮನ ಹೊಳೆಯೆಂದೂ ಹೆಸರಿತ್ತಂತೆ. ಇದಕ್ಕೆ ದರ್ಪಣ ತೀರ್ಥವೆಂಬ ಹೆಸರು ಈ ಸುಬ್ರಹ್ಮಣ್ಯೇಶ್ವರ ದೇವಸ್ಥಾನದ ಆಡಳಿತೆಯು ಇಲ್ಲಿಯ ಮಾಧ್ವ ಯತಿಗಳಿಗೆ ಬಂದ ನಂತರವೆ ಬಂದದ್ದೆಂದು ತಿಳಿಯಬೇಕಾಗಿದೆ. ಆ ವಿಷಯದಲ್ಲಿ ಅವರು ಕಟ್ಟಿದ ಕತೆಯು ಅತಿ ಪೂರ್ವಕಾಲದಲ್ಲಿ ದರ್ಪಣವೂ ಅಕ್ಷಯ ಪಾತ್ರವು ಕುಮಾರ ಪರ್ವತದಲ್ಲಿ ತಪಸ್ಸನ್ನು ಆಚರಿಸುತ್ತಿದ್ದ ವಿಷ್ಣುತೀರ್ಥರಿಂದ ಅನಿರುದ್ಧ ತೀರ್ಥರಿಗೆ ಈ ಹೊಳೆಯ ಮೂಲಕ ಕಳುಹಿಸಲ್ಪಟ್ಟದ್ದೆಂಬ ವಿಷಯ ನಂಬಲು ಅಸಾಧ್ಯವಾಗಿದೆ. ಈ ಹೊಳೆಯು ಹರಿದು ಬರುವುದೇ ಸಾಧಾರಣ 6 ಮೈಲು ದೂರ ಇರುವ ಗಿರಿ ಮಠವೆಂಬಲ್ಲಿ ಇರುವ ಒಂದು ಹಳ್ಳದಿಂದ, ಈ

ಹೊಳೆಗೂ ಕುಮಾರ ಪರ್ವತಕ್ಕೂ ಸಮ್ಮಂಧವಿಲ್ಲ. ಈ ಹೊಳೆಯು ದೇವಳದಿಂದ ಸಾಧಾರಣ ಒಂದೂವರೆ ಎರಡು ಮೈಲು ದೂರ ಇರುವ ಕುಮಾರಧಾರಾ ನದಿಗೆ ಮತ್ಸ್ಯತೀರ್ಥವೆಂಬಲ್ಲಿ ಸಂಗಮವಾಗುತ್ತದೆ. ಇದೇ ರೀತಿ ಈ ಮಾಧ್ವ ಸ್ವಾಮಿಗಳು ಶ್ರೀ ಸುಬ್ರಹ್ಮಣ್ಯ ಕ್ಷೇತ್ರವೇ ತಮ್ಮದನ್ನಾಗಿ ಮಾಡಿಕೊಳ್ಳಲು ಈ ರೀತಿಯ ಕಟ್ಟುಕತೆಯನ್ನು ಕಟ್ಟಿ ಆಗಿನ ಜನರ ಮನೋರಂಜನೆ ಮಾಡಿದ್ದು ಇದರಿಂದ ಸ್ಪಷ್ಟವಾಗುತ್ತದೆ.

**ಆದಿ ಸುಬ್ರಹ್ಮಣ್ಯ** : ಈ ಸ್ಥಳವು ಈ ದೇವಸ್ಥಾನದ ಈಶಾನ್ಯ ದಿಕ್ಕಿನಲ್ಲಿ ದರ್ಪಣ ತೀರ್ಥದ ಮೂಡು ದಡವಲ್ಲಿ ಸಾಧಾರಣ ಒಂದು ಫರ್ಲಾಂಗು ದೂರದಲ್ಲಿದೆ. ಅಲ್ಲಿಗೆ ಹೋಗಲು ದೇವಳದಿಂದ ಉತ್ತರ ದಿಕ್ಕಿನ ಸಣ್ಣ ರಸ್ತೆಯಿಂದ ಸ್ವಲ್ಪ ಹೋಗಿ ಮೂಡುಗಡೆಗೆ ತಿರುಗಿ ದರ್ಪಣ ತೀರ್ಥವನ್ನು ದಾಟಿ ಹೋಗಬೇಕು. ಈ ರಸ್ತೆಯು ಹೆಬ್ಬಾರ ತೋಟ ಮತ್ತು ಮೊರೋಜ ಹಿತ್ಲು ಎಂಬ ಎರಡು ಸ್ಥಳಗಳ ನಡುವೆ ಹಾದುಹೋಗಬೇಕಾಗುತ್ತದೆ. ಈ ಆದಿ ಸುಬ್ರಹ್ಮಣ್ಯದಲ್ಲಿ ಇಲ್ಲಿ ಒಂದು ಸಣ್ಣ ಗುಡಿಯು ಮೂಡು ಮುಖ ಮಾಡಿ ಇದೆ. ಇದರ ಬಳಗೆ ದೊಡ್ಡದೊಂದು ಹುತ್ತ (ವಲ್ಮೀಕ)ವಿದೆ. ಇಲ್ಲಿ ಈ ಹುತ್ತಕ್ಕೆ ಪೂಜೆ ಮಾಡುತ್ತಾರೆ. ಇಲ್ಲಿಗೆಯೇ ಆದಿ ಸುಬ್ರಹ್ಮಣ್ಯವೆಂದು ಹೇಳುವರು. ಈ ಸುಬ್ರಹ್ಮಣ್ಯಕ್ಕೆ ಯಾತ್ರೆಗೆ ಬಂದವರೂ ಇಲ್ಲಿಯ ಗುಡಿಯೊಳಗಿನ ಹುತ್ತದ ದರ್ಶನ ಮಾಡದೇ ಹೋದರೆ ಯಾತ್ರಾ ಫಲವಿಲ್ಲವೆಂದು ಪ್ರತೀತಿ. ಕಾರಣ ವಾಸುಕಿಯು ಗರುಡನ ಭಯಕ್ಕೆ ಪ್ರಥಮವಾಗಿ ಈ ಸ್ಥಳದಲ್ಲಿ ಅಡಗಿ ಕೂತನೆಂದು ಐತಿಹ್ಯ. ಆಮೇಲೆ ಶ್ರೀ ಷಣ್ಮುಖ ಸ್ವಾಮಿಯ ಅಭಯವು ಸಿಕ್ಕಿದ ನಂತರ ತಾರಕಾಸುರ ಸಂಹಾರ ಪ್ರಾಯಶ್ಚಿತ್ತಕ್ಕಾಗಿ ಶ್ರೀ ಷಣ್ಮುಖನಿಂದ ಸ್ಥಾಪಿಸಲ್ಪಟ್ಟ ಮೂರು ಲಿಂಗಗಳ ಪೈಕಿ ಮೊದಲನೇದಾದ ಈಗ ಇರುವ ಶ್ರೀ ಸುಬ್ರಹ್ಮಣ್ಯೇಶ್ವರನ ಮೂಲ ಸ್ಥಳದಲ್ಲಿ ಈ ಮೊದಲು ಇದ್ದ ಲಿಂಗದಲ್ಲಿ ವಾಸಿಸುತ್ತಿದ್ದನೆಂದೂ, ಇದರಿಂದ ಆ ಲಿಂಗಕ್ಕೆ ವಾಸುಕಿ ಲಿಂಗವೆಂದೂ (ಅಹಿಪೇಶ್ವರ ಲಿಂಗ) ಹೆಸರಿತ್ತು ಎಂದು ಪ್ರತೀತಿ. ಈ ಲಿಂಗವು ಶ್ರೀ ಸುಬ್ರಹ್ಮಣ್ಯೇಶ್ವರ ದೇವಳದ ಆಡಳಿತೆಯು ವೈಷ್ಣವರಾದ ಮಾಧ್ವ ಶಿವಳ್ಳಿ ಸ್ವಾಮಿಯರ ಆಡಳಿತೆ ನಂತರ ಕಾಣೆಯಾಗಿ ಅದರ ಬದಲಿಗೆ ಅಲ್ಲಿ ವಾಸುಕಿಯ ಚಿನ್ನದ ನಾಗರ ಹೆಡೆಯು ಮಾತ್ರ ಅಲ್ಲಿ ಕಾಣಬಹುದಾಗಿದೆ.

1958ರ ನಂತರ ಈ ಆದಿ ಸುಬ್ರಹ್ಮಣ್ಯದಲ್ಲಿ ಆಗಿನ ಟ್ರಸ್ಟಿಗಳಲ್ಲಿ ಶ್ರೀ ಬೆಳ್ಳಾರೆ ನಾರಾಯಣ ಶೇಕ ಮತ್ತು ಶ್ರೀ ಸುಬ್ರಹ್ಮಣ್ಯ ಗೌಡರೆಂಬ ಇಬ್ಬರು ಧರ್ಮದರ್ಶಿಗಳ ದಕ್ಷತೆಯಿಂದ ಗುಡಿಯು ಜೀರ್ಣೋದ್ಧಾರ ಮಾಡಲ್ಪಟ್ಟು ಅದಕ್ಕೆ ಪಾಗರ ಮತ್ತು ಭಕ್ತಾದಿಗಳಿಗೆ ಅಲ್ಲಿಗೆ ಸರಾಗವಾಗಿ ಹೋಗಲು ಅನುಕೂಲವಾಗುವಂತೆ ಕನ್ನಡಿ ಹೊಳೆಗೆ ಒಂದು ಸಂಕ ಕೂಡಾ ಹಾಕಲ್ಪಟ್ಟದ್ದು ಸ್ತುತ್ಯಾರ್ಹವಾಗಿದೆ.

ಈ ದೇವಳದಲ್ಲಿ ನಿತ್ಯವೂ 2 ಸಲ ಪೂಜೆ ವಿನಿಯೋಗಾದಿಗಳು ದೇವಸ್ಥಾನದ ಕಡೆಯಿಂದ ನಡೆಯುತ್ತದೆ. ಇದು ಶೈವ ಸಂಬಂಧವಾದ ಗುಡಿಯಾಗಿದ್ದರೂ ಅರ್ಚಕರು ಮಾಧ್ವ ವೈಷ್ಣವರು. ಬಿಲ್ವ, ಭಸ್ಮಾದಿಗಳ ಉಪಯೋಗವಿಲ್ಲ. ಇದು ಕೂಡಾ 1845ರ ನಂತರ ಮಾಧ್ವ ಸ್ವಾಮಿಗಳ ಕಾಲದಲ್ಲಿ ಈ ರೀತಿಯ ಅರ್ಚಕತನವು ಬಂದದ್ದಾಗಿದೆ.

**ಅಗ್ರಹಾರ ಸೋಮನಥ ದೇವಸ್ಥಾನ ವ, ಪಂಚಮಿಾ ತೀರ್ಥ**: ಈ ಅಗ್ರಹಾರ ಸೋಮನಾಥ ದೇವಸ್ಥಾನವು ಶ್ರೀ ಸುಬ್ರಹ್ಮಣ್ಯ ದೇವಸ್ಥಾನದಿಂದ ಸಾಧಾರಣ ಒಂದು ಮೈಲು

ದೂರದಲ್ಲಿ ಕುಮಾರಧಾರೆಗೆ ಹೋಗುವ ರಸ್ತೆಯಿಂದ ಬಲಕ್ಕೆ ಕುಮಾರಧಾರಾ ನದೀ ದಡದಲ್ಲಿದೆ. ಇಲ್ಲಿ ಹೊಳೆಯು ಪಶ್ಚಿಮ ಮುಖವಾಗಿ ಹರಿಯುತ್ತದೆ. ಇಲ್ಲಿಗೆ ಪಂಚಮಿಾ ತೀರ್ಥವೆಂಬ ಹೆಸರು ಈ ದೇವಳದ ಆಡಳಿತೆಯು ಇಲ್ಲಿಯ ಸುಬ್ರಹ್ಮಣ್ಯದ ಮಾಧ್ವ ಮಠದ ಯತಿಗಳ ಸ್ವಾಧೀನಕ್ಕೆ ಬಂದ ನಂತರ ಬಂದದ್ದಾಗಿದೆ. ಇದು ಶಿವಾಲಯವಾದುದರಿಂದ ಇದಕ್ಕೂ ಈ ಮಾಧ್ವ ಸ್ವಾಮಿಗಳಿಗೂ ಈ ಮೊದಲು ಯಾವ ರೀತಿಯ ಸಂಬಂಧವು ಇರಲಿಲ್ಲ. ವೈಷ್ಣವರಾದ ಸ್ವಾಮಿಗಳಿಗೆ ಶಿವಲಿಂಗ ಇರುವ ಈ ದೇವಳದ ಸಂಬಂಧ ಬರಲು ಕಾರಣವೂ ಇಲ್ಲ. ಅವರಿಗೆ ಸುಬ್ರಹ್ಮಣ್ಯದ ಆಡಳಿತೆ ಬಂದ ನಂತರ ಇದನ್ನು ತಮ್ಮದನ್ನಾಗಿ ಮಾಡಿಕೊಂಡದ್ದಾಗಿದೆ. ಇಲ್ಲಿ 30ರ ಮೇಲ್ಪಟ್ಟು ಸಮಾಧಿಗಳು ಇವೆ. ಅಗ್ರಹಾರವೆಂಬ ಹೆಸರು ಇದ್ದುದರಿಂದ ಸ್ಮಾರ್ತ ಬ್ರಾಹ್ಮಣರ ಮನೆಗಳು ಇಲ್ಲಿ ಇದ್ದಿರಬೇಕು. ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ಆಡಳಿತೆಯು ಮಾಧ್ವ ಸ್ವಾಮಿಗಳ ಆಡಳಿತೆಗೆ ಬಂದ ನಂತರ ಈ ಸ್ಥಳದ ಎಲ್ಲಾ ಸಮಾದಿಗಳು ಆ ಮಠದ ಯತಿಗಳ ವೃಂದಾವನಗಳೆಂದು ಮಾರ್ಪಾಟಾಗಿರಬೇಕೆಂದು ತಿಳಿಯಬಹುದಾಗಿದೆ. ಈಗಿನ ಮಾಧ್ವ ಯತಿಗಳ ಮುಂಚೆ ಬರೇ 4-5 ಜನರು ಮಾತ್ರ ಇದ್ದುದು ದೇವಳದ ದಾಕ್ಲೆಗಳಿಂದ ತಿಳಿದು ಬರುತ್ತದೆ. ಈ ಮೇಲಿನ ಸ್ವಾಮಿಗಳ ಪೈಕಿ ವ್ಯಾಸತೀರ್ಥರ ಸಮಾಧಿಯು ಉಡುಪಿಯ ಹತ್ತಿರ ಇರುವ ಮಲ್ಪೆ ಎಂಬಲ್ಲಿ ಇದೆಯೆಂದು ತಿಳಿದುಬರುತ್ತದೆ. ಮೊದಲಿನ ಸ್ವಾಮಿಗಳಿಗೆ ಸಂಬಂಧಪಟ್ಟ 2 ಯಾ 3 ಸಮಾಧಿಗಳು ಇವರ ವಸತಿ ಮಠಕ್ಕೆ ತಾಗಿ ಹತ್ತಿರವೇ ಇವೆ. ಅಲ್ಲದೆ ಧರ್ಮುಂಶಿ ಚಿಟ್ಟೆ ಪ್ರಕಾರ ಈ ಮಠದ ಮೂಲಿ ಸ್ಥಳವು ಇಂಜಾಡಿಯಲ್ಲಿ ಗೇಣಿ ವರ್ಗವಂಬ ಹೆಸರಿನಿಂದ ವ್ಯಾಸತೀರ್ಥರ ನಂತರ ಬಂದದ್ದಾಗಿ ಕಾಣುತ್ತದೆ. ಇಂಜಾಡಿಗೂ ಅಗ್ರಹಾರ ಸೋಮನಾಥ ದೇವಸ್ಥಾನಕ್ಕೂ ಸಾಧಾರಣ ಒಂದೂವರೆ ಮೈಲು ಅಂತರವಿದೆ. ಈ ಎಲ್ಲಾ ಕಾರಣಗಳಿಂದ ಈ ಸ್ಥಳಕ್ಕೆ ಮಾಧ್ವ ವೈಷ್ಣವ ಯತಿಗಳ ಸಮಾಧಿಗಳು ಇರಲು ಕಾರಣವೇ ಇಲ್ಲ. ವ್ಯಾಸತೀರ್ಥರ ಕಾಲದಲ್ಲಿ ನಡೆದ O.S. 27/1886 ವ್ಯಾಜ್ಯದಲ್ಲಿ ಶ್ರೀ ಸುಬ್ರಹ್ಮಣ್ಯ ದೇವಸ್ಥಾನವು ಅವರ ಮಠದ ಶಿಲಶಿಲಾ ಹಕ್ಕಿನದೆಂದು ಮಾಡಲು ಆಗ ಅವರು ಹಾಜರುಪಡಿಸಿದ ಪೋರ್ಜರಿ ತಾಮ್ರ ಶಾಸನದಲ್ಲಿ ವಿವರಿಸಿದ ವಿಷಯಗಳು ಸತ್ಯವೆಂದು ರುಜುಪಡಿಸಲು ಇಲ್ಲಿರುವ ಸಮಾಧಿಗಳನ್ನು ತಮ್ಮ ಮುಂಚಿನ ಸ್ವಾಮಿಗಳ ವೃಂದಾವನಗಳೆಂದು ಕತೆ ಕಲ್ಪಿಸಿ ಅದಕ್ಕೆ ಹತ್ತಿರವಿರುವ ಸೋಮನಾಥ ದೇವಸ್ಥಾನವನ್ನು ತಮ್ಮದನ್ನಾಗಿ ಮಾಡಿ ಆ ಸ್ಥಳಕ್ಕೆ ಪಂಚಮಿಾ ತೀರ್ಥವೆಂದು ಹೆಸರಿಟ್ಟು ಜನರನ್ನು ಬೆರಗುಗೊಳಿಸಿದ್ದಾಗಿ ತಿಳಿಯಬೇಕಾಗುತ್ತದೆ.

ಸೋಮನಾಥ ಅಗ್ರಹಾರಕ್ಕೆ ಶೃಂಗೇರಿ ಅಗ್ರಹಾರವೆಂಬ ಹೆಸರಿತ್ತೆಂದೂ ಇಲ್ಲಿ ಶ್ರೀ ಶೃಂಗೇರಿ ಮಠದ ಶಿಷ್ಯರಾದ ಪದ್ಮತೀರ್ಥರೆಂಬ ಯತಿಗಳೊಬ್ಬರು ಇದ್ದರೆಂದೂ, ಇವರ ಪರಂಪರೆಯು ಸಾಧಾರಣ ಆದಿಶಂಕರರು ಈ ಕ್ಷೇತ್ರಕ್ಕೆ ಬಂದನಂತರ ಆರಂಭವಾಯಿತೆಂದೂ, ಈ ಯತಿಗಳು ಮೋಸದಿಂದ ಕೊಲ್ಲಲ್ಪಟ್ಟವರೆಂದೂ ಇಲ್ಲಿರುವ ಸಮಾಧಿಗಳೆಲ್ಲ ಇವರಿಗೆ ಸಂಬಂಧಪಟ್ಟವು ಗಳೆಂದೂ ತಿಳಿಯಬಹುದಾಗಿದೆ. ಇದಕ್ಕೆ ದೃಷ್ಟಾಂತವಾಗಿ ಇಲ್ಲಿಯ ಕುಮಾರಧಾರಾ ನದಿಯ ಎದುರು ದಡದಲ್ಲಿರುವ ವನಕ್ಕೆ ಈಗಲೂ ಅನೇಕರು ಶೃಂಗೇರಿ ಮಕ್ಕಿ ಎಂದು ಕರೆಯುವುದು ವಾಡಿಕೆಯಲ್ಲಿದೆ. ಅಲ್ಲದೆ ಈ ವನದಲ್ಲಿರುವ ಒಂದು ಸಣ್ಣ ಸಮಾಧಿಯ ಮೇಲೆ ಒಂದು ವಿಗ್ರಹವಿಟ್ಟು ಪೂಜಿಸುತಿರುವುದು ಕಾಣಬಹುದು. ಆ ಸಮಾಧಿಯೇ ಕೊಲ್ಲಲ್ಪಟ್ಟ ಪದ್ಮತೀರ್ಥ-

ಯತಿಗಳ ಉಪದ್ರವ ಶಾಂತಿಗಾಗಿ ಅವರ ವಿಗ್ರಹ ಒಂದನ್ನು ಇಟ್ಟು ಪೂಜಿಸಲ್ಪಡುವುದು ಎಂದು ತಿಳಿದು ಬರುತ್ತದೆ.

ಸೋಮನಾಥ ಅಗ್ರಹಾರವು ಶೃಂಗೇರಿಗೆ ಸಂಬಂಧಪಟ್ಟ ಸ್ಮಾರ್ತ ಶಿವ ಬ್ರಾಹ್ಮಣರ ಎಂಬುದಕ್ಕೆ ಇನ್ನೂ ಕೆಲವು ಸನ್ನಿವೇಶಗಳು ಮತ್ತು ಆಧಾರಗಳಿಂದ ತಿಳಿಯಬಹುದಾಗಿದೆ. ಸಾಧಾರಣ 1845ರ ವರೆಗೆ ಅಂದರೆ ದೇವಳದ ಆಡಳಿತವು ಮಾಧ್ವ ಸ್ವಾಮಿಗಳ ಆಡಳಿತೆಗೆ ಬರುವ ಮುಂಚೆ ಶೃಂಗೇರಿ ಕಡೆಯ ಅನೇಕ ಬ್ರಾಹ್ಮಣರು ಶ್ರೀ ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ಉಪಾಧಿವಂತರಾಗಿ ದೇವರ ಸೇವೆಯನ್ನು ನಡೆಸುತ್ತಿದ್ದರು ಎಂದು ಅಲ್ಲಿಯ ಶೃಂಗೇರಿ ಶಾಖಾ ಮಠದಲ್ಲಿ ಆಗ ಅಚ್ಚಣ್ಣ ಶಾಸ್ತ್ರಿಯವರಿಂದ ಆಗಿನ ಮಾಧ್ವ ಮಠದ ಸ್ವಾಮಿಗಳು ಪ್ರಥಮ ಅವರು ದೇವಸ್ಥಾನದಲ್ಲಿ ನಡೆಸುತ್ತಿದ್ದ ಉಪಾಧಿಗಳನ್ನು ರೂಪ್ಯಾ 200ಕ್ಕೆ ಅಡವಿಗೆ ಪಡಕೊಂಡದ್ದೂ ಈ ಉಪಾಧಿಗಳು ಈಗಲೂ ಈ ಮಾಧ್ವ ಮಠಕ್ಕೆ ಇರುವುದರಿಂದ ವ್ಯಕ್ತವಾಗುತ್ತದೆ.

**ಕುಮಾರಧಾರಾ ನದಿ ಮತ್ತು ಮತ್ಸ್ಯತೀರ್ಥ :** ಕುಮಾರಧಾರಾ ನದಿಯು ಪಶ್ಚಿಮ ಘಟ್ಟಗಳಲ್ಲಿ ಒಂದಾದ ಕುಮಾರ ಪರ್ವತದಲ್ಲಿ ಹುಟ್ಟಿ ಸಾಧಾರಣ 32 ಮೈಲು ಪಶ್ಚಿಮದಲ್ಲಿ ಗಯಾಪದ ಕ್ಷೇತ್ರ ವ ಉಪ್ಪಿನಂಗಡಿ ಎಂಬಲ್ಲಿ ನೇತ್ರಾವತಿ ನದಿಯೊಂದಿಗೆ ಸಂಗಮವಾಗಿ ಆ ಮೇಲೆ ನೇತ್ರಾವತಿ ಎಂಬ ಹೆಸರಿನಿಂದಲೇ ಮಂಗಳೂರಲ್ಲಿ ಅರಬಿ ಸಮುದ್ರಕ್ಕೆ ಸೇರುತ್ತದೆ. ಈ ನದಿಗೆ ಒಂದು ಕಾಲದಲ್ಲಿ ಮಹೀ ನದಿಯೆಂದು ಹೆಸರಿತ್ತು. ಶ್ರೀ ಸುಬ್ರಹ್ಮಣ್ಯೇಶ್ವರನಿಗೆ ತಾರಕಾಸುರ ಸಂಹಾರಕ್ಕಾಗಿ ಸೇನಾಧಿಪತಿ ಪಟ್ಟ ಕಟ್ಟುವಾಗ ಈ ನದಿಯ ನೀರಿನಿಂದ ಧಾರೆ ಎರೆದುದರಿಂದ ಆ ನೀರು ಇದರೊಂದಿಗೆ ಸೇರಿ ಹರಿದುದರಿಂದ ಇದಕ್ಕೆ ಕುಮಾರಧಾರಾ ನದಿ ಎಂಬ ಹೆಸರು ಬಂತೆಂದು ಪೌರಾಣಿಕ ಐತಿಹ್ಯವಾಗಿದೆ. ದೇವಸ್ಥಾನದಿಂದ ಸಾಧಾರಣ ಒಂದೂವರೆ ಮೈಲು ದೂರದಲ್ಲಿ ಈ ನದಿಗೆ ದೇವಸ್ಥಾನದ ಎದುರಿನಲ್ಲಿ ಹರಿಯುತ್ತಿರುವ ದರ್ಪಣತೀರ್ಥವೆಂಬ ಹೊಳೆಯು ಸೇರುವಲ್ಲಿಗೆ ಮತ್ಸ್ಯತೀರ್ಥವೆಂದು ಕರೆಯುತ್ತಾರೆ. ಇಲ್ಲಿ ಸ್ನಾನಘಟ್ಟವು ಇದೆ. ಈ ಒಂದು ಭಾಗದಲ್ಲಿ ಕುಮಾರಧಾರೆಯಲ್ಲಿ ತುಂಬಾ ಮೀನುಗಳು ಗುಂಪು ಗುಂಪಾಗಿ ಇವೆ. ಇವುಗಳು ಸ್ನಾನಕ್ಕೆ ಇಳಿಯುವವನ ಮೈಯನ್ನು ಶರೀರದಲ್ಲಿರುವ ಹುಣ್ಣುಗಳ ವ ಕೊಳೆಯನ್ನು ಸ್ವಚ್ಛಪಡಿಸುತ್ತವೆ. ಈ ಮೀನುಗಳು ಇಲ್ಲಿ ಗುಂಪು ಗುಂಪಾಗಿ ಇರುವುದರಿಂದಲೇ ಇಲ್ಲಿಗೆ ಮತ್ಸ್ಯತೀರ್ಥವೆಂಬ ಹೆಸರು ಬಂದುದಾಗಿದೆ. ಈ ಕುಮಾರಧಾರಾ ನದಿಯು ಅಭ್ರಕ ಮಿಶ್ರಿತ ಮಣ್ಣಿನಲ್ಲಿ ಹರಿದುಬರುವುದರಿಂದ ಇದರಲ್ಲಿ ಸ್ನಾನವು ಗಂಗಾ ನದಿ ಸ್ನಾನದಂತೆ ಆರೋಗ್ಯದಾಯಕವೂ ಪುಣ್ಯಪ್ರದವೂ ಆಗಿದೆ. ಇದರ ಮಣ್ಣಿನಲ್ಲಿ ಮೈ ತೊಳೆಯುತ್ತ ಇದರಲ್ಲಿ ನಿತ್ಯವೂ ಸ್ನಾನ ಮಾಡಿಕೊಂಡು ಶ್ರೀ ಸುಬ್ರಹ್ಮಣ್ಯೇಶ್ವರನ ಮೂಲ ಮೃತ್ತಿಕೆಯನ್ನು ಸೇವಿಸುತ್ತಾ ಮೂರು ವರ್ಷ ಕಾಲ ಇಲ್ಲಿ ಕಳೆದರೆ ಮಹಾ ಕುಷ್ಠ ರೋಗಗಳೂ ಕೂಡ ಗುಣವಾಗುತ್ತದೆ ಎಂಬ ಪ್ರತೀತಿ ಇದೆ. ಬೀದಿ ಮಡೆ ಸ್ನಾನ ಮಾಡುವ ಹರಕೆ ಹೊತ್ತವರು ಇಲ್ಲಿ ಸ್ನಾನ ಮಾಡಿ ಬೀದಿಯಲ್ಲಿ ಮಡೆಸ್ನಾನ ಮಾಡಲು ಆರಂಭಿಸುತ್ತಾರೆ.

ಈ ಸ್ಥಳದಲ್ಲೇ ಶ್ರೀ ಸುಬ್ರಹ್ಮಣ್ಯೇಶ್ವರನ ಅವಭೃತ ಸ್ನಾನವೂ ಅದೇ ದಿವಸ ತೆಪ್ಪೋತ್ಸವವು ವಿಜೃಂಭಣೆಯಿಂದ ಜರಗುತ್ತದೆ. ಈ ಕ್ಷೇತ್ರದಲ್ಲಿ ಕುಮಾರಧಾರಾ ನದೀ ಸ್ನಾನವು ಅತಿ ಪ್ರಾಮುಖ್ಯವಾದುದು.

**ರುದ್ರಪಾದ** : ಈ ಸ್ಥಳವು ದೇವಳದಿಂದ ಸಾಧಾರಣ ಎರಡೂವರೆ ಫರ್ಲಾಂಗು ೂರದಲ್ಲಿ ದರ್ಪಣ ತೀರ್ಥದ ದಡದಲ್ಲಿದೆ. ಇಲ್ಲಿ ಪಾದಗಳ ಗುರುತಿನ ಶಿಲೆಕಲ್ಲುಗಳು ಶಿಲಾ ೇಖನಗಳು ಇವೆ. ಮತ್ತು ಇಲ್ಲಿ ಹಾಳುಗೆಡವಲ್ಪಟ್ಟ ಒಂದು ಗರ್ಭಗುಡಿ ಇದೆ. ಶ್ರೀ ಷಣ್ಮುಖನು ್ರತಿಷ್ಠಾಪಿಸಿದ ಮೂರು ಲಿಂಗಗಳ ಪೈಕಿ ಇಲ್ಲಿ ಒಂದು ಲಿಂಗ ಪ್ರತಿಷ್ಠಿಸಿದ್ದೆಂದು ತಿಳಿದು ಬರುತ್ತದೆ. ೇವಸ್ಥಾನದ ಆಡಳಿತೆಯು ಮಾಧ್ವರ ಸ್ವಾಧೀನ ಬಂದ ನಂತರ ಇದು ಪಾಳುಬಿದ್ದಿರಬೇಕು. ಈ ್ಥಳವು ಕೂಡ ಈ ಕ್ಷೇತ್ರದ ಒಂದು ಪ್ರಾಮುಖ್ಯ ಪ್ರೇಕ್ಷಣೀಯ ಸ್ಥಳವಾಗಿದೆ. ಈ ಸ್ಥಳದಲ್ಲಿ ಕ್ಷೇತ್ರ ್ಧಿಯನ್ನು ಕೆಲವರು ಮಾಡಿಹೋಗುವ ಪದ್ಧತಿ.

**ಬಿಲದ್ವಾರ** : ಈ ಬಿಲದ್ವಾರವು ದೇವಸ್ಥಾನದಿಂದ ಮತ್ಸ್ಯತೀರ್ಥಕ್ಕೆ ಹೋಗುವ ಾರಿಯಲ್ಲಿ ದೇವಳದಿಂದ ಸಾಧಾರಣ ಒಂದೂವರೆ ಮೈಲು ದೂರದಲ್ಲಿದೆ. ಇದು ರಸ್ತೆಯ ಕ್ಷಿಣ ಪಾರ್ಶ್ವದಲ್ಲಿದೆ. ಈ ಬಿಲದ್ವಾರದಲ್ಲಿ ಎರಡು ದ್ವಾರಗಳಿವೆ. ಇದರಲ್ಲಿ ಉತ್ತರ ದ್ವಾರವು ಗಮ್ಯವಾಗಿದೆ. ಈ ದ್ವಾರದಿಂದ ಹೋದರೆ ಕಾಶಿಗೆ ಹೋಗಬಹುದು ಎಂಬ ಕತೆಯಿದೆ. ದಕ್ಷಿಣ ್ವಾರದಲ್ಲಿ ಪ್ರವೇಶಿಸಿ ಸಾಧಾರಣ ಒಂದು ಫರ್ಲಾಂಗ್ ದೂರದಲ್ಲಿ ಹೊರಬರಬಹುದು. ಇದರ ಳಗೆ ಗೋಗರ್ಭವೆಂದು ಹೇಳಲ್ಪಡುವ ತೀರ್ಥವಿದೆ. ಇಲ್ಲಿ ಭಕ್ತಾದಿಗಳು ಬಂದು ತೀರ್ಥ ್ರಾಶನ ಮಾಡುತ್ತಾರೆ. ಮಳಗಾಲದಲ್ಲಿ ಆದರ ಒಳಗೆ ಹೋಗಲು ಸಾಧ್ಯವಿಲ್ಲ. 1837ನೇ ಇಸವಿಯಲ್ಲಿ ನಡೆದ ಕಲ್ಯಾಣಪ್ಪನ ಕಾಟ್‌ಕಾಯಿ ಎಂಬ ಬ್ರಿಟಿಷ್ ವಿರೋಧಿ ಸ್ವಾತಂತ್ರ ಸಮರ ಸಮಯದಲ್ಲಿ ದಂಗೆ ನಡೆಸುವವರು ಸ್ಥಳದ ದೇವಳದ ಆಡಳಿತೆದಾರರಾದ ಸ್ಥಳೀಯ ಸ್ಮಾರ್ತ ಶಿವ ಬ್ರಾಹ್ಮಣ ಹಬ್ಬಾರರ ಸಹಾಯ ಪಡೆದು ಆದರ ಒಳಗೆ ಅಡಗಿ ಕುಳಿತುಕೊಳ್ಳುತ್ತಿದ್ದರೆಂದು ಪ್ರತೀತಿ. ಈ ಸ್ವಾತಂತ್ರ ಚಳವಳದಲ್ಲಿ ಸುಬ್ರಹ್ಮಣ್ಯಕ್ಕೆ ಹತ್ತಿರವಿರುವ ಕೂಜುಗೋಡಿನಲ್ಲಿ ಆಗ ಇದ್ದ ಮಲ್ಲಪ್ಪ ಗೌಡ, ರಾಮಯ್ಯ ಗೌಡ ಮತ್ತು ಗುಡ್ಡೆಮನೆ ಅಪ್ಪಯ್ಯ ಗೌಡ ಮೊದಲಾದವರು ಕೂಡ ಈ ಸ್ವಾತಂತ್ರ ಸಮರಕ್ಕೆ ಸೇರಿರುತ್ತಾರೆಂದೂ ತಿಳಿದು ಬರುತ್ತದೆ.

ಈ ಬಿಲದ್ವಾರದಲ್ಲಿ ಪುರಾಣೋಕ್ತ ಪ್ರಕಾರ ವಾಸುಕಿಯು ಗರುಡನ ಭಯಕ್ಕೆ ಮೊತ್ತಮೊದಲು ಅಡಗಿ ಕುಳಿತ ಸ್ಥಳವೆಂಬ ಪ್ರತೀತಿಯಿಂದ ಈ ಸ್ಥಳವು ಕೂಡ ಶ್ರೀ ಸುಬ್ರಹ್ಮಣ್ಯದಲ್ಲಿ ಪ್ರೇಕ್ಷಣೀಯ ಸ್ಥಳವಾಗಿದೆ.

**ಕಾಶೀಕಟ್ಟೆ** : ಇದು ದೇವಳಧಿಂದ ಸಾಧಾರಣ 2 ಫರ್ಲಾಂಗ್ ದೂರದಲ್ಲಿ ಕುಮಾರಧಾರಾ ನದಿಗೆ ಹೋಗುವ ರಸ್ತೆಯು ಇಬ್ಭಾಗವಾಗಿ ಒಳ ಬರುವ ಸ್ಥಳದಲ್ಲಿದೆ. ಇಲ್ಲಿ ಎಂದು ದೊಡ್ಡ ಅಶ್ವತ್ಥ ಕಟ್ಟೆ ಇದೆ. ಈ ಸ್ಥಳವೇ ಬಲ್ಲಾಳರಾಯನ ಕಾಲದಲ್ಲಿ ಈಗ ಸುಬ್ರಹ್ಮಣ್ಯವೆಂದು ಹೇಳಲ್ಪಡುವ ಆಗಿನ ಕುಕ್ಕೆ ಪಟ್ಟಣಕ್ಕೆ ಒಳಬರುವ ಹೆಬ್ಬಾಗಿಲು. ಮುಂಚಿನ ಕಾಲದಲ್ಲಿ ನಗರದ ಒಳಬರುವಾಗ ಬಾಗಿಲಿನಲ್ಲಿ ನಗರದ ರಕ್ಷಣೆಗೋಸ್ಕರ ಆಂಜನೇಯ ಸ್ವಾಮಿಯ ಮತ್ತು ಮಹಾಗಣಪತಿಯ ವಿಗ್ರಹವನ್ನು ಪ್ರತಿಷ್ಠಾಪಿಸುವ ಪದ್ಧತಿ ಇತ್ತು. ಆ ಪ್ರಕಾರ ಇಲ್ಲಿಯೂ ಮುಂಚಿನವರು ಈ ಸ್ಥಳದಲ್ಲಿ ಈ ಎರಡು ದೇವತೆಗಳನ್ನು ಪ್ರತಿಷ್ಠಿಸಿ ಗುಡಿಗಳನ್ನು ಕಟ್ಟಿಸಿರಬೇಕು. ಈ ಎರಡು ಗಡಿಗಳು ಇಲ್ಲಿ ಇರುವುದರಿಂದ ಈ ಸ್ಥಳವು ಒಂದು ಕಾಲದಲ್ಲಿ ರಾಜವೈಭವದಿಂದ ಮೆರೆದುಕೊಂಡಿದ್ದ ಪ್ರಸಿದ್ಧ ಸ್ಥಳವಾಗಿತ್ತೆಂದು ತಿಳಿಯಬೇಕಾಗುತ್ತದೆ. ಇದಕ್ಕೆ ಕಾಶೀಕಟ್ಟೆ ಎಂಬ ಹೆಸರು ಈ ದೇವಳವು 1845ರ ನಂತರ ಈ ಸ್ಥಳಕ್ಕೆ ಕಾಶೀಕಟ್ಟೆ ಎಂಬ ಹೆಸರು

ಬಂತೆಂದು ತಿಳಿಯುತ್ತದೆ. ಇಲ್ಲಿಯ ಮಹಾ ಗಣಪತಿಯು ಬಹಳ ಪ್ರಾಚೀನದ್ದಾದುದರಿಂದ ಕ್ಷಿಪ್ರಫಲದಾಯಕನೆಂದು ಪ್ರತೀತಿ. ನಿತ್ಯವು ಗಣಪತಿಗೆ ಪಂಚಕಜ್ಜಾಯವೂ ಈ ಪೂಜೆಯು ನಡೆಯುತ್ತದೆ. ಇದು ನಾರಾದರಿಂದ ಪ್ರತಿಷ್ಠಿಸಲ್ಪಟ್ಟದೆಂದು ಪೌರಾಣಿಕ ಕತೆಯಾಗಿದೆ.

ಬಲ್ಲಾಳರಾಯ ವಿಗ್ರಹ : ಈ ಸ್ಥಳವು ಒಂದು ಕಾಲದಲ್ಲಿ ಬಂಗರ ಪೈಕಿ ಬಲ್ಲಾಳರಾಯನೆಂಬ ಒಬ್ಬ ಪಾಳೆಗಾರರರ ಆಳ್ವಿಕೆಯಲ್ಲಿ ಇತ್ತು ಎಂಬುದಕ್ಕೆ ನಿದರ್ಶನವಾಗಿ ಈ ದೇವಸ್ಥಾನದ ಒಳ ಅಂಗಣದಿಂದ ಹೊರಬರುವಾಗ ಗೋಪುರದ ಬಲಭಾಗದಲ್ಲಿ ಬಲ್ಲಾಳರಾಯನ ವಿಗ್ರಹವೆಂದು ಕರೆಯಲ್ಪಡುವ ದೊಡ್ಡ ಶಿಲಾವಿಗ್ರಹವೊಂದು ಇರುವುದು ದೃಷ್ಟಾಂತವಾಗಿದೆ. ಅಲ್ಲದೆ ಈ ದೇವಸ್ಥಾನದಿಂದ ಸಾಧಾರಣ ಒಂದು ಮೈಲು ದೂರದ ಇಂಜಾಡಿ ಎಂಬಲ್ಲೂ ಮತ್ತು ಈಗ ಜಾನುವಾರು ಸಂತೆ ಆಗುವ ಕುಳುಕುಂದ ಎಂಬ ಸ್ಥಳದ ನೈಋತ್ಯ ಭಾಗದಲ್ಲಿಯೂ ಅವನ ಅರಮನೆಯು ಇತ್ತೆಂದು ಅಲ್ಲಿರುವ ಕುರುಹುಗಳಿಂದ ತಿಳಿದು ಬರುತ್ತದೆ. ಸಾಧಾರಣ 11ನೇ ಶತಮಾನದಿಂದ 32 ಗ್ರಾಮಗಳಿಂದ ಕೂಡಿ ಈ ಸುಬ್ರಹ್ಮಣ್ಯ ಸೀಮೆ ಹೊಯ್ಸಳ ಬಲ್ಲಾಳರ ಆಳ್ವಿಕೆಯಲ್ಲಿ ಇತ್ತೆಂದು ಕಂಡುಬರುತ್ತದೆ. ಆ ಮೇಲೆ ಇಕ್ಕೇರಿ ನಾಯಕರ ಆಳ್ವಿಕೆಗೆ ಬಂದನಂತರ ಈ ಸೀಮೆಯು ಪಾಳೆಗಾರರ ಸ್ವಾಧೀನಕ್ಕೆ ಬಂತು ಎಂದು ಚರಿತ್ರೆಯು ತಿಳಿಸುತ್ತದೆ. ಇಲ್ಲಿ ಆಳಿಕೊಂಡಿದ್ದ ಪಾಳೆಗಾರರನು ಬಲ್ಲಾಳ ರಾಜರು ಎಂದು ಕರೆಯುತ್ತಿದ್ದರು. ಇವರು ಜೈನ ಮನೆತನದವರು ಬಲ್ಲಾಳ ರಾಜನ ಆಳ್ವಿಕೆ ಸಮಯದಲ್ಲಿ ಈ ವಿಗ್ರಹವನ್ನು ದೇವರ ಸನ್ನಿಧಿಯಲ್ಲಿ ರಾಜನಿಗೆ ಮರ್ಯಾದೆ ಕೊಡುವುದಕ್ಕೋಸ್ಕರ ಪ್ರತಿಷ್ಠಿಸಿರಬೇಕು. ಈ ರೀತಿ ಮೈಸೂರು ವಗೈರೆ ದೇಶಗಳಲ್ಲಿ ರಾಜರ ಭಕ್ತಿಗಾಗಿ ಯಾಯ ದೇಶವನ್ನಾಳಿದ ಹಿಂದಿನ ರಾಜರುಗಳ ವಿಗ್ರಹವನ್ನು ಪ್ರತಿಷ್ಠಿಸಿದ್ದಂತೆ ಇಲ್ಲಿಯೂ ಹಾಗೆ ಮಾಡಿರಬೇಕು.

ಈ ದೇವಸ್ಥಾನವು 1845ರ ನಂತರ ಮಾಧ್ವರ ಆಡಳಿತೆಗೆ ಬಂದ ಮೇಲೆ ಈ ವಿಗ್ರಹ ಸ್ಥಾಪನೆ ವಿಚಾರದಲ್ಲಿ ಒಂದು ಕಟ್ಟುಕತೆಯನ್ನು ರಚಿಸಿದರು. ಅದು ಹೀಗಿದೆ :- ಇವರ ಮಾಧ್ವ ಮಠದಲ್ಲಿರತಕ್ಕ ವೇದವ್ಯಾಸ ಸಂಪುಟ ಒಂದು ಅಭೇದ್ಯವಾಗಿದ್ದರೂ ಬಲ್ಲಾಳ ರಾಜರ ಪರಂಪರೆಯವನೊಬ್ಬ ಅದನ್ನು ಒಡೆಯನು ಕುತೂಹಲದಿಂದ ಆನೆಯಿಂದ ಮೆಟ್ಟಿಸಿದನೆಂದೂ ಇದರ ಪರಿಣಾಮವಾಗಿ ಅವನಿಗೆ ಮೈಯೆಲ್ಲಾ ತಾಪವೇಳಲು ಆಗ ಅವನು ಸುಬ್ರಹ್ಮಣ್ಯ ದೇವರನ್ನು ಪ್ರಾರ್ಥಿಸಿದ್ದಕ್ಕೆ ದೇವರು ಆತನ ವಿಗ್ರಹವನ್ನು ದೇವರ ಸನ್ನಿಧಿಯಲ್ಲಿ ಸ್ಥಾಪಿಸಬೇಕೆಂದೂ ಆದರ ಶಾಂತಿಗಾಗಿ ಹತ್ತಿ, ಕುಂಬುಳ ಕಾಯಿ, ಸಾಸಿವೆ, ಬೆಣ್ಣೆ ಇತ್ಯಾದಿಗಳನ್ನು ಅವನಿಗೆ ಸಮರ್ಪಿಸಬೇಕೆಂದು ಹೇಳಿದರೆಂದೂ ಇದರಿಂದಾಗಿ ಇಲ್ಲಿ ಈಗಲೂ ಆ ಪದ್ಧತಿಯು ಬಂತೆಂದೂ ಕತೆ ಕಟ್ಟಿದ್ದಾರೆ. ಈ ಕತೆಯು ಈ ಮಾಧ್ವ ಮಠದವರು 1927ರಲ್ಲಿ ಪ್ರಕಟಿಸಿದ ಸುಬ್ರಹ್ಮಣ್ಯ ಸಂಸ್ಥಾನದ ಸಂಕ್ಷಿಪ್ತ ಇತಿಹಾಸ ಎಂಬ ಪುಸ್ತಕದಲ್ಲಿ ಕಂಡುಬರುತ್ತದೆ. ಅದಕ್ಕಿಂತ ಪೂರ್ವದಲ್ಲಿ ಈ ಕಟ್ಟುಕತೆಯು ಯಾವ ಪುರಾವ ವ ಇತಿಹಾಸದಲ್ಲಿ ಕಂಡುಬರುವುದಿಲ್ಲ. ಈ ಮಾಧ್ವ ಮಠದ ಈ ಮೊದಲಿನ ವ್ಯಾಸತೀರ್ಥ ಸ್ವಾಮಿಗಳು ಈ ಸುಬ್ರಹ್ಮಣ್ಯ ದೇವಸ್ಥಾನವು ತಮ್ಮ ಶಿಲಶಿಲಾ ಹಕ್ಕಿನದ್ದೆಂದು ರುಜುಪಡಿಸಲು O.S. No. 27 of 1886ರ ವ್ಯಾಜ್ಯದ ಮಧ್ಯದಲ್ಲಿ ತಯಾರಿಸಿದ ಫೋರ್ಜರಿ ತಾಮ್ರ ಶಾಸನವು ಒಂದು ಸಲ ಹೈಕೋರ್ಟಿನವರೆಗೂ ಹೋಗಿ ಫೋರ್ಜರಿ ಎಂದು ತೀರ್ಮಾನವಾದುದನ್ನು ಕೆಲವು ಸಮಯ ಒಳಗಿಟ್ಟು ಪುನಃ ಆ ಕತೆಯನ್ನು ಜನರ ಕಣ್ಣಿಗೆ

ಬೀಳುವಂತೆ 1927ರಲ್ಲಿ ಅವರು ಪ್ರಕಟಿಸಿದ ಪುಸ್ತಕದಲ್ಲಿ ಪ್ರಕಟಿಸಿರುವುದರಿಂದ ಇವರ ಮಹತ್ವಾಕಾಂಕ್ಷೆ ಇನ್ನೂ ಇದೆ ಎಂಬುದು ವಿಷದವಾಗುತ್ತದೆ. ಈ ಬಲ್ಲಾಳ ರಾಜನು ಒಂದು ಕಾಲದಲ್ಲಿ ರಾಜನಾಗಿದ್ದನೆಂಬ ಕುರುಹಿಗಾಗಿ ಪ್ರತಿದಿನ ರಾತ್ರಿ ಮಂಗಳಾರತಿ ಆದೊಡನೆ ಈ ವಿಗ್ರಹದ ಹತ್ತಿರ ಮಂಗಳಾರತಿ ಒಪ್ಪಿಸುವುದೂ, ಚಂಪಾಷಷ್ಠಿ ದಿವಸ ಬಲ್ಲಾಳರಾಜನ ಕಾಣಿಕೆಯನ್ನು ಸ್ವೀಕರಿಸಿದ ಮೇಲೆ ಉತ್ಸವ ಹೊರಡುವುದೂ ಈಗಲೂ ವಾಡಿಕೆಯಲ್ಲಿದೆ.

ಈ ರಾಜಮನೆತನದವರೇ ಆದ ಬಲ್ಲಾಳರು ಕಾರಣಾಂತರದಿಂದ ಸುಬ್ರಹ್ಮಣ್ಯದಿಂದ ಕೋಣಾಜೆಗೆ ಹೋಗಿ ಅಲ್ಲಿಂದ ಪುನಃ ಕಡಬದ ಹತ್ತಿರ ಇರುವ ರೆಂಜಲಾಡಿ ಎಂಬಲ್ಲಿ ಬೀಡುಕಟ್ಟಿ ವಾಸ್ತವಿಸಿದ್ದಾರೆ ಎಂದು ಆ ರೆಂಜಿಲಾಡಿ ಬೀಡಿನ ಶ್ರೀ ರಾಮಯ ಬಲ್ಲಾಳ ಎಂಬವರು ತಾ. 27-9-1946ರಲ್ಲಿ ದಿವಂಗತ ಶ್ರೀ ನಟ್ಟೋಜಿ ಶಿವರಾಯರಿಗೆ ಬರೆದ ಪತ್ರದಿಂದ ತಿಳಿದು ಬರುತ್ತದೆ. ಆ ರಾಮಯ್ಯ ಬಲ್ಲಾಳನ ಹಿರಿಯರು ಈಗ ಕೆಲವು ವರ್ಷಗಳ ಹಿಂದೆ ಪ್ರತಿ ಚಂಪಾಷಷ್ಠಿ ಉತ್ಸವದ ವೇಳೆ ಬಂದು ಮುಂಚಿನ ರಾಜಮರ್ಯಾದೆಗಳನ್ನು ಸ್ವೀಕರಿಸುತ್ತಿದ್ದರೆಂದು ತಿಳಿದು ಬರುತ್ತದೆ. ಅಲ್ಲದೆ ಆ ರಾಮಯ ಬಲ್ಲಾಳರಲ್ಲಿ ಈಗ ದೇವಸ್ಥಾನದಲ್ಲಿ ಇರುವಂಥ ನವಿಲು ಮುದ್ರೆಯ ಉಂಗುರವು ಈಗಲೂ ಇರುವುದು ದೃಷ್ಟಾಂತವಾಗಿದೆ. ಬಲ್ಲಾಳ ರಾಯನ ಕಟ್ಟುಕ್ಕತೆಯ ಪೂರ್ಜರಿ ಶಾಸನವನ್ನು ವಿಮರ್ಶಿಸುವಾಗ ಮಾಧ್ವರ ಆಡಳಿತೆ ದೇವಸ್ಥಾನಕ್ಕೆ ಬಂದ ನಂತರ ಆ ಬಲ್ಲಾಳರಿಗೆ ಏನೊ ಅಪಚಾರಗಳು ನಡೆದು ಅವರು ಊರು ಬಿಟ್ಟು ಹೋಗಿರಬಹುದೆಂದು ಊಹಿಸಬೇಕಾಗುತ್ತದೆ.

**ಹೊಸೊಳಿಗಮ್ಮ :** ಈ ದೇವಸ್ಥಾನದ ಹೊರ ತೆಂಕು ಅಂಗಣದ ದಕ್ಷಿಣ ಭಾಗದಲ್ಲಿ ಹೊಸಳಿಗೆ ಅಮ್ಮನವರ ಗುಡಿಯೊಂದಿದೆ. ಹೊಸಳಿಗೆ ಅಮ್ಮ ಮತ್ತು ಪುರುಷರಾಯ ಎಂಬ ಎರಡು ಇಲ್ಲಿಯ ಪ್ರಧಾನ ದೈವಗಳು. ಇವುಗಳಿಗೆ ನಿತ್ಯ ಪೂಜೆ ವಗೈರೆ ವಿನಿಯೋಗಗಳು ದೈವಳದಿಂದಲೇ ನಡೆಯುತ್ತದೆ. ದೇವಸ್ಥಾನದಲ್ಲಿ ಷಷ್ಠಿ ಉತ್ಸವ ಕಳೆದ ಒಡನೆ ಇವುಗಳಿಗೆ ನೇಮ ಕೊಡುವ ವಾಡಿಕೆ ಇದೆ. ಇಲ್ಲಿ ಭಕ್ತಾದಿಗಳು ಕುಂಕುಮಾರ್ಚನೆ ಮಾಡಿಸುತ್ತಾರೆ. ಈ ದೈವಗಳು ಬಹಳ ಅನಾದಿಯಿಂದ ಇದ್ದವುಗಳಾದುದರಿಂದ ಭೂತ ಕಟ್ಟುವವನು ಮೈಮಾನಿಕೆ ಬಂದ ಒಡನೆ ಅನಾದಿ ಆಡಳಿತೆದಾರರಾದ ಹೆಬ್ಬಾರರನ್ನು ಕರೆಯುವ ಪದ್ಧತಿ ಇದೆ.

**ಹೆಬ್ಬಾರರು :** ಈ ಸುಬ್ರಹ್ಮಣ್ಯ ದೇವಸ್ಥಾನದ ಅನಾದಿ ಮೊಕ್ತೇಸರರು ಹೆಬ್ಬಾರರ ಮನೆತನದವರು. ಇವರು ಸ್ಥಳೀಯ ಸ್ಮಾರ್ತ ಶಿವಬ್ರಾಹ್ಮಣರು ಇವರು ಶೃಂಗೇರಿ ಮಠದ ಶಿಷ್ಯ ವರ್ಗದವರು. ಇವರ ಭಾಷೆ ತುಳು. ಈ ದೇವಸ್ಥಾನದ ಆಡಿ ಸ್ಥಳವು ಸರಕಾರದವರಿಂದ ಪರಂಬೋಕಾಗಿ ವಿಂಗಡಿಸುವ ಮೊದಲು ಹೆಬ್ಬಾರರಿಗೆ ಸೇರಿದ ಮೂಲಿ ನಂಬ್ರ 3ರಲ್ಲಿ ಇತ್ತು. ಪುತ್ತೂರು ಮಹಾಲಿಂಗೇಶ್ವರ ದೇವರು ನಟ್ಟೋಜಿ ಮನೆತನದ ಮನೆದೇವರಾಗಿಯೂ ಈ ಮೊದಲು ಇದ್ದಂತೆ ಈ ಸುಬ್ರಹ್ಮಣ್ಯದ ಶ್ರೀ ಸುಬ್ರಹ್ಮಣ್ಯೇಶ್ವರನು ಹೆಬ್ಬಾರ ಮನೆತನದ ಮನೆದೇವರಾಗಿ ಇದ್ದರೆಂದು ತಿಳಿದುಬರುತ್ತದೆ. ಈ ಹೆಬ್ಬಾರ ಕುಟುಂಬಕ್ಕೆ ಸೂತಕ ವಗೈರೆಗಳು ಬಂದ ಕಾಲದಲ್ಲಿ ದೇವರಿಗೂ ಸಹ ಶುದ್ಧ ಆಗುವ ವರೆಗೆ ಮುಟ್ಟು ಪೂಜೆ ಆಗುವ ಕ್ರಮವೂ ಇತ್ತಂತೆ.

ಇದನ್ನು ಪುಷ್ಟೀಕರಿಸಲು ಈಗಲೂ ದೇವಸ್ಥಾನದಲ್ಲಿ ಮುಖ್ಯಸ್ಥನಾಗಿ ವರ್ತಿಸುವ ಹೆಬ್ಬಾರ

ಉದ್ಯೋಗ ಒಂದು ಇರುವುದು ನಾವು ಕಾಣಬಹುದು. ಈ ಹೆಬ್ಬಾರ ಉದ್ಯೋಗಸ್ಥರ ಕರ್ತವ್ಯದ ಪುಸ್ತಕದಲ್ಲಿ ಇವನ ಉದ್ಯೋಗವನ್ನು ಪರಿಶೀಲಿಸಿದರೆ, ಇವನು ಸ್ಥಾನಿಕ ವಶಿಬ್ರಾಹ್ಮಣನಾಗಬೇಕೆಂದೂ ಇವನ ಕೆಲಸವು ಉಷಾಃ ಕಾಲದಿಂದ ಆರಂಭಿಸಿ ರಾತ್ರೆ ಬೀಗ ಮುದ್ರೆ ಆಗುವ ವರೆಗೆ ಇವನ ಹಾಜರಾತಿಯು ಎಲ್ಲಾ ಕರ್ತವ್ಯಗಳಲ್ಲಿ ಇದೆಯೆಂದು ತಿಳಿದುಬರುತ್ತದೆ. ಆದರೆ ಈಗ ಆ ಉದ್ಯೋಗಕ್ಕೆ ಇತರರನ್ನು ನೇಮಿಸುವುದು ದೇವಳದ ಪದ್ಧತಿಗೆ ವಿರೋಧವಾಗಿದೆ. ಈ ದೇವಸ್ಥಾನದಲ್ಲಿ ಹೊಸ್ತಾರೋಗಣೆ (ಹೊಸ ಅಕ್ಕಿ ಊಟ ಮಾಡುವ ದಿವಸ) ದಿವಸ ಮಹಾ ಪೂಜೆಗೆ ಮುಂಚೆ ಶ್ರೀ ಸುಬ್ರಹ್ಮಣ್ಯೇಶ್ವರನಿಗೆ ಅಭಿಷೇಕವಾದ ಪಂಚಾಮೃತ ಅಂದರೆ ಹಾಲು, ಮೊಸರು, ತುಪ್ಪ, ಸಕ್ಕೆ, ಜೇನು ಇತ್ಯಾದಿಗಳನ್ನು ಸ್ಥಾನಿಕ ಶಿವಬ್ರಾಹ್ಮಣ ಬ್ರಹ್ಮಚಾರಿಗಳಿಗೆ ದೇವರ ಮಂಟಪದಲ್ಲಿ ಬಡಿಸಿ ಭೋಜನ ಮಾಡಿಸುವ ಕ್ರಮವು ಇರುತ್ತಿತ್ತು. ಈಗ ಅದನ್ನು ನಿಲ್ಲಿಸಿದ್ದಾರೆ. ಇದರಿಂದ ಒಂದು ಕಾಲದಲ್ಲಿ ಈ ದೇವಳವು ಈ ಬ್ರಾಹ್ಮಣರಿಗೆ ಸಂಬಂಧಪಟ್ಟದೆಂದು ಸ್ಪಷ್ಟವಾಗುತ್ತದೆ. ಈಗ ಆ ಚಪ್ಪೆ ಊಟಕ್ಕಾಗಿ ಮಾಡಿದ ಅಕ್ಕಿ, ನೈವೇದ್ಯ ಅನ್ನವನ್ನು ಸ್ಥಾನಿಕ ಸ್ಮಾರ್ತ ಶಿವ ಬ್ರಾಹ್ಮಣರಾದ ಒಳದೇವ ಕಾರ್ಯಸ್ಥ ಈಶ್ವರಪ್ಪಯ್ಯನವರ ಮಗ ಶಿವರಾಯರ ಮನೆಗೆ ಸಲ್ಲಿಸುವುದು ವಾಡಿಕೆಯಾಗಿ ನಿಂತಿದೆ. ಹೇಗಿದ್ದರೂ 7 ಸೇರಕ್ಕಿ ನೈವೇದ್ಯವು ಸ್ಥಳದ ಸ್ಮಾರ್ತ ಶಿವ ಬ್ರಾಹ್ಮಣರಿಗೇನೆ ಸಲ್ಲುತ್ತದೆ. ಇದೂ ಅಲ್ಲದೆ ಈ ದೇವಳದ ಗರ್ಭಗುಡಿಯ ನಡು ಮಂಟಪಕ್ಕೆ ಸ್ಮಾರ್ತ ಬ್ರಾಹ್ಮಣರ ಪೈಕಿ ಸ್ಥಾನಿಕರಿಗೆ ಮಾತ್ರ ಪ್ರವೇಶಿಸುವ ಪದ್ಧತಿ ಇರುವುದೂ ಇತ್ಯಾದಿ ಸನ್ನಿವೇಶಗಳಿಂದ ಕ್ರಮವಾಗಿ ಒಂದು ಕಾಲದಲ್ಲಿ ಇವರೇ ಇಲ್ಲಿಯ ಆಡಳಿತೆ ಮತ್ತು ಅರ್ಚಕರಾಗಿ ಇದ್ದರೆಂದು ಸ್ಪಷ್ಟಪಡಿಸಬಹುದಾಗಿದೆ.

O.S. No. 27 of 1886 ವ್ಯಾಜ್ಯದಲ್ಲಿ ಸಾಕ್ಷಿ ಹೇಳಿದ ಕೊಪ್ಪರಿಗೆ ವೆಂಕಟ್ರಮಣ ಭಟ್ಟನ ಹೇಳಿಕೆಯಲ್ಲಿ ದೇವರ ನೈವೇದ್ಯವು ತಯಾರಾದೊಡನೆ ಅಕ್ಷಯ ಪಾತ್ರದ ಪೂಜೆಯಾಗಬೇಕು. ಇದನ್ನು ದೇವಳದ ಮಣೆಗಾರನು ಮಾಡಬೇಕು. ಆದಕ್ಕೆ ನೈವೇದ್ಯವಾ 10 ಸೇರು ಅಕ್ಕಿ ನೈವೇದ್ಯದ ಅನ್ನವು ಹೆಬ್ಬಾರ ಸ್ಮಾರ್ತ ಬ್ರಾಹ್ಮಣರಿಗೆ ಇಕ್ಕುವುದು ಉಳಿದ ಮಹಾಪೂಜೆ ನೈವೇದ್ಯದ 30 ಸೇರು ಅಕ್ಕಿಯ ಅನ್ನವು ಸರ್ವ ಬ್ರಾಹ್ಮಣರ ಸಂತರ್ಪಣೆಗೂ ಸಲ್ಲುತ್ತದೆ. ಇದರಿಂದ ಅಕ್ಷಯಪಾತ್ರಕ್ಕೆ ಸಂಬಂಧಪಟ್ಟ ಅನ್ನ ಸ್ಮಾರ್ತರೂ ಉಣ್ಣುವುದರಿಂದ ಒಂದು ಕಾಲದಲ್ಲಿ ಈ ದೇವಳದಲ್ಲಿ ಸ್ಮಾರ್ತ ಬ್ರಾಹ್ಮಣರಿಗೆ ಮಾತ್ರ ಕ್ಷೇತ್ರದಲ್ಲಿ ಸಂತರ್ಪಣೆ ನಡೆಯುತ್ತಿತ್ತು ಎಂಬುದನ್ನು ತಿಳಿಯಬಹುದಾಗಿದೆ. O.S. 279/1876 ಆದರ ಅಪೀಲ್ A.S. ನಂಬ್ರ 517/1876 ಜಜ್‌ಮೆಂಟ್ (26-6-1878), O.S. ನಂಬ್ರ 132 of 1879 ಮತ್ತು O.S. ನಂಬ್ರ 27 of 1886ರ ಜಜ್‌ಮೆಂಟ್ ಮತ್ತು ಆದರ ಸಾಕ್ಷಿಗಳಿಂದಲೂ ಶಕ 1329ನೇ ತಾಮ್ರ ಶಾಸನದಿಂದಲೂ ಈ ದೇವಳ ಆಡಳಿತೆಯು ಸ್ಮಾರ್ತ ಶಿವ ಬ್ರಾಹ್ಮಣರ ಆಡಳಿತೆಯಲ್ಲಿ ಇತ್ತೆಂದು ವ್ಯಕ್ತವಾಗುತ್ತದೆ.

ಈ ಹೆಬ್ಬಾರರು ನಾಧಾರಣ 1817ರ ವರೆಗೆ ಊರಿನವರ ಕೂಡುವಿಕೆಯಿಂದ ಸ್ವತಂತ್ರವಾಗಿ ಆಡಳಿತೆ ನಡೆಸುತ್ತಿದ್ದರೆಂದು ಆಗ ಅಲ್ಲಿ ಇರುತ್ತಿದ್ದವರಿಂದ ತಿಳಿದು ಬರುತ್ತದೆ. ಆಗ ಅಲ್ಲಿ ಹೆಚ್ಚಿನ ಸ್ಥಳವು ಬ್ರಾಹ್ಮಣರಲ್ಲಿ ಸ್ಥಾನಿಕ ಸ್ಮಾರ್ತ ಮತಸ್ಥರಿಗೆ ಮಾತ್ರ ಇತ್ತು ಇತರರೆಂದರೆ ಪರವ, ಕಮ್ಮಾರ ಜಾಡರ ಜಾತಿಯವರಿಗೆ ಸ್ವಲ್ಪ ಸ್ಥಳವು ಇತ್ತು ಎಂದು 1274ನೇ ಫಸಲಿಯ A ರಿಜಿಸ್ಟ್ರಿ ದಾಕ್ಲೆಯಿಂದ ತಿಳಿದು ಬರುತ್ತದೆ.

ಈ ಹೆಬ್ಬಾರ ಕುಟುಂಬದಲ್ಲಿ 4 ಮನೆಗಳು ಇದ್ದುವು. ಅವುಗಳಲ್ಲಿ ಮುಖ್ಯವಾಗಿ ದೇವಳದ ಆಡಳಿತೆ ನಡಸುತ್ತಿದ್ದವರು ಬೆಟ್ಟುಮುಕ್ಕಿ ಮತ್ತು ಉಬ್ಬಾನಿ ಮನೆಯವರು. ಇವರ ಮನೆತನದವರೇ ಸಾಧಾರಣ 1876ರ ವರೆಗೆ ಊರ ಮೊಕ್ತೇಸರರಾಗಿ ಸ್ವಾಮಿಗಳೊಂದಿಗೆ ಇದ್ದರು. ಆ ಮೇಲೆ 1915ರ ವರೆಗೆ ಹೆಬ್ಬಾರ ಉದ್ಯೋಗವನ್ನು ಮಾಡುತ್ತಿದ್ದರು. ಇವರಲ್ಲಿ ಕಡೆದಾಗಿ ಹೆಬ್ಬಾರ ಉದ್ಯೋಗವನ್ನು ಮಾಡಿದವರು ಬೆಟ್ಟುಮುಕ್ಕಿ ಮನೆಯ ಹೆಬ್ಬಾರ ಸುಬ್ರಾಯ ಎಂಬವರು ಅವರ ನಂತರ ಹೆಬ್ಬಾರ ಉದ್ಯೋಗವು ಇತರ ಮಾಧ್ವರಿಗೆ ಹೋಯಿತು ಎಂದು ತಿಳಿದು ಬರುತ್ತದೆ. ಮೇಲೆ ಹೇಳಿದ ಹೆಬ್ಬಾರ ಸುಬ್ರಾಯರ ತಂಗಿಯನ್ನು ಕಡಬದ ವಿ. ಕೃಷ್ಣಯ್ಯ ಶ್ಯಾನುಭಾಗರಿಗೆ ಮದುವೆ ಆಗಿರುತ್ತದೆ. ಅದರಲ್ಲಿ ಹುಟ್ಟಿದ ಒಂದು ಹುಡುಗಿಯನ್ನು ಕನ್ಯಾನದ ಹತ್ತಿರ ಇರುವ ದೇಲಂತ ಬೆಟ್ಟು ಶ್ರೀನಿವಾಸ ರಾಯರ ಮಗನಿಗೆ, ಮದುವೆಯಾಗಿರುತ್ತದೆ ಎಂದು ತಿಳಿದು ಬರುತ್ತದೆ.

O.S. No. 27 of 1886 ವ್ಯಾಜ್ಯದ ಜಜ್‌ಮೆಂಟಿನ 16ನೇ ಪಾರದಲ್ಲಿ ಹೆಬ್ಬಾರರ ಅಧಿಕಾರ ವಿಚಾರ ಹೀಗಿದೆ : In the Statement L.X. IV made by the two Hebbars Narnappa and the six Upadhi's, they confirmed the reasons given by the Swami and Asranna in Exibit L.X. III for their being appointted by the Government as three Muktessars but contended that the two Hebbars were the ancieut owners of the temple and entitled to receive the presents and the offerings and to keep an account of the same and also to invite men entitled to honours in the pagoda and to act as its principal men and Consequently that, if any vacancy arose among muktessars, the right of appointing a successor vested with the two serviving muktessars in conjunction with right of them (two Hebbaras and 6 upahis) in the presence of the office bearers and the Villagers ಅಂದರೆ O.S. No. 27 of 1886ನೇ ವ್ಯಾಜ್ಯದ ಪಾರ 16ರಲ್ಲಿ ಹೆಬ್ಬಾರರಾದ ನಾರಣಪ್ಪ ಮತ್ತು ಸುಬ್ರಾಯ ಎಂಬವರಿಗೆ ಆರು ಉಪಾಧಿಗಳು ಇತ್ತೆಂದೂ ಸ್ವಾಮಿಗಳು ಸನದಿ ಮೊಕ್ತೇಸರರೆಂದೂ ಹೆಬ್ಬಾರರಾದ ನಾವು ಅನಾದಿಯಿಂದಲೇ ದೇವಳದ ಅಧಿಕಾರಿಗಳಾಗಿದ್ದ ಖದಿಂ ಮೊಕ್ತೇಸರರೆಂದೂ, ದೇವಳಕ್ಕೆ ಬರುವ ಉಂಬಳಿ ಹರಿಕೆ ಕಾಣಿಕೆಗಳನ್ನು ವಸೂಲು ಮಾಡುವ ಹಕ್ಕು, ಅವುಗಳ ಲೆಕ್ಕಪತ್ರ ಇಡುವುದು ಮುಖ್ಯ ಮುಖ್ಯ ಮರ್ಯಾದಸ್ಥರಾದ ಮನುಷ್ಯರನ್ನು ದೇವಳಕ್ಕೆ ಕರೆಸಿ ಅವರಿಗೆ ಯೋಗ್ಯಮರ್ಯಾದೆ ಕೊಡುವುದು ಖಾಲಿ ಬಿದ್ದ ಮೊಕ್ತೇಸರಿಕೆಗೆ ಹೊಸ ಮೊಕ್ತೇಸರರನ್ನು ಇತರ ಮೊಕ್ತೇಸರರನ್ನು ಸೇರಿಸಿಕೊಂಡು ನೇಮಿಸುವ ಹಕ್ಕು ಉಳ್ಳವರೆಂದೂ ಅಲ್ಲದೆ ಖಾಲಿಬಿದ್ದ ದೇವಳ ಉದ್ಯೋಗಸ್ಥರನ್ನು ನೇಮಿಸುವ ಅಧಿಕಾರವು ಅವರದ್ದೆಂದು ಹೀಗೆ ದೇವಳದ ಮುಖ್ಯಸ್ಥರಾಗಿ ವರ್ತಿಸುವುದು ಹೆಬ್ಬಾರರ ಆರು ಉಪಾಧಿಗಳಲ್ಲಿ ಸೇರಿದವುಗಳೆಂದು ವಿವರಿಸಲ್ಪಟ್ಟವೆ. ಇತ್ಯಾದಿಗಳಿಂದ ಹೆಬ್ಬಾರರ ಅಧಿಕಾರವು ವಿವರಿಸಲ್ಪಟ್ಟಿದೆ. ಇದನ್ನು ಅಧಿಕಾರವಾಗಿಟ್ಟುಕೊಂಡೆ ಕಡೆಗೆ ಜಜ್‌ಮೆಂಟಿನಲ್ಲಿ ಪಾರಾ 19ರಲ್ಲಿ : My finding therefore is that the temple is a public institution richly endowed by the piety and genarosity of

several Rajas and other individuals from all parts of Southern India, that still 1817 it was probably under the administration of Native rulers, cheifs of 5 out of the 64 Village reffered to in V and BB and the Staniks (V) and the other principal office bearers that since that year down to 1845, it was managed by the collector through a monigar and since that period by the muktessars appointed by him till 1863 and afterwards by the temple committee, That neither the Swami mutt nor anybody else has any independent or heridetary right of management, peffs only right in the temple is that of office bearer holding the Upadiships of Ashtothra and mula manthra to one of which he got is as a mortgagee as stated in the sub collector's order XII of 1828 and that being a Swami of some position living in the temple premisers. ಅಂದರೆ ಅದೇ ಜಜ್‌ಮೆಂಟಿನಲ್ಲಿ ಅಂತ್ಯಕ್ಕೆ ಜಡ್ಜರು "ನನ್ನ ತೀರ್ಪು" (my finding) ಎಂಬಲ್ಲಿಂದ ಈ ದೇವಳವು ಸಾರ್ವಜನಿಕ ದೇವಳವೆಂದೂ ಹೇರಳ ಕಾಣಿಕೆ ಉಂಬಳಿ ವರಾಡಗಳಿಂದ ಕೂಡಿದ್ದೆಂದೂ 1817ನೇ ಇಸವಿ ವರೆಗೆ ಈ ದೇವಳವು ಪಾಳೆಗಾರರ ಅರಸರ ಆಳ್ವಿಕೆಯಲ್ಲಿ ಸ್ಥಾನಿಕರು ಮತ್ತು ಇತರ ಕೆಲವು ಊರಿನ ಮುಖ್ಯ ಉದ್ಯೋಗಸ್ಥರ ಆಡಳಿತೆಯಲ್ಲಿ ಇತ್ತೆಂದೂ ಆ ಮೇಲೆ 1845ರ ವರೆಗೆ ಸರಕಾರದ ಆಡಳಿತೆಯಲ್ಲಿ ಊರಿನ ಕಲೆಕ್ಟರರ ಮುಖಾಂತರ ನೇಮಿಸಲ್ಪಟ್ಟ ಮಣೆಗಾರ ಆಡಳಿತೆಯು ನಡೆಯುತ್ತಿತ್ತೆಂದೂ ಆ ಮೇಲೆ ದೇವಳವು ದೇವಸ್ಥಾನದ ಕಮಿಟಿ ಮೆಂಬರರಿಂದ ನೇಮಿಸಲ್ಪಟ್ಟ ಆಡಳಿತೆದಾರರಿಂದ ನಡೆಯುತ್ತಿತ್ತೆಂದೂ ತಿಳಿಸಿದ್ದಾರೆ. ವಾದಿಯಾದ ಸ್ವಾಮಿಗಳು ಬರೇ ದೇವಳದಲ್ಲಿ 1828 ಇಸವಿಯ ಜಿಲ್ಲಾ ಕಲೆಕ್ಟರರ ಹುಕುಂ ಪ್ರಕಾರ ಅಷ್ಟೋತ್ತರ ಮತ್ತು ಮೂಲ ಮಂತ್ರವನ್ನು ಪಾರಾಯಣ ಮಾಡಿ ಅದಕ್ಕೆ ಸಿಕ್ಕುವ ಪಡಿ ಅಕ್ಕಿಯನ್ನು ತೆಗೆದುಕೊಂಡು ದೇವಳದ ಕಟ್ಟೋಣದ (ಪೇಳಿ)ಲ್ಲಿ ವಾಸಿಸುವ ಉಪಾಧಿವಂತರಾಗಿದ್ದರೆಂದೂ ವಿವರಿಸಿದ್ದಾರೆ. ಶ್ರೀ ಸಿ. ಗುರುರಾಜ ಭಟ್ಟ್ರು ಪ್ರಕಟಿಸಿದ ತುಳುನಾಡು ಪುಸ್ತಕದ ಪುಟ 118 ಮತ್ತು 119ರಲ್ಲಿ ಹೆಬ್ಬಾರರ ವಿಚಾರದಲ್ಲಿ ಹೀಗೆ ವಿವರಿಸಿರುತ್ತಾರೆ.

"ಶ್ರೀ ಸುಬ್ರಹ್ಮಣ್ಯ ದೇವಸ್ಥಾನ ಸ್ಥಾನೀಕ ಹೆಬ್ಬಾರರ ಮೂಲಿವರ್ಗ ನಂಬ್ರ 3 ರಲ್ಲಿತ್ತು; ಅದು ಅನಂತರ ಪರಂಬೋಕು ಆದುದು....... ಈ ಸುಬ್ರಹ್ಮಣ್ಯದಲ್ಲಿ ಹೆಬ್ಬಾರರ ಅಧಿಕಾರ ಮತ್ತು ಮೋರೋಜರ ಅರ್ಚಕತನವಿತ್ತೆಂಬುದಕ್ಕೆ ದೇವಳದ ಸುತ್ತುಮುತ್ತಿನ ತೋಟಗಳಿಗೆ ಈಗಲೂ ಹೆಬ್ಬಾರ ತೋಟ ಮೋರೋಜ ಹಿತ್ಲು ಎಂಬ ಹೆಸರು ಇರುವುದು ಸಾಕ್ಷ್ಯವಾಗಿದೆ. ಈ ಮೋರೋಜ ಹಿತ್ತಿಲಲ್ಲಿ ಈಗಲೂ ಒಳ ದೇವರ ಕಾರ್ಯದವರಾದ ಸ್ಥಾನಿಕ ಈಶ್ವರಪ್ಪಯ್ಯನವರ ಮನೆ ಇರುವುದು. ಅವರಿಗೆ ಹಿಂದಿನಿಂದ ಇದ್ದ ಆಸ್ತಿಗೆ "ದೇವರ ಗದ್ದೆ" ಎಂಬ ಹೆಸರು ಇರುವುದು, ಈ ಸಂಗತಿಗಳಿಂದ ಅವರ ಮನೆತನದವರು ದೇವಳದ ಮೂಲ ಪುರುಷರಾಗಿದ್ದರೆಂದು ತಿಳಿದು ಬರುತ್ತದೆ. ಅದೂ ಅಲ್ಲದೆ ಅವರ ಹಿರಿಯರಾದ ರಾಮಪ್ಪ ಎಂಬವರು ಸ್ವಾಮಿಗಳ ಆಡಳಿತೆ ಬಂದ ನಂತರವೂ ಸಾಧಾರಣ 20 ವರ್ಷಗಳ ಕಾಲ ದೇವಳದಲ್ಲಿ ಮೇನೇಜರರಾಗಿದ್ದರು. ಇದನ್ನು ರುಜುಪಡಿಸಲೂ ದೇವಳದಲ್ಲಿ ಈಗ

ಉಪಯೋಗಿಸುತ್ತಿರುವ ಹಳೆಯ ತಾಮ್ರದ ಕಡಾಯಿ ಮತ್ತು ಹಂಡೆಗಳಲ್ಲಿ ರಾಮಪ್ಪ ಎಂಬ ಹೆಸರು ಇರುವುದನ್ನು ಕಾಣಬಹುದು. ಇವರ ನಂತರ ಎಂದರೆ ಕ್ರಿ.ಶ. 1882ರ ಅನಂತರದಲ್ಲಿ ಶಿವಳ್ಳಿಯವರಾದ ಬಾಗಲೋಡಿ ರಾಮಕೃಷ್ಣಯ್ಯನವರಿಗೆ ಈ ಅಧಿಕಾರವು ಬಂದುದು. ದೇವಳದ ತಾಮ್ರ ಶಾಸನ 3ರಲ್ಲಿ ಆ ದೇವಳದ ಧರ್ಮವನ್ನು ಸ್ಥಾನಿಕರು ನಡೆಸಿ ಬರುವುದು ಎಂತಲೂ ಇದೆ. ಅಂದರೆ ಈರ್ವರು ಹೆಬ್ಬಾರರು ಆರು ಉಪಾಧಿಗಳು ಇದನ್ನು ನಡೆಸಿಕೊಂಡು ಬರತಕ್ಕದ್ದು. ಈ ದೇವಳದ ಮುಖ್ಯ ಆಡಳಿತೆ ಸನದ್ ಮೊಕ್ತೇಸರರಾದ ಸ್ವಾಮಿಗಳಿಗೂ ಎರಡು ಜನ ಶಿವಳ್ಳಿ ಪೂಜೆಯವರಿಗೂ ಹೋದ ನಂತರ ಉಳಿದ ಆರು ಉಪಾಧಿಗಳು :- 1) ದೇವಳದ ಮಣೆಗಾರನಾಗಿ ಮುದ್ರೆ ಸರ ಧರಿಸಿ ದೇವಳದ ಲೆಕ್ಕ ಪತ್ರ ಇಡುವುದು. 2) ವಾರಕ್ಕೊಂದು ಸಲ ಗರ್ಭಗೃಹಕ್ಕೆ ಹೋಗಿ ಹುತ್ತದಿಂದ ಮೂಲ ಮೃತ್ತಿಕೆ ತೆಗೆಯುವುದು. 3) ಷಷ್ಠಿ ಉತ್ಸವದ ವೇಳೆ ಚಿನ್ನದ ಪಲ್ಲಕ್ಕಿ ನಾಲ್ಕು ಸಮಸ್ತರ ಮುಂದೆ ಪ್ರಾರ್ಥನೆ ಮಾಡಿ ಚಿನ್ನದ ಹಿಡಿಯುಳ್ಳ ಅಕ್ಷಯ ಪಟ್ಟಿಗೆ ಕುತ್ತುವುದು. 4) ದೇವಳದ ಮುಖ್ಯಸ್ಥನಾಗಿ ಭಕ್ತಾದಿಗಳಿಂದ ಕಾಣಿಕೆ, ಹರಕೆ ಸ್ವೀಕರಿಸಿ ಅದರ ಲೆಕ್ಕವಿಟ್ಟು ಪ್ರಸಾದ ಕೊಡುವುದು. 5) ಸರಕಾರಿ ನೌಕರರಿಗೆ ಮತ್ತು ಇತರ ಶ್ರೀಮಂತರಿಗೆ ಆಮಂತ್ರಣ ಕೊಟ್ಟು ಸತ್ಕರಿಸುವುದು. 6) ಎಂಟು ಜನ ಆಡಳಿತೆದಾರರಲ್ಲಿ ಖಾಲಿ ಬಿದ್ದ ಮೊಕ್ತೇಸರತನಕ್ಕೆ ಹೊಸ ಆಡಳಿತೆಯವರನ್ನು ನೇಮಿಸುವುದು - ಹೀಗೆ ಆರು ಉಪಾಧಿಗಳು.

ದೇವಳದಿಂದಲೇ ಪ್ರಕಟಿಸಲ್ಪಟ್ಟ ಕ್ಷೇತ್ರ ವರ್ಣನೆ ಪುಸ್ತಕಗಳಲ್ಲಿ ತಾಮ್ರ ಶಾಸನ 3ರ ಅಂತ್ಯದಲ್ಲಿ 'ಈ ಧರ್ಮವನ್ನು ಬಂಗರ ಒಡೆತನದಲ್ಲಿ ಅಲ್ಲಿಯ ಸ್ಥಾನಿಕರು ನಡೆಸಿಹರು' ಎಂದು ಇದೆ.

ಈ ಮೇಲೆ ವಿವರಿಸಿದ ದಾಖ್ಲೆಗಳಿಂದ ಈ ದೇವಸ್ಥಾನವು 1817ರ ಮೊದಲು ಸ್ಮಾರ್ತ ಸ್ಥಾನಿಕ ಹೆಬ್ಬಾರರ ಆಡಳಿತೆಯಲ್ಲಿತ್ತೆಂದು ಸ್ಪಷ್ಟವಾಗುತ್ತದೆ.

## ದೇವಳದ ಅರ್ಚಕರು
## ಮೊರೋಜರು ಮತ್ತು ಅಸ್ರಣ್ಣರು

ಮೋರೋಜ ಅಂದರೆ ಮೋರ=ಮ್ಯೆಯೂರ, ಓಜಜಾಚಾರ್ಯ ಅದರಂತೆಯೇ ನಟ್ಟೋಜ ಅಂದರೆ ಪ್ರತಿಷ್ಠಾಪನಾ ಆಚಾರ್ಯ ಎಂಬ ಹೆಸರು ಬಂದಂತಾಗಿದೆ - ಪುತ್ತೂರಿನ ನಟ್ಟೋಜಿ ಮನೆತನದವರು ಪೂರ್ವದಲ್ಲಿ ಪುತ್ತೂರು ಮಹಾಲಿಂಗೇಶ್ವರ ದೇವರ ಸ್ಥಾಪನ ಮತ್ತು ಅರ್ಚಕರಾಗಿದ್ದಾರೆಂದು ಸಾಧಾರಣ 1845ರ ನಂತರವೇ ಅದಕ್ಕೆ ಮಾಧ್ವ ವೈಷ್ಣವ ಅರ್ಚಕರು ಬಂದಿರ ಬಹುದೆಂದೂ ಪ್ರತೀತಿ ಇದೆ - ಅದರಂತೆಯ ಶ್ರೀ ಸುಬ್ರಹ್ಮಣ್ಯದಲ್ಲಿ ಬಳ್ಪದ ಮೊರೋಜರು ಶ್ರೀ ಸುಬ್ರಹ್ಮಣ್ಯೇಶ್ವರನ ಅರ್ಚಕರಾಗಿದ್ದರು. ಅದರಿಂದಲೇ ಮೊರೋಜ ಎಂಬ ಮನೆತನವು ಉಂಟಾಯಿತೆಂದು ತಿಳಿಯಬೇಕಾಗಿದೆ. ಈ ಮೊರೋಜರ ಮೂಲ ಸ್ಥಳ ಸುಬ್ರಹ್ಮಣ್ಯದೇವಸ್ಥಾನದಿಂದ ಸಾಧಾರಣ 9-10 ಮೈಲು ದೂರವಿರುವ ಬಳ್ಪ ಗ್ರಾಮದಲ್ಲಿದೆ. ಈ ಮನೆತನದವರಿಗೆ ಈಗಲೂ ಸಾಧಾರಣ 120 ರೂಪ್ಯಾ ತಸದೀಕು ಇರವು ಬಹಳ ಪುರಾತನವಾದ ದುರ್ಗಾ ಪರಮೇಶ್ವರೀ ದೇವಸ್ಥಾನದ ಅರ್ಚಕತನವು ಬಳ್ಪದಲ್ಲಿದೆ. ಇದು ಬಹಳ ಪುರಾತನ

ದೇವಾಲಯವೆಂದು ದೇವಾಲಯದ ಶಿಲಾ ಸ್ಥಂಭಗಳೂ ಗೋಪುರ ಮತ್ತು ಗರ್ಭಗೃಹದ ಮಾಡಿಗೆ ಮುಚ್ಚಿದ ದಪ್ಪವಾದ ಶಿಲಾ ಹಲಿಗೆಗಳ ದೃಶ್ಯದಿಂದ ವೇದ್ಯವಾಗುತ್ತದೆ. ಇವರ ಅರ್ಚಕತನವು ಶ್ರೀ ಸುಬ್ರಹ್ಮಣ್ಯದಲ್ಲಿ ಸಾಧಾರಣ 1820ರ ವರೆಗೆ ಇತ್ತೆಂದೂ ಆ ಮೇಲೆ ಮಾಧ್ವ ವೈಷ್ಣವರಾದ ಆಸ್ರಣ್ಣರ ಅರ್ಚಕತನವು ಕ್ರಮೇಣ ದೇವಳಕ್ಕೆ ಬಂತೆಂದು ತಿಳಿದು ಬರುತ್ತದೆ. 1845ರ ನಂತರ ಮಾಧ್ವ ಸ್ವಾಮಿಗಳ ಆಡಳಿತೆ ದೇವಳಕ್ಕೆ ಬಂದ ನಂತರ ಮೊರೋಜರು ತಮ್ಮ ಪೂರ್ಣ ಅರ್ಚಕತನವನ್ನು ಕಳಕೊಂಡರು. ಇವರು ಸ್ಮಾರ್ತರಾದ ಸ್ಥಾನಿಕ ಶಿವ ಬ್ರಾಹ್ಮಣರು.

ಈ ಕೆಳಗಿನ ಆಧಾರಗಳಿಂದ ಸ್ಥಾನಿಕ ಶಿವ ಬ್ರಾಹ್ಮಣರು ದೇವಳಗಳ ಆಡಳಿತೆ ಮತ್ತು ಅರ್ಚಕರಾಗಿ ಇದ್ದರೆಂದು ತಿಳಿದು ಬರುತ್ತದೆ.

Glossary-of judicial and Revenue terms and of useful words accuring in official documents-Releeting to the administration of the Government of British India "Page 490-col-till the helf of II volumn ಸ್ಥಾನಿಕ-one who holds or belongs to a place, one who holds an office, a place man a governor, or suparintendent of a District, the director or a manager of a temple, some-times held heridetary, a person who suparintendents the ceremonies, or officiates in a Temple an officating preist or Brahmin.

ಅದೂ ಅಲ್ಲದೆ 1858ರ ವರೆಗೆ ಕನ್ನಡ ಜಿಲ್ಲೆಯ ಹೆಚ್ಚಿನ ದೇವಾಲಯ ಗಳಲ್ಲಿ ಸ್ಮಾರ್ತರಾದ ಸ್ಥಾನಿಕರೇ ಅರ್ಚಕರಾಗಿದ್ದರೆಂಬುದಕ್ಕೆ ಆಧಾರವಾಗಿ 1832 ಮತ್ತು 1858ರಲ್ಲಿ ಪ್ರಕಟವಾದ ಕನ್ನಡದಿಂದ ಇಂಗ್ಲಿಷ್‌ಗೆ ಪರಿವರ್ತಿಸಲ್ಪಟ್ಟ ಡಿಕ್ಷನರಿಯಲ್ಲಿ (ಶಬ್ದಕೋಶ) ಬರೆದವರು Canarese and English Dictionary by me Rev. W. Reeve. Revised Corrected and abridged by Daniel Sanderson Vesleyan missionary printed Bangalore Wesleyan mission press. ಇದರಲ್ಲಿ ಸ್ಥಾನಿಕ ಎಂಬ ಪದಕ್ಕೆ ಪುಟ 26ರಲ್ಲಿ A Superintendent or Governor of a Place 1. A fixed worshipper in a temple or Local belonging to a place, situation ಎಂದು ಅರ್ಥ ಬರೆದದರಲ್ಲಿ ಸ್ಥಾನಿಕ ಎಂದರೆ ದೇವಸ್ಥಾನದ ಕಾಯಂ ಅರ್ಚಕರಾಗಿ ದ್ದರೆಂದು ಸ್ಪಷ್ಟವಾಗುತ್ತದೆ.

ಇಂಜಾಡಿಯಲ್ಲಿದ್ದ ಮಾಧ್ವ ಸ್ವಾಮಿಗಳ ಮಠವು ಸುಟ್ಟು ಹೋಯಿತೆಂ ತಲೂ ಅವರು ಬೇರೆ ಸ್ಥಾನ ತನಗೆ ಇಲ್ಲದೇ ಇದ್ದುದರಿಂದ ಆಗಿನ ದೇವಳದ ಆಡಳಿತೆದಾರರಾದ ಹೆಬ್ಬಾರರ ಒಪ್ಪಿಗೆ ಮೇರೆಗೆ ದೇವಳದ ಒಳ ಪೌಳಿಯ ಆಗ್ನೇಯ ಮೂಲೆಯಲ್ಲಿ ಇದ್ದುಕೊಂಡು ಸ್ವಾಮಿಗಳು ದೇವಳದಲ್ಲಿ ಉಪಾಧಿಗಳನ್ನು ನಡೆಸುವ ಉದ್ಯೋಗವನ್ನು ವಹಿಸಿಕೊಂಡರೆಂತಲೂ, ಇವರ ಅಪೇಕ್ಷೆ ಮೇರೆಗೆ ದೇವಳದಲ್ಲಿ ಪೂಜೆ ಕೆಲಸಗಳಿಗೆ ಸಹಕರಿಸಲು ಕೊಕ್ಕಡ ಮತ್ತು ನೇರೆಂಕಿ ಎಂಬ ಎರಡು ಮನೆಯ ಎರಡು ಜನ ಮಾಧ್ವ ಹುಡುಗರು ಇಲ್ಲಿ ಬಂದು ಸೇರಿಕೊಂಡರೆಂತಲೂ, ದೇವಳದ ಆಡಳಿತೆಯು 1817ರಲ್ಲಿ ಬಂದ ರೆಗ್ಯುಲೇಶನ್ ಆ್ಯಕ್ಟ್ ಪ್ರಕಾರ ಕಂಪೆನಿ ಸರಕಾರದ ವಶ ಬಂದ ನಂತರ ಮೊರೋಜರ ಪೂಜೆಯು ತಪ್ಪಿಹೋಗಿರಲೂಬಹುದೆಂದು ತಿಳಿದುಬರುತ್ತದೆ. 1801ರಿಂದ 1812ರ ವರೆಗೆ ಕಡುಮಾಧ್ವರಾದ ಮೈಸೂರು ದಿವಾನ್ ಪೂರ್ಣಯನ ಬೆಂಬಲದಿಂದ ಇಲ್ಲಿಯ ಮಾಧ್ವ ಸ್ವಾಮಿಗಳು ಪ್ರಾಬಲ್ಯವನ್ನು ಹೊಂದಿದುರಿಂದ ಹೆಬ್ಬಾರರು ಸ್ವಲ್ಪ ಅವರಿಗೆ ಮರ್ಯಾದೆ

ಕೊಟ್ಟದ್ದು ಕಡೆಗೆ ಹೆಬ್ಬಾರರ ಅಧಿಕಾರಕ್ಕೆ ಅದು ಪಿನಾತವನ್ನು ತಂದೊಡ್ಡಿತು-ಮೊರೋಜರೂ ತಮ್ಮ ಪೂಜೆಯನ್ನು ಕೂಡ ಬಿಡುವ ಪ್ರಸಂಗ ಬಂತು.

ಸಾಧಾರಣ 1820ರಲ್ಲಿ ಆಗಿನ ಮಾಧ್ವ ಸ್ವಾಮಿಗಳು ಹೆಬ್ಬಾರರಿಗೆ ಸಾಲಿಗ್ರಾಮಾದಿ ಹೆಚ್ಚಿನ ಮರ್ಯಾದೆಗಳನ್ನು ಕೊಟ್ಟು ಅವರನ್ನು ತನ್ನ ವಶಪಡಿಸಿ ಕೊಂಡು ದೇವಳದ ಅರ್ಚಕತನವನ್ನು ತಾವೇ ವಹಿಸಿಕೊಳ್ಳಬೇಕೆಂದು ಪ್ರಯತ್ನಿಸಿದ್ದರು. ಆದರೆ ಹೆಬ್ಬಾರರು ಒಪ್ಪಿದರೂ ಅರ್ಚಕರಾದ ಮೊರೋಜರು ಒಪ್ಪಲಿಲ್ಲ. ಅರ್ಚಕತನದ ವಿಷಯದಲ್ಲಿ ಸ್ವಾಮಿಗಳಿಗೂ ಮೊರೋಜರಿಗೂ ದೊಡ್ಡ ಹೊಡೆದಾಟವೇ ಆಗಿದೆಯೆಂದು ತಿಳಿದು ಬರುತ್ತದೆ. ಇದರಲ್ಲಿ ಸ್ವಾಮಿಗಳ ಕೈ ಮೊರ್ರೋಜರಲ್ಲಿ ಸಾಗದೇ ಇದ್ದುದರಿಂದ ಮೊರೋಜರ ಕುಟುಂಬಕ್ಕೆ ಮಾಟ ಛಿದ್ರ ಮಾಡಿಸಿದರೆಂದೂ ಅದರ ಭಯಕ್ಕೆ ಹೆದರಿದ ಮರೋಜರು ಪೂಜೆಯ ಹಕ್ಕನ್ನು ಸ್ವಾಮಿಗೆ ಕೊಡದೆ ಕೊಕ್ಕಡದಿಂದ ಬಂದ ನಾರಾಯಣ ಎಡಪಡಿತ್ತಾಯ ಎಂಬವರಿಗೆ ಬಳ್ಪದ ತನ್ನ ಪಾಲಿನ ಮನೆಯೊಂದನ್ನೂ ಕೊಟ್ಟು ಅದರೊಂದಿಗೆ ಶ್ರೀ ಸುಬ್ರಹ್ಮಣ್ಯೇಶ್ವರನ ಅರ್ಚಕತನವನ್ನು ಬಿಟ್ಟುಕೊಟ್ಟು ತಾವು ಮಡಿಕೇರಿಯ ಹುದುಕೇರಿನಾಡು ಎಂಬಲ್ಲಿಗೆ ಹೋದರೆಂದು ತಿಳಿದು ಬರುತ್ತದೆ. ಈ ಮೊರೋಜ ಮನೆತನಗಳಲ್ಲಿ ಒಂದು ಕುಟುಂಬದವರು ಈಗಲೂ ಬಳ್ಪದ ಸಾಧಾರಣ ನೂರ ಇಪ್ಪತ್ತು ರೂಪ್ಯಾ ತಸದೀಕು ಇರುವ ಬಹಳ ಪುರಾತನ ದುರ್ಗಾಪರಮೇಶ್ವರೀ ದೇವಸ್ಥಾನದ ಪೂಜೆ, ಆಡಳಿತೆಯನ್ನು ನಡೆಸುತ್ತಿದ್ದಾರೆ. ಸುಬ್ರಹ್ಮಣ್ಯದಲ್ಲಿ ಮೊರೋಜರು ಇದ್ದರೆಂಬುದಕ್ಕೆ ಅವರ ಹೆಸರಿನ ಮೊರೋಜ ಹಿತ್ತಿಲು ಎಂಬ ಸ್ಥಳವಿರುವುದು ದೃಷ್ಟಾಂತವಾಗಿದೆ. ಈಗ ಇದರಲ್ಲಿ ಅವರ ಮತದವರೇ ಆದ ಒಳದೇವ ಕಾರ್ಯದ ದೇವಗದ್ದೆ ಈಶ್ವರಪ್ಪಯ್ಯನವರ ಮಕ್ಕಳು ಇದ್ದಾರೆ.

ಸಾಧಾರಣ 1820ರ ನಂತರ ಅಸ್ರಣ್ಣರ ಅರ್ಚಕತನವು ಮೊರೋಜ ರೊಂದಿಗೆ ಆರಂಭವಾಗಿರಬೇಕೆಂದು ತಿಳಿದು ಬರುತ್ತದೆ. ಈ ಆಸ್ರಣ್ಣರುಗಳು ಸೋದೆ ಮಠದ ಶಿಷ್ಯರು. ಇವರು ಮಾಧ್ವ ವೈಷ್ಣವ ಬ್ರಾಹ್ಮಣರು. ಇವರು ತಮ್ಮ ಪೂಜಾ ಉದ್ಯೋಗಕ್ಕೆ ಆಸ್ರಣ್ಣ ಎಂಬ ಹೆಸರನ್ನು ಇಟ್ಟುಕೊಂಡರು. ಆಸ್ರಣ್ಣ ಅಂದರೆ ಆಸಾರಿ+ಅಣ್ಣ, ಇದು ಸಂಸ್ಕೃತ ಹೆಸರಲ್ಲ. ಇದು ತುಳುವಿನ ಹೆಸರಾಗಿದೆ.

ಶ್ರೀ ಸುಬ್ರಹ್ಮಣ್ಯ ದೇವಳದಲ್ಲಿ ಪೂಜಾ ಕರ್ತವ್ಯಗಳನ್ನು ಮಾಡಬೇಕಾದರೆ ಹೆಚ್ಚಿನ ಆಚಾರದಲ್ಲಿ ಇರಬೇಕಾಗಿದೆ. ಆದುದರಿಂದ ಹೊರಗಿನ ತುಳುವರು ಇವರನ್ನು ಆಚಾರವಂತರು ಎಂದು ಹೇಳುವ ಬದಲು 'ಆಸರರು' ಎಂದು ಪೇಳಿ ಅದಕ್ಕೆ 'ಅಣ್ಣೆರ್' ಎಂಬ ಪದವನ್ನು ಸೇರಿಸಿ ಆಸ್ರಣ್ಣರ್ ಎಂದು ಕರೆಯಲು ಆರಂಭಿಸಿದರು. ಅದೇ ಹಸರು ಇಲ್ಲಿಯ ಪೂಜೆ ಮತ್ತು ತಂತ್ರಿಗಳವರಿಗೆ ವಾಡಿಕೆಯಾಗಿ ನಿಂತಿತು.

ಈಗಿನ ತಂತ್ರಿ ಮತ್ತು ಅರ್ಚಕರಾದ ಆಸ್ರಣ್ಣರುಗಳು ಮಾಧ್ವ ಸ್ವಾಮಿಯ ಮತದವರೇ ಆದುದರಿಂದ ಮಹಾಗಣಪತಿ ಸ್ಥಾನಚ್ಯುತಿ ಸಮಯದಲ್ಲಿ ಅವರಿಗೆ ಸಹಕರಿಸಿದರೆಂದು ತಿಳಿಯಬಹುದಾಗಿದೆ. ಇವರಿಗೆ ಶೈವಾಗಮ ಪದ್ಧತಿ ತಿಳಿಯದೇ ಇರುವುದರಿಂದಲೂ, ಇವರು ಮಾಧ್ವ ವೈಷ್ಣವರಾಗಿ ಇರುವುದರಿಂದಲೂ ಸುಬ್ರಹ್ಮಣ್ಯೇಶ್ವರನ ಹತ್ತಿರ ಸಾಲಿಗ್ರಾಮಗಳನ್ನು ಇಟ್ಟು ಅದರ ಪೂಜೆಯೊಂದಿಗೆ ಶ್ರೀ ಸುಬ್ರಹ್ಮಣ್ಯೇಶ್ವರನಿಗೆ ಪೂಜೆ ಮಾಡುವ ಕ್ರಮವಾಗಿದೆ. ಇಲ್ಲಿ ಪೂಜಾ ಕಾಲದಲ್ಲಿ ಮಂತ್ರೋಚ್ಚಾರಣೆ ತೀರಾ ಕಮ್ಮಿ. ಇಲ್ಲಿ ಶಂಖ ತೀರ್ಥ ಪ್ರೋಕ್ಷಣೆಯು ವೈಷ್ಣವ

ಸಂಪ್ರದಾಯವನ್ನು ಅನುಸರಿಸಲಾಗಿದೆ. ಇವರು ಸುಬ್ರಹ್ಮಣ್ಯೇಶ್ವರನಿಗೆ ಬಿಲ್ವ, ವಿಭೂತಿಗಳನ್ನು ಉಪಯೋಗಿಸುವುದಿಲ್ಲ. ಅವರಲ್ಲಿ ಪೂಜಾ ಕ್ರಮಗಳನ್ನು ಕೇಳಿದರೆ ಇಲ್ಲಿ ಮೌನ ಪೂಜೆಯೆಂದು ಹೇಳಿ ತಪ್ಪಿಸಿಕೊಳ್ಳುತ್ತಾರೆ. ಈ ದೇವಳ ದಲ್ಲಿಯೆ ಪೂಜೆ ಮಾಡುವವರು. ಬ್ರಹ್ಮಚಾರಿ ವ್ರತದಿಂದ ಇದ್ದು ದೇವಸ್ಥಾನ ದಲ್ಲಿಯೇ ಇರಬೇಕು. ಅವರ ಪತ್ನಿಯವರನ್ನು ಕ್ಷೇತ್ರಕ್ಕೆ ಕರಕೊಂಡು ಬರಬಾರದು. ಈ ಪದ್ಧತಿಯನ್ನು ಈ ಅಸ್ರಣ್ಣರುಗಳು ನಡೆಸಿಕೊಂಡು ಬರುತ್ತಾರೆ. ಇದರಲ್ಲಿ ಅರ್ಥವಾಗುತ್ತದೆ ಏನೆಂದರೆ ಪೂರ್ವದಲ್ಲಿ ಬ್ರಹ್ಮಚಾರಿಗಳೇ ಪೂಜೆ ಮಾಡುತ್ತಿದ್ದ ರೆಂದು ಊಹಿಸಬೇಕಾಗುತ್ತದೆ. ಈ ದೇವಳದಲ್ಲಿ ಬ್ರಹ್ಮಚಾರಿಗಳ ಪೂಜೆ ಎಂಬ ವಿಷಯವನ್ನು O.S. 27 of 1886 ವ್ಯಾಜ್ಯದಲ್ಲಿ ಹೇಳಿಕೆ ಕೊಟ್ಟ ವ್ಯಾಸತೀರ್ಥ ಸ್ವಾಮಿಯವರ ಮಾತಿನಿಂದ ತಿಳಿಯಬಹುದಾಗಿದೆ.

## ದೇವಳದ ಆಡಳಿತೆ

ಈ ದೇವಸ್ಥಾನವು ಹಿಂದಿನ ಕಾಲದಲ್ಲಿ ವಿಜಯನಗರದ ಆಳ್ವಿಕೆಗೆ ಸೇರಿತ್ತು. ವಿಜಯನಗರವು ಬಿದ್ದು ಹೋದೊಡನೆ ಇಲ್ಲಿಯ ಆಳ್ವಿಕೆಯು ಬಂಗರ ಒಡೆತನಕ್ಕೆ ಸೇರಿ ಬಲ್ಲಾಳರಾಯನೆಂಬವನ ಆಳ್ವಿಕೆಯಲ್ಲಿ ಇತ್ತೆಂದು ತಿಳಿದು ಬರುತ್ತದೆ. ಆಗ ಇಲ್ಲಿಯ ಆಡಳಿತೆಯು ಊರಿನ ಸ್ಮಾರ್ತ ಸ್ಥಾನಿಕಶಿವ ಬ್ರಾಹ್ಮಣ ರಾದ ಹೆಬ್ಬಾರರ ಸ್ವಾಧೀನವಿತ್ತು. ಇವರು ಊರಿನ ಗೌಡರನ್ನು ಇತರ ಗಣ್ಯ ವ್ಯಕ್ತಿಗಳನ್ನು ಸೇರಿಸಿಕೊಂಡು ದೇವತಾ ವಿನಿಯೋಗಾದಿಗಳನ್ನು ನಡೆಸಿಕೊಂಡು ಬರುತ್ತಿದ್ದರೆಂದು O.S 27 of 1886 ವ್ಯಾಜ್ಯದ ಜಜ್‌ಮೆಂಟ್, ತಾಮ್ರ ಶಾಸನ ಅಲ್ಲಿರುವ ಸನ್ನಿವೇಶಗಳು, ಪದ್ಧತಿಗಳು ಇತ್ಯಾದಿಗಳಿಂದ ವ್ಯಕ್ತವಾಗುತ್ತದೆ.

ಕನ್ನಡ ಜಿಲ್ಲೆಯು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟ ನಂತರ, ಅಂದರೆ ಕಂಪನಿ ಸರ್ಕಾರವು ಅಧಿಕಾರದಲ್ಲಿರುವಾಗ 1817ರಲ್ಲಿ ಪಾಸಾದ ರೆಗ್ಯುಲೇಶನ್ ಆ್ಯಕ್ಟ್ ಪ್ರಕಾರ ದೇವಸ್ಥಾನಗಳ ಆಡಳಿತೆಯ ಮೇಲ್ವನಿಕೆ ಹಕ್ಕು ಸರಕಾರಕ್ಕೆ ಸೇರಿತು. ಅವರು ಅವುಗಳ ಆಡಳಿತೆಗೆ ಮೇನೇಜರ್ ವಾ ಮಣೆಗಾರ ಅಥವಾ ಮುತ್ಸದ್ದಿ ಎಂಬವರನ್ನು ನೇಮಕ ಮಾಡಿ ದೇವಳದ ಲೆಕ್ಕಪತ್ರಗಳನ್ನು ತಹಶೀಲ್ದಾರರ ಮುಖಾಂತ್ರ ತನಿಖೆ ನಡೆಸುತ್ತಾ ಆಡಳಿತೆಯನ್ನು ಸಾಧಾರಣ 1843ರ ವರೆಗೆ ನಡೆಸಿಕೊಂಡು ಬಂದರು. ಸಾಧಾರಣ 1843ರ ವರೆಗೆ ವೆಂಕಟದಾಸಪ್ಪ ಎಂಬವರು ಅಲ್ಲಿಯ ಮಣೆಗಾರರಾಗಿ ಕೆಲಸ ಮಾಡುತ್ತಿದ್ದರು. ಇವರೂ ಸ್ಥಾನಿಕ ಸ್ಮಾರ್ತ ಬ್ರಾಹ್ಮಣರೇ ಆಗಿದ್ದರು. 1843ರ ನಂತರ ಮುಂಚಿನ ಹಕ್ಕುಗಳನ್ನು ಪರಿಶೀಲಿಸಿ ನ್ಯಾಯವಾದ ಹಕ್ಕುದಾರರಾದ ಹೆಬ್ಬಾರರಿಗೆ ಪುನಃ ಮೊಕ್ತೇಸರರನ್ನಾಗಿ ಸರ್ಕಾರವು ಮಾಡಿತು. ಅದರಲ್ಲಿ ಪ್ರಥಮ ಮೊಕ್ತೇಸರರಾಗಿದ್ದವರು. ಹೆಬ್ಬಾರ ನಾರ್ಣಪ್ಪ ಹೆಬ್ಬಾರ ನಾರಾಯಣ, ಪಾತಾಳಿ ರಾಮಪ್ಪ, ಕೃಷ್ಣಾಚಾರ್ಯ, ಹೆಬ್ಬಾರ ಗುಂಡ ಎಂಬವರು.

ಹೆಬ್ಬಾರರೂ ಅವರ ಸಮಾಜದವರು 1838ರಿಂದ ಆರಂಭವಾದ ಕಲ್ಯಾಣಪ್ಪನ ಸ್ವಾತಂತ್ರ ಸಮರದಲ್ಲಿ ಬ್ರಿಟಿಷ್ ವಿರೋಧವಾಗಿ ಸಹಕರಿಸಿದರೆಂಬ ಕಾರಣದಿಂದ ಸರ್ಕಾರವು ಹೆಬ್ಬಾರರಿಗೆ ವಿರೋಧ ನಿಂತು 1845ರಿಂದ ಮಾಧ್ವ ಸ್ವಾಮಿಗಳಿಗೆ ಸನದು ಪ್ರಕಾರ ಆಡಳಿತೆಯನ್ನು ಕೊಟ್ಟಿತು.

ಆ ಮಾಧ್ವರ ಆಡಳಿತೆ ವಿಚಾರ ಪುಟ ಸಂಖ್ಯೆ 71ರಿಂದ 94ರ ವರೆಗಿನ "ಸುಬ್ರಹ್ಮಣ್ಯ ಮಠದ ಮಾಧ್ವ ವೈಷ್ಣವ ಸ್ವಾಮಿಗಳು ಇವರಿಂದ ದೇವಳಕ್ಕೆ ಒದಗಿದ ಲೋಪದೋಷಗಳು" ಎಂಬ ಅಂಶದಲ್ಲಿ ಓದಬಹುದು.

ಈ ಸ್ವಾಮಿಗಳ ಆಡಳಿತೆ ಕಾಲದಲ್ಲಿ ಈ ದೇವಳಕ್ಕೆ ತುಂಬ ನಷ್ಟ ಸಂಭವಿಸಿವೆ. ಆಗ ನಡೆದ ಕೆಲವು ಮುಖ್ಯ ವ್ಯಾಜ್ಯಗಳು : .C.C. No. 7 of 1898, C.C. No. 126 of 1899, C.C. No. 127 of 1900, Cal Case No. 96/1902, O.S. 74/1903, O.S. 130/1902, O.S. 145 of 1913, O.S. No. 332/1922 ಇತ್ಯಾದಿ.

1927ರಲ್ಲಿ ದೇವಳದ ಆಡಳಿತೆ ವಿಚಾರದಲ್ಲಿ ಎಂಡೋಮೆಂಟಿನವರು ಪ್ರವೇಶಿಸಿ ದೇವಳದ ಆಡಳಿತೆಯನ್ನು ಬಿಟ್ಟುಕೊಟ್ಟರು. ಪ್ರಥಮ ಧರ್ಮದರ್ಶಿಗಳಲ್ಲಿ ಹೆಚ್ಚಿನವರು ಮಾಧ್ವ ವೈಷ್ಣವರೇ ಆಗಿದ್ದುದರಿಂದ ದೇವಳದಲ್ಲಿ ನಡೆಯುತ್ತಿರುವ ಲೋಪದೋಷಗಳು ಹೊರಬೀಳುತ್ತಿರಲಿಲ್ಲ. 1930ನೇ ಇಸವಿಯಲ್ಲಿ ಮೊಕ್ತೇಸರಿಕೆಗೆ ಬ್ರಾಹ್ಮಣೇತರರನ್ನು ನೇಮಿಸಬೇಕೆಂಬ ಚಳವಳದಲ್ಲಿ O.S. No. 1 of 1930ನೇ ವ್ಯಾಜ್ಯದ ಮತ್ತು ಅದರ ಮೇಲೆ ಹೈಕೋರ್ಟು ಅಪೀಲ್ 394/1937 ತೀರ್ಪು ಪ್ರಕಾರ ಎರಡು ಸ್ಥಾನಗಳನ್ನು ದ್ರಾವಿಡ ಬ್ರಾಹ್ಮಣ ಪಂಗಡಗಳಿಗೆ ಕಾದಿರಿಸಿ ಉಳಿದ ಮೂರು ಸ್ಥಾನಗಳಿಗೆ ಬ್ರಾಹ್ಮಣೇತರ ಹಿಂದುಗಳನ್ನು ನೇಮಿಸಬೇಕೆಂದು ಸ್ಕೀಮ್ ತಯಾರಿಸುವಂತೆ ಆಯಿತು. ಹಾಗೆ ಕಾದಿರಿಸಿದ ಸ್ಥಾನಗಳೆರಡಕ್ಕೆ ದೇವಸ್ಥಾನದ ಎಲ್ಲಾ ಭಾಗಗಳಿಗೆ ದೇವಳದ ಪದ್ಧತಿ ಪ್ರಕಾರ ಗರ್ಭಗೃಹದ ವರೆಗೆ ಒಳಪ್ರವೇಶಿಸುವ ಹಕ್ಕು ಉಳ್ಳ ಬ್ರಾಹ್ಮಣ ಪಂಗಡದವರನ್ನೇ ನೇಮಿಸಬೇಕೆಂದು ಜಜ್‌ಮೆಂಟಿನಲ್ಲಿ ಸ್ಪಷ್ಟಪಡಿಸಿದ್ದರೂ ಸ್ಕೀಮ್‌ನಲ್ಲಿ ಇದನ್ನು ಸರಿಯಾಗಿ ಕಾಣಿಸದೇ ಇದ್ದುದರಿಂದ ಬ್ರಾಹ್ಮಣ ಪಂಗಡದಲ್ಲಿ ಯಾರಾದರೂ ಇಬ್ಬರು ನೇಮಿಸಲ್ಪಡುತ್ತಿದ್ದರು. ಆ ಪ್ರಕಾರ ಹಕ್ಕುಬಾಧ್ಯತೆ ಇರುವ ಪಂಗಡಗಳು ಬಂದ ಸ್ಮಾರ್ತ ಬ್ರಾಹ್ಮಣರಲ್ಲಿ ಸ್ಥಾನಿಕ ಶಿವ ಬ್ರಾಹ್ಮಣ ಪಂಗಡ ಮತ್ತು ಮಾಧ್ವರಲ್ಲಿ ಶಿವಳ್ಳಿ ಬ್ರಾಹ್ಮಣ ಪಂಗಡ. ದೇವಳವು ಶೈವ ಸಂಬಂಧಪಟ್ಟದ್ದಾಗಿರುವುದರಿಂದ ಅದರ ಹಿತಚಿಂತಕರಾದ ಸ್ಮಾರ್ತರಾದ ಸ್ಥಾನಿಕ ಶಿವ ಬ್ರಾಹ್ಮಣ ವರ್ಗಕ್ಕೇನೇ ಕಾದಿಟ್ಟ ಸ್ಥಾನಗಳು ಸಿಕ್ಕಬೇಕಿತ್ತು. ಹಾಗೆ ನೇಮಿಸಲ್ಪಡದೇ ಇದ್ದುದರಿಂದ 1953ರ ವರೆಗೆ ಈ ದೇವಳದಲ್ಲಿ ಕಾದಿಟ್ಟ ಸ್ಥಾನಗಳಿಗೆ ಮಾಧ್ವ ಶಿವಳ್ಳಿ ಬ್ರಾಹ್ಮಣರೇ ಆಡಳಿತೆಗೆ ಬಂದು ಮುಖ್ಯ ಆಡಳಿತೆಗೆ ಅವರೇ ನೇಮಿಸಲ್ಪಟ್ಟದ್ದರಿಂದಲೂ, ಅದೂ ಅಲ್ಲದೆ ಹಾಗೆ ನೇಮಿಸಲ್ಪಟ್ಟವರು ಮಠದ ಮಾಧ್ವ ಸ್ವಾಮಿಗಳ ಮತದವರೇ ಆಗಿಯೂ ಸಂಬಂಧಿಕರಾಗಿಯೂ ಇದ್ದುದರಿಂದಲೂ ದೇವಳದಲ್ಲಿ ಅಡಗಿಸಿಡಲ್ಪಟ್ಟ ವಿನಾಯಕ ವಿಗ್ರಹದ ವಿಚಾರದಲ್ಲಿ ಮಾತೆತ್ತುವವರಿಲ್ಲದಂತಾಗಿ ಅದು ಗೂಢವಾಗಿಯೇ ಉಳಿಯಿತು.

O.S. No. 74/1923ನೇ ವ್ಯಾಜ್ಯದ ಪ್ರಕಾರದ ಸ್ಕೀಮನ್ನು ಅನುಸರಿಸಿ ನೇಮಿಸಲ್ಪಟ್ಟ ಮೊದಲಿನ ಧರ್ಮದರ್ಶಿಗಳು O.S.No.1 of 1931ನೇ ವ್ಯಾಜ್ಯದ A.S. No. 394/1931ರ ಅಪೀಲಿನ 1937ರ ಜಜ್‌ಮೆಂಟ್ ಪ್ರಕಾರ 1938ರಲ್ಲಿ ನೇಮಕ ಹೊಂದಿದವರೂ 1948ನೇ ಇಸವಿಯಲ್ಲಿ ನೇಮಕ ಹೊಂದಿದವರಲ್ಲೂ 1953ರ ವರೆಗೆ ಪದಚ್ಯುತಿ ಹೊಂದಿದ ವಿನಾಯಕ ವಿಗ್ರಹದ ವಿಷಯದಲ್ಲಿ ಮಾತೆತ್ತುವವನರಿಲ್ಲವಾಯಿತು. ಅಲ್ಲದೆ ಆಗಿನ ಮೆನೇಜರರು ಕೂಡಾ ವೈಷ್ಣವ ಮಾಧ್ವರಾಗಿದ್ದರು. ಇದರಿಂದಾಗಿ ಆ ವರೆಗೆ ದೇವಸ್ಥಾನದ ಒಳಗುಟ್ಟು ಹೊರಬರಲು

ಸಾಧ್ಯವಿಲ್ಲವಾಯಿತು.

1953ರ ವರೆಗಿನ ಆಡಳಿತ ಕಾಲದಲ್ಲಿ ದೇವಳ ಮಾಧ್ವರ ಕೈಯಲ್ಲಿ ಇರುವಾಗ ಉತ್ಪತ್ತಿ ಖರ್ಚು ಸರಿಸಮಾನವಾಗುತ್ತಿತ್ತು, ಚಂಪಾಷಷ್ಠಿ ಮಹೋತ್ಸವದ ಬಾರಾಹಜಾರ್ ಸಂತರ್ಪಣೆ ಖರ್ಚು ಮೈಸೂರಿನಿಂದ ಬರುತ್ತಿದ್ದರೂ ಹೆಚ್ಚಿನ ಉಳಿತಾಯವಿರಲಿಲ್ಲ.

1938ರಲ್ಲಿ ನೇಮಕ ಹೊಂದಿದ ಶ್ರೀ ಬಿ. ವೆಂಕಪ್ಪ ರೈಯವರ ಕಾಲದಲ್ಲಿ ದೇವಸ್ಥಾನದ ಒಳ ಅಂಗಣಕ್ಕೆ ಬ್ರಾಹ್ಮಣೇತರರು ಹೋಗಬಾರದು ಎಂದು ಇದ್ದುದನ್ನು ಬ್ರಾಹ್ಮಣೇತರರು ಸ್ನಾನ ಮಾಡಿ ಅಂಗಿ ತೆಗೆದು ಒಳ ಅಂಗಣಕ್ಕೆ ಹೋಗಬಹುದು ಎಂದು ಮಾಡಿದ್ದರು. 1943ರಲ್ಲಿ ಸ್ಮಾರ್ತ ಬ್ರಾಹ್ಮಣರಾದ ಬೆಳ್ತಂಗಡಿ ಮಂಗೇಶರಾಯರು ದೇವಳದ ಮುಖ್ಯ ಟ್ರಸ್ಟಿಗಳಾಗಿ ನೇಮಕಪಟ್ಟರೂ ಅವರಿಗೆ ಉಪದ್ರವ ಕೊಟ್ಟು ಅವರನ್ನು ರಾಜಿ ಕೊಡಿಸುವಂತೆ ಮಾಡಿದರು.

1953ನೇ ಇಸವಿಯಲ್ಲಿ ಈ ಮೊದಲಿನ ಸ್ಕೀಮಿನಂತೆ ಬ್ರಾಹ್ಮಣರ ಸ್ಥಾನಗಳೆರಡಕ್ಕೆ ಶ್ರೀ ಅಡಿಬಾಯಿ ಭೀಮ ಭಟ್ಟು ಮತ್ತು ಈ ಪುಸ್ತಕದ ಲೇಖಕರು ಬ್ರಾಹ್ಮಣೇತರ ಸ್ಥಾನಗಳಿಗೆ ಶ್ರೀ ಕೆ.ವಿ. ಗೌಡರೂ, ಶ್ರೀ ಬೆಳ್ಳಾರೆ ನಾರಾಯಣ ಶೇಕರೂ, ಮೈಸೂರು ಕಡೆಯಿಂದ ಶ್ರೀ ಬೋರಣ್ಣ ಗೌಡ ಎಂಬವರು ನೇಮಕ ಮಾಡಲ್ಪಟ್ಟರು. 1948ರಲ್ಲಿ ಎಂಡೋಮೆಂಟಿನವರು ಬ್ರಾಹ್ಮಣರಿಗಾಗಿ ಕಾದಿಟ್ಟ ಸ್ಥಾನಗಳನ್ನು ದೇವಳದ ಮೇನೇಜ್‌ಮೆಂಟಿಗೆ ಬ್ರಾಹ್ಮಣರೇ ಆಗಬೇಕೆಂದಿದ್ದ ವಿಷಯವನ್ನು ತೆಗೆದು ಹಾಕಿ ಸಾರ್ವತ್ರಿಕ ಹಿಂದುಗಳಲ್ಲಿ ಯಾರೂ ಆಗಬಹುದೆಂಬ ರೀತಿಯಲ್ಲಿ ದೇವಳದ ಸ್ಕೀಮ್ ತಿದ್ದುಪಡಿಗೆ ದಾಖ್ಲು ಮಾಡಿದ O.P. 84/1948ರ ಮೇಲೆ ಆದ ಮದ್ರಾಸ್ ಅಪೀಲ್ 582 of 1951ರ ಜಜ್‌ಮೆಂಟ್ 1953ರ ನವಂಬರದಲ್ಲಿ ಆಯಿತು. ಅದರಲ್ಲಿ ಬ್ರಾಹ್ಮಣರಿಗಾಗಿ ಕಾದಿಟ್ಟ ಸ್ಥಾನವು ಎರಡರಿಂದ ಒಂದಕ್ಕೆ ಇಳಿಸಲ್ಪಟ್ಟಿತು. ಕಾದಿಟ್ಟ ಸ್ಥಾನಕ್ಕೆ ಅದರಲ್ಲೂ ದೇವಳದ ಎಲ್ಲಾ ಭಾಗಗಳಿಗೆ ಪ್ರವೇಶಿಸುವ ಹಕ್ಕುಳ್ಳವರಲ್ಲಿ ದೇವಳದ ಹಿತದೃಷ್ಟಿಯಿಂದ ಯೋಗ್ಯರಾದವರನ್ನು ನೇಮಿಸಬೇಕೆಂದು ತಿಳಿಸಿದ್ದರೂ ಆ ವಿವರವನ್ನೇ ಸ್ಕೀಮ್‌ನಲ್ಲಿ ಸರಿಯಾಗಿ ವ್ಯಕ್ತಪಡಿಸದೇ ಇದ್ದುದರಿಂದ 1957ರ ನಂತರ ಪುನಃ ಮಾಧ್ವ ಟ್ರಸ್ಟಿಗಳ ನೇಮಕಕ್ಕೆ ಎಡೆಕೊಟ್ಟಿತು. ಮೆನೇಜರರ ಸ್ಥಾನವು ಬ್ರಾಹ್ಮಣರಿಗೆ ಎಂದು ಇದ್ದುದೂ ತೆಗೆದು ಹಾಕಲ್ಪಟ್ಟಿತು. ಹಾಗೆ ತೆಗೆದು ಹಾಕಲ್ಪಟ್ಟ ಪ್ರಕಾರ 1956ರಲ್ಲಿ ಸ್ಕೀಮ್ ತಿದ್ದುಪಡಿ ಆಯಿತು. ಆ ಪ್ರಕಾರ 1953ರಲ್ಲಿ ನೇಮಕ ಹೊಂದಿದ ಧರ್ಮದರ್ಶಿಗಳು 1957ರಲ್ಲ ಒಂದು ವರ್ಷ ಮುಂಚೆಯೇ ನಿವೃತ್ತ ರಾಗಬೇಕೇಯಿತು. ಈ ನಾಲ್ಕು ವರ್ಷಗಳಲ್ಲಿ ದೇವಸ್ಥಾನದಲ್ಲಿ ತುಂಬಾ ವಿಷಯ ಗಳು ಮಾರ್ಪಾಡಾದವು. ಈ ನಾಲ್ಕು ವರ್ಷಗಳ ಅವಧಿಯಲ್ಲಿ ಮಾಧ್ವ ವೈಷ್ಣವ ಟ್ರಸ್ಟಿಗಳಿಲ್ಲದೇ ಇದ್ದುದರಿಂದ ದೇವಳದ ಟ್ರೆಜರಿಯಲ್ಲಿ ಉಪಯೋಗವಿಲ್ಲದೆ ಬಿದ್ದಿದ್ದ ಮಹಾಗಣಪತಿ ದೇವರ ಚಿನ್ನದ ಕವಚದ ವಿಚಾರ ಪ್ರಸ್ತಾಪ ಒಂದು ಅದಕ್ಕೆ ಸಂಬಂಧಿಸಿದೆ. ದೇವಳದಲ್ಲಿ ಅಡಗಿಸಲ್ಪಟ್ಟ ಮಹಾಗಣಪತಿ ವಿಗ್ರಹದ ವಿಚಾರವು ಸ್ವಲ್ಪ ಮಟ್ಟಿಗೆ ಹೊರಬಿತ್ತು. ಅದಲ್ಲದೆ 1954 ಮತ್ತು 1955ರಲ್ಲಿ ದೇವಳದಲ್ಲಿ ಅಕ್ಕಿ, ಬೆಲ್ಲ ವಗೈರೆ ಸಾಮಾನುಗಳನ್ನು ದುರುಪಯೋಗಪಡಿಸಿದ ವಿಚಾರದಲ್ಲಿ ತನಿಖೆ ನಡೆದಾಗ ಆಗಿನ ಮಾಧ್ವ ವೈಷ್ಣವ ಮೆನೇಜರು ತಮ್ಮ ಉದ್ಯೋಗಕ್ಕೆ ರಾಜಿಕೊಟ್ಟು ಹೋಗಬೇಕಾಯಿತು. ಇವರ ನಂತರ ಬ್ರಾಹ್ಮಣೇತರ ರಾದ ಶ್ರೀ ಸೋಮಪ್ಪ ರಿಟಾಯರ್ಡ್ ಸಬ್ ರಿಜಿಸ್ಟ್ರಾರ್, ಸಾಧಾರಣ ಒಂದು ತಿಂಗಳು ಇದ್ದು ಅವರು ಬಿಟ್ಟುಹೋದರೂ ಆಮೇಲೆ ಅದೇ 1955ರಲ್ಲಿ ಮತ್ತೊಬ್ಬ ರಿಟಾಯರ್ಡ್

ಸಬ್ ರಿಜಿಸ್ಟ್ರಾರರಾದ ಶ್ರೀ ಯು. ಲಕ್ಷ್ಮಣ ನಾಯಕ ರೆಂಬವರು ಮೆನೇಜರರಾಗಿ ನೇಮಕ ಹೊಂದಿದರು. ಇವರು ದೇವಳದಲ್ಲಿ ಕೆಲವು ವರ್ಷ ಉತ್ಸಾಹದಿಂದ ಕೆಲಸ ಮಾಡಿರುತ್ತಾರೆ. ಈ ಮಧ್ಯೆ ಒಂದು ತಿಂಗಳು ದೇವಳದ ಮುಖ್ಯ ಗುಮಾಸ್ತರಾದ ಮೆನೇಜರರಾಗಿ ಶ್ರೀ ಕೆ. ನರಸಿಂಹ ಶರ್ಮರು ತಾತ್ಕಾಲಿಕವಾಗಿ ಕೆಲಸ ಮಾಡಿದ್ದರು. ಇವರು ಸ್ಮಾರ್ತ ಶಿವ ಬ್ರಾಹ್ಮಣರು.

ಅಡಗಿಸಿ ಇರಿಸಲ್ಪಟ್ಟ ಮಹಾ ಗಣಪತಿ ವಿಗ್ರಹದ ಪ್ರತಿಷ್ಠಾ ವಿಚಾರದಲ್ಲಿ ಟ್ರಸ್ಟಿ ಎಂ.ಎಸ್.ಎ. ಶರ್ಮರು ತಂದ ನಿರ್ಣಯವನ್ನು ಇತರರು ಅಂಗೀಕರಿಸಿ ಆ ವಿಗ್ರಹದ ವಿಚಾರ ಚಾರಿತ್ರಿಕ ಹಿನ್ನೆಲೆಯನ್ನು ಸಂಶೋಧಿಸಿ ರಿಪೋರ್ಟು ಮಾಡುವಂತೆ ತಾ. 9-12-1955ನೇ ಮೀಟಿಂಗ್‌ನಲ್ಲಿ ನಿರ್ಣಯ ನಂಬ್ರ 456-39(7)ರ ಪ್ರಕಾರ ನಿರ್ಣಯವನ್ನು ತಂದ ಶ್ರೀ ಶರ್ಮರನ್ನೇ ಅಧಿಕರಿಸಿದರು. ಆ ಪ್ರಕಾರ ರಿಪೋರ್ಟು ಮಾಡಲ್ಪಟ್ಟು ಅದರ ನಕಲುಗಳು ಎಂಡೋಮೆಂಟಿಗೆ ಕಳುಹಿಸಲ್ಪಟ್ಟಿತು.

ಈ ಸಂದರ್ಭದಲ್ಲಿ ದೇವಳದ ತೆಂಕು ಪೌಳಿಯ ಸ್ವಲ್ಪ ಅಂಶವು ಮಾಧ್ವ ಮಠದ ಸ್ವಾಮಿಗಳಿಂದ ಆಕ್ರಮಿಸಲ್ಪಟ್ಟಿದ್ದರಿಂದ ದೇವಳಕ್ಕೂ ಮಠಕ್ಕೂ ವಿವಾದ ಏರ್ಪಟ್ಟು ಅನೇಕ ವರ್ಷಗಳಿಂದ ರಿಪೇರಿ ಇಲ್ಲದೆ ಬಿದ್ದದ್ದನ್ನು ಆಗಿನ ಟ್ರಸ್ಟಿಗಳು ಮಠದ ಸ್ವಾಮಿಗಳ ಒಪ್ಪಿಗೆ ಪಡೆದು ಸಾಧಾರಣ ಅರುವತ್ತು ಸಾವಿರ ರೂಪ್ಯಾ ಖರ್ಚಿನಿಂದ ಕಟ್ಟಿಸಿದರು. ಮಠದ ಸ್ವಾಮಿಗಳು ಹಾಗೆ ಕಟ್ಟಿಸಿದ ಅವರು ಆಕ್ರಮಿಸಿದ ಪೌಳಿಯ ಮಾಳಿಗೆ ಕೂಡ ಅವರಿಗೆ ಸಿಕ್ಕಬೇಕೆಂಬ ದುರಾಕಾಂಕ್ಷೆಯಿಂದ ದೇವಳದ ಮೇಲೆ ದಾವೆ ಮಾಡಿದರು. ಇದರ ಪೂರ್ಣ ವಿವರಗಳನ್ನು "ಶ್ರೀ ಸುಬ್ರಹ್ಮಣ್ಯ ಮಠ ಅದರ ಮಾಧ್ವ ವೈಷ್ಣವ ಸ್ವಾಮಿಗಳು ಇದರಿಂದಾಗಿ ದೇವಳಕ್ಕೆ ಒದಗಿದ ಲೋಪದೋಷಗಳು" ಎಂಬ ಶೀರ್ಷಿಕೆಯಲ್ಲಿ ವಿವರಿಸಿದ್ದನ್ನು ಓದಬಹುದು.

ಮೇಲಿನ ಟ್ರಸ್ಟಿಗಳಲ್ಲಿ ಮಾಧ್ವ ವೈಷ್ಣವರು ಇಲ್ಲದೇ ಇದ್ದುದರಿಂದ ಆಗಿನ ಮಾಧ್ವ ವೈಷ್ಣವ ಮೆನೇಜರುಗಳು ಸ್ಥಳೀಯ ಸ್ಮಾರ್ತ ವರ್ಗದ ಶ್ರೀ ಯಂ.ಎಸ್.ಎ. ಶರ್ಮರಿಗೂ ಮೊದಲು ಶ್ರೀ ವಕೀಲ್ ಬೆಳ್ತಂಗಡಿ ಮಂಗೇಶರಾಯರಿಗೆ ಹಿಂಸೆ ಕೊಟ್ಟಂತೆ ಹಿಂಸಿಸತೊಡಗಿದರು. ಮೊದಲು ಅವರ ನೇಮಕದ ವಿರುದ್ಧ ಮುಂಚಿನ ಟ್ರಸ್ಟಿಗಳಾಗಿದ್ದ ಶ್ರೀ ಪುಲ್ಲಕ್ಕ ಸುಬ್ರಾಯರೆಂಬವರಿಂದ ಅರ್ಜಿಯೊಂದನ್ನು ಸರಕಾರಕ್ಕೆ ಹಾಕಿಸಿದರು. ಅದು ಪ್ರಯೋಜನವಾಗಲಿಲ್ಲ. ಆಮೇಲೆ ಸ್ಮಾರ್ತರಾದ ಅವರ ಮತದವರನ್ನೂ, ದೇಶಸ್ಥರನ್ನೂ, ಕರ್ನಾಟಕ ಬ್ರಾಹ್ಮಣರನ್ನೂ ದೇವಳದಲ್ಲಿ ಇಲ್ಲದ ಹೊಸ ಪದ್ಧತಿಯೆಂದು ಮಾಡಿಕೊಂಡು ದೇವಸ್ಥಾನದ ಸಮಾರಾಧನೆ ವೇಳೆ ಊಟದಿಂದ ಎಬ್ಬಿಸಿ ಅವಮಾನಪಡಿಸಿದರು. ಈ ವಿಷಯಗಳು ಎಂಡೋ ಮೆಂಟ್ ಕಮಿಶನ್‌ರ ವರೆಗೂ ತಿಳಿಸಲ್ಪಟ್ಟು ಅವರ ಆದೇಶದ ಮೇರೆಗೆ 1956ನೇ ಷಷ್ಠಿ ಮಹೋತ್ಸವದ ಸಮಯದಲ್ಲಿ ಮುಂಚಿನಂತೆ ಬ್ರಾಹ್ಮಣರೊಳಗೆ ಮತ ಭೇದವಿಲ್ಲದೆ ಸಂತರ್ಪಣೆ ನಡೆಯಿತು. ಈ ವಿಷಯದಲ್ಲಿ 20-7-1955ರಲ್ಲಿ ಜರಗಿದ ಮೀಟಿಂಗಿನಲ್ಲಿ ನಿರ್ಣಯ ನಂಬ್ರ 346(2) ನಿರ್ಣಯ ಪ್ರಕಾರ "ದೇವಳದಲ್ಲಿ ಎಂದಿನಂತೆ ಜಾತಿ ಭೇದವಿಲ್ಲದೆ ಸಂತರ್ಪಣೆ ನಡೆಯತಕ್ಕದ್ದೆಂದು" ನಿರ್ಣಯಿಸಲ್ಪಟ್ಟಿದೆ.

ಮೇಲಿನ ನಾಲ್ಕು ವರ್ಷಗಳಲ್ಲಿ ನಡೆದ ಕೆಲವು ಮುಖ್ಯ ಘಟನೆಗಳು ಕೆಳಗೆ ವಿವರಿಸಲ್ಪಟ್ಟಿವೆ.

1. ಶ್ರೀ ಸುಬ್ರಹ್ಮಣ್ಯೇಶ್ವರನ ಮೇಲೆ ಇರಿಸಲ್ಪಟ್ಟ ಸಾಧಾರಣ ಆಗ 237 ಕ್ರಯ ಬಾಳುವ

ಚಿನ್ನದ ಪದಕವು ಕಾಣೆಯಾದದನ್ನು ಡಿಪ್ಟಿ ಕಮಿಶನರ ಮೆಮೊ ನಂಬ್ರ A 3/160 83/54 dated 29-10-'54ರ ಪ್ರಕಾರ ದೇವಳದ ಅರ್ಚಕ ಶ್ರೀ ವಾಸುದೇವ ಆಸ್ರಣ್ಣರಿಂದ ತಾ. 22-11-'54ರ ಮೀಟಿಂಗಿನ ನಿರ್ಣಯ ನಂಬ್ರ 152(7) ಪ್ರಕಾರ ವಸೂಲು ಮಾಡಲಾಯಿತು.

2. ಮೆನೇಜರ್ ಶ್ರೀ ರಾಘವೇಂದ್ರ ರಾಯರು ಪಾರುಪತ್ಯಗಾರ ಶ್ರೀ ವ್ಯಾಸರಾಯರು 17-4-1955ರಂದು ಸ್ಟಾಕ್ ಚೆಕ್ ಮಾಡಲ್ಪಟ್ಟು ಅದರಲ್ಲಿ ದುರುಪಯೋಗ ಮಾಡಲ್ಪಟ್ಟದ್ದು ಕಂಡುಬಂದುದರಿಂದ ಅವರು ದೇವಳದಿಂದ ರಾಜಿ ಅರ್ಜಿ ಕೊಟ್ಟು ಬಿಟ್ಟುಹೋದದ್ದು ಆ ಮೇಲೆ ಮೆನೇಜ್‌ಮೆಂಟಿಗೆ ಬ್ರಾಹ್ಮಣೇತರರ ನೇಮಕವಾದದ್ದು.

3. ತಾ. 19-9-1955ರ ಮೀಟಿಂಗ್ ನಿರ್ಣಯ ನಂಬ್ರ 369(8)ರ ಪ್ರಕಾರ ದೇವಳದ ಮೂಲ ಮೃತ್ತಿಕೆ ಪ್ರಸಾದ ಮಾರಾಟದಿಂದ ಅರ್ಚಕರಿಗೆನೇ ಮಾತ್ರ ಸಿಕ್ಕುತ್ತಿದ್ದ ನಾಲ್ಕಾಣೆಯಲ್ಲಿ ದೇವರ ಭಂಡಾರಕ್ಕೂ ಎರಡಾಣೆ ಪಾಲು ಸಿಕ್ಕುವಂತಾಯಿತು.

4. ಶ್ರೀ ಸುಬ್ರಹ್ಮಣ್ಯೇಶ್ವರನ ಸಾನ್ನಿಧಿಯಲ್ಲಿ ಮಹಾಪೂಜೆ ಸಮಯ ದೇವರ ದರ್ಶನಕ್ಕೆ ಅನುಕೂಲವಾಗುವಂತೆ ಸರಳು ಹಾಕಲ್ಪಟ್ಟಿದೆ.

5. ಉಷಃ ಕಾಲದಲ್ಲಿ ನಿಂತುಹೋದ ನಗಾರಿ ಬಾರಿಸುವ ಕ್ರಮವನ್ನು ಪುನಃ ಜಾರಿಗೊಳಿಸಲಾಯಿತು.

6. ತೆಂಕು ಪೌಳಿಯನ್ನು ಹೊಸತಾಗಿ ಕಟ್ಟಿಸಲಾಯಿತು.

7. 20-7-1955ರ ಮೀಟಿಂಗ್‌ನ ನಿರ್ಣಯ ನಂಬ್ರ 346(2)ರಲ್ಲಿ ದೇವಳದಲ್ಲಿ ಬ್ರಾಹ್ಮಣರೊಳಗೆ ಜಾತಿ ಭೇದವನ್ನು ಇಟ್ಟುಕೊಳ್ಳದೆ ಸಂತರ್ಪಣೆ ನಡೆಸುವಂತೆ ನಿರ್ಣಯಿಸಲಾಯಿತು. ಅದೇ ಮೀಟಿಂಗ್‌ನಲ್ಲಿ ನಿರ್ಣಯ ನಂಬ್ರ 362(20)ರ ಪ್ರಕಾರ ಪೂರ್ವ ಪದ್ಧತಿ ಪ್ರಕಾರ ಹೊಸ್ತಾರೊಗಣೆ (ಹೊಸ್ತಕ್ಕಿ ಊಟ) ದಿವಸ ಸ್ಥಳದ ಮೂಲ ಪುರುಷರಾದ ಸ್ಮಾರ್ತ ಸ್ಥಾನಿಕ ಬ್ರಾಹ್ಮಣರಿಗೆ ಮಹಾ ಪೂಜೆಗೆ ಮುಂಚೆ ನಡೆಯುತ್ತಿದ್ದ ಬ್ರಹ್ಮ ಭೋಜನದ ಚಪ್ಪೆ ಊಟ = (ದೇವರಿಗೆ ಅಭಿಷೇಕವಾದ ಹಾಲು, ಮೊಸರು, ತುಪ್ಪ, ಸಕ್ಕರೆ, ಜೇನು ಇವುಗಳಿಂದ ಊಟ ಮಾಡಿಸುವ ಕ್ರಮ) ಒಂದು ಸಲ ನಿಂತು ಹೋಗಿದ್ದುದರಿಂದ ಪುನಃ ಕ್ರಮವಾಗಿ ನಡೆಸಬೇಕೆಂದು ನಿರ್ಣಯಿಸಲ್ಪಟ್ಟಿದೆ.

**8. 18-12-'55ರಲ್ಲು ಸ್ಮಾರ್ತ ಶಿವ ಬ್ರಾಹ್ಮಣರನ್ನು ಬ್ರಹ್ಮ ಸಂತರ್ಪಣೆ ಯಿಂದ** ಎಬ್ಬಿಸಿದ್ದಕ್ಕೆ ಪ್ರೆಸಿಡೆಂಟ್ ಶ್ರೀ ಎ. ಭೀಮ ಭಟ್, ಮೆನೇಜರ್‌ರು ಮತ್ತು ಉಪಾಧಿವಂತ ಶಿವಳ್ಳಿ ಮಾಧ್ವರಾದ ಶ್ರೀ ಶ್ರೀನಿವಾಸ ಶಾಸ್ತ್ರಿಯವರ ಮೇಲೆ O.S 155/1956 ಪ್ರಕಾರ ಅವರ ಮೇಲೆ ನಡೆದ ಮಾನನಷ್ಟ ವ್ಯಾಜ್ಯವು ಕಡೇಗೆ ರಾಜಿಯಾಗಿ 'settled out of the court' ಎಂದು ರಾಜಿಯಿಂದ ಹಿಂತೆಗೆದು ಕೊಳ್ಳಲ್ಪಟ್ಟಿದೆ.

9. ತಾ. 27-12-1947ರಿಂದ ತಾ. 15-6-1956ರ ವರೆಗೆ ದೇವಳದಲ್ಲಿ 9 ವರ್ಷ ಕೆಲಸ ಮಾಡಿದ ಬಡವರಾದ ಹವ್ಯಕ ಬ್ರಾಹ್ಮಣ ದೇವ ಕಾರ್ಯದ ಶ್ರೀ ನಾರಾಯಣ ಭಟ್ಟ ಎಂಬವರನ್ನು ಈ ಹೊರ ದೇವಕಾರ್ಯವು ಕೆಳಮಟ್ಟದ ಕೆಲಸ ಎಂದು ಇಟ್ಟುಕೊಂಡು ಅಧ್ಯಕ್ಷರಾದ ಶ್ರೀ ಎ. ಭೀಮ ಭಟ್ಟರು ತನ್ನ ಜಾತಿಗೆ ಅವಮಾನ ತರುವುದೆಂಬ ಕಾರಣದಿಂದ ಹೊರಗೆ ಕ್ಷುಲ್ಲಕ ಕಾರಣ ಕೊಟ್ಟು ಅವರು ಎಷ್ಟು ಕೇಳಿಕೊಂಡರೂ ಕೇಳದೆ ಅವರನ್ನು

ಉದ್ಯೋಗದಿಂದ ತೆಗೆದು ಪಂಚದ್ರಾವಿಡ ಬ್ರಾಹ್ಮಣರಲ್ಲಿ ಸೇರದ ಮಳ್ಯಾಳಿ ನಂಬೀಶರನ್ನು ದೇವಳದ ಪದ್ಧತಿಗೆ ವಿರೋಧವಾಗಿ ಹೊರದೇವ ಕಾರ್ಯಕ್ಕೆ 5-6-1956ರಲ್ಲಿ ನೇಮಿಸಿದ್ದು.

1957ನೇ ಇಸವಿಯಿಂದ 1962ರ ವರೆಗೆ ಧರ್ಮದರ್ಶಿಗಳಾಗಿ ನೇಮಿಸ ಲ್ಪಟ್ಟ ಶ್ರೀ ಕೆ. ಸುಬ್ರಹ್ಮಣ್ಯ ಗೌಡರು ಮತ್ತು ಶ್ರೀ ಬಿ. ನಾರಾಯಣ ಶೇಕರು ತಾ. 1-12-1958ರಂದು ದೇವಳದ ಮೂಲ ಸ್ಥಾನದಲ್ಲಿ ಅಡಗಿಸಿಡಲ್ಪಟ್ಟ ಸಿದ್ಧಿ ವಿನಾಯಕ ವಿಗ್ರಹವನ್ನು ಹೊರ ಮಂಟಪಕ್ಕೆ ತಂದಿರಿಸಿ ಟ್ರೆಜರಿಯಲ್ಲಿದ್ದ ಚಿನ್ನದ ಕವಚವನ್ನು ಅದಕ್ಕೆ ಇರಿಸಿ ಕವಚಕ್ಕೆ ಸಂಬಂಧಪಟ್ಟ ವಿಗ್ರಹವು ಅದೇ ಎಂದು ನಿರ್ಣಯಿಸಿದರು. ಅಲ್ಲದೆ ಅದರ ವಿಚಾರದಲ್ಲಿ ತಂತ್ರಿ ಮತ್ತು ಅರ್ಚಕರ ಹೇಳಿಕೆಯನ್ನು ತೆಗೆದುಕೊಳ್ಳಲಾಯಿತು.

ಅದೇ ವರ್ಷ ತೆಂಕು ಪೌಳಿಯ ಮಾಳಿಗೆಯ ಅಂಶವೂ ತಮಗೆ ಸಿಕ್ಕ ಬೇಕೆಂದು ಅಲ್ಲಿಯ ಮಾಧ್ವ ಸ್ವಾಮಿಗಳು ದೇವಳದ ವಿರುದ್ಧವಾಗಿ ಹೂಡಿದ O.S. 138/1459 ವ್ಯಾಜ್ಯದಲ್ಲಿ ಮೇಲಿನ ದೇವಳದ ಟ್ರಸ್ಟಿಗಳೊಳಗೆ ಮಾಧ್ವರಾದ ಶ್ರೀ ಮುಂಡೆಚ್ಚರೂ ಕೂಡ 3 ಜನರು ದೇವಾಲಯಕ್ಕೆ ವಿರೋಧಿಸಿದರು. ಈ ಲೇಖಕರೊಂದಿಗೆ ಕಮಿಶನರ ಅನುಮತಿ ಪಡೆಯಲು ಬೆಂಗಳೂರಿಗೆ ಹೋದವರು ಈಗಿನ ಮೆನೇಜರ್ ಶ್ರೀ ರಾಮಕೃಷ್ಣ ಭಟ್ಟರು.

ಈ ಮೇಲಿನ ವ್ಯಾಜ್ಯಕ್ಕೆ ಪ್ರತಿಯಾಗಿ ದೇವಳವು ತನ್ನ ದೇವಸ್ಥಾನದ ರಕ್ಷಣೆ ಗೋಸ್ಕರ ಮಾಧ್ವ ಸ್ವಾಮಿಗಳ ಮೇಲೆ O.S. No. 5/1961 ವ್ಯಾಜ್ಯವನ್ನು ಹೂಡ ಬೇಕಾಯಿತು. (A.S. No. 28,29,30) ದಕ್ಷಿಣ ಕನ್ನಡ ಜಿಲ್ಲಾ ಕೋರ್ಟಿನಲ್ಲಿ ತನಿಖೆ ಆಗದೆ ಬಾಕಿ ಉಳಿದಿದೆ. ದೇವಳದ ಕಡೆಯಿಂದ ರಿಕಾರ್ಡುಗಳನ್ನು ಸಂಗ್ರಹಿಸಿ ಬೆಂಗಳೂರು ಎಂಡೋಮೆಂಟ್ ಕಮಿಶನರಿಂದ ದಾವಾ ಹೂಡಲು ಅನುಮತಿ (Permission) ತಂದವರು ನಿವೃತ್ತ ಟ್ರಸ್ಟಿ ಈ ಪುಸ್ತಕದ ಲೇಖಕರು. ಇದರಲ್ಲಿ ಉತ್ತೇಜನ ತೆಗೆದುಕೊಂಡು ದಾವಾ ತಯಾರಿಸಿದವರು ಮಂಗಳೂರಿನ ಪ್ರಸಿದ್ಧ ವಕೀಲರಾದ ಶ್ರೀ ಕಾರ್ಕಳ ಸದಾಶಿವರಾಯರು. ಸಬ್‌ಕೋರ್ಟಿನಲ್ಲಿ ಈ ವ್ಯಾಜ್ಯವನ್ನು ವ್ಯವಹರಿಸಿದವರು ಶ್ರೀ ಸದಾಶಿವರಾಯರ ಅಳಿಯ ಅಡ್ವೊಕೇಟ್ ಶ್ರೀ ಅಣ್ಣಪ್ಪ ಕಾಮತರು. ಇದರ ಅಪೀಲ್‌ಗಳನ್ನು ತಯಾರಿಸಿ ಅಪೀಲ್‌ನಲ್ಲಿ ವ್ಯವಹರಿಸಲು ವಹಿಸಿಕೊಂಡವರು ಶ್ರೀ ಸುಂದರಮ್ ಅಯ್ಯರ್ ಅಪೀಲ್ ಎಡ್ವೊಕೇಟ್ ಮೈಲಾಪುರ ಮದ್ರಾಸ್‌ರವರು ಅಪೀಲ್ ಕಾಲದಲ್ಲಿ ರಿಕಾರ್ಡು ಗಳನ್ನೂ ದಾಕ್ಲೆಗಳನ್ನೂ ಸರಿಪಡಿಸಿ ವ್ಯವಸ್ಥೆಗೊಳಿಸಿದವರು ಮತ್ತು ಇದಕ್ಕೆ ಸಹಕರಿಸಿದವರು ನಿವೃತ್ತ ಅಸಿಸ್ಟೆಂಟ್ ಕಮಿಶನರ್ ದಿವಂಗತ ಶ್ರೀ ಕೆ.ಆರ್. ವೆಂಕಟ್ರಮಣ ಅಯ್ಯರ್‌ರವರು.

ಈ ದೇವಳದ ಈ ಮಹಾ ಉದ್ಯಮದಲ್ಲಿ ತಮ್ಮ ಜತೆ ಟ್ರಸ್ಟಿಗಳು ತಮಗೆ ಸಹಕರಿಸದಿದ್ದರೂ ದೇವಸ್ಥಾನದ ಧರ್ಮದರ್ಶಿಗಳು ಎಂಬ ಹೆಸರಿಗೆ ಅನ್ವರ್ಥ ವಾಗುವಂತೆ ಮೇಲಿನವರನ್ನು ಸಹಕಾರಕ್ಕೆ ಪಡೆದುಕೊಂಡು ದೇವಳದ ಹಿತ ದೃಷ್ಟಿಯನ್ನೇ ಮುಂದಿಟ್ಟು ಧೈರ್ಯದಿಂದ ಮುಂದರಿಸಿ ವ್ಯಾಜ್ಯದ ಕರ್ತೃಗಳಾಗಿ ಮುಂದೆ ಬಂದು ಕರ್ತವ್ಯವೆಸಗಿದರು. ಶ್ರೀ ಬೆಳ್ಳಾರೆ ನಾರಾಯಣ ಶೇಕ ಮತ್ತು ಶ್ರೀ ಕೆ. ಸುಬ್ರಹ್ಮಣ್ಯ ಗೌಡರವರು. ಇವರು ವಂದನಾರ್ಹರು. ಇವರ ನಿಸ್ವಾರ್ಥ ಕರ್ತವ್ಯಕ್ಕೆ ಬಂದ ಭಕ್ತಾದಿಗಳಿಗೆ ಶ್ರೀ ಸುಬ್ರಹ್ಮಣ್ಯೇಶ್ವರನೊಂದಿಗೆ ಶ್ರೀ ಸಿದ್ಧಿ ವಿನಾಯಕ ದೇವರ ದರ್ಶನಾನುಗ್ರಹಿಗಳಾಗಲೆಂದು ಲೇಖಕನ ಹಾರೈಕೆಯಾಗಿದೆ.

1962ನೇ ಇಸವಿಯಿಂದ 1967ರ ವರೆಗೆ ಧರ್ಮದರ್ಶಿಗಳಾಗಿ ನೇಮಿಸ ಲ್ಪಟ್ಟವರಲ್ಲಿ ಈ ಮುಂಚಿನ ಟ್ರಸ್ಟಿಗಳೇ ಆದ ಶ್ರೀ ಬಿ. ನಾರಾಯಣ ಶೇಕರೂ, ಶ್ರೀ ಕೆ. ಸುಬ್ರಹ್ಮಣ್ಯ ಗೌಡರು ಇದ್ದುದರಿಂದ ಮಠ ಮತ್ತು ದೇವಸ್ಥಾನಗಳೊಳಗಿನ ವ್ಯಾಜ್ಯವು ಅವರ ಪರಿಶ್ರಮದಿಂದ ಮುಂದುವರಿಸುತ್ತಾ ಹೋಯಿತು. ಮತ್ತು ದೇವಳದಲ್ಲಿ ಅನೇಕ ಅಭಿವೃದ್ಧಿ ಕೆಲಸಗಳು ನಡೆದಿವೆ. ಆದರೆ ದೇವಸ್ಥಾನದಲ್ಲಿ ಸ್ಮಾರ್ತ ಬ್ರಾಹ್ಮಣ ಟ್ರಸ್ಟಿಗಳ ಅಭಾವದಿಂದ ಮುಂಚಿನಂತೆ ಪೂಜಾ ವಿನಿಯೋಗಾದಿ ಗಳಲ್ಲಿ ಶೈವಾಗಮ ಪದ್ಧತಿಯು ಏರ್ಪಡಲಿಲ್ಲ.

1967ರಲ್ಲಿ ಧರ್ಮದರ್ಶಿಗಳ ನೇಮಕದಲ್ಲಿ ಹತ್ತೊಂಭತ್ತು ಜನ ಅರ್ಜಿ ಗಳನ್ನು ಸಲ್ಲಿಸಿದ್ದರು. ಈ ನೇಮಕದಲ್ಲಿ ವ್ಯಾಜ್ಯದಲ್ಲಿ ದೇವಸ್ಥಾನದ ಹಿತದೃಷ್ಟಿಯಿಂದ ಕೆಲಸ ಮಾಡುತ್ತಿದ್ದ ಶ್ರೀ ಬಿ. ನಾರಾಯಣ ಶೇಕರೂ ಕೂಡ ನೇಮಿಸಲ್ಪಡಲಿಲ್ಲ. ದೇವಸ್ಥಾನದ ಹಿತಚಿಂತಕರಾಗಿ ಮುಂಚಿನ ಟ್ರಸ್ಟಿಗಳಾಗಿದ್ದ ಶ್ರೀ ಕೆ. ಸುಬ್ರಹ್ಮಣ್ಯ ಗೌಡರು ಮಾತ್ರ ಧರ್ಮದರ್ಶಿಗಳಾಗಿ ಉಳಿದರು. ಈ ನೇಮಕದಲ್ಲೂ ಮೇಲಿನಂತೆ ಅಧಿಕಾರಿ ವರ್ಗಗಳೊಳಗೆ ಕೈವಾಡವು ನಡೆದಿದೆ ಎಂದು ತಿಳಿದು ಬರುತ್ತದೆ. ದೇವಳದಲ್ಲಿ ಅನುಭವಸ್ಥರಾಗಿ ದೇವಳದ ಹಿತಚಿಂತಕರಾಗಿ ವರ್ತಿಸುವವರನ್ನು ಬಿಟ್ಟು ನೇಮಿಸಿದ್ದು ದೇವಸ್ಥಾನದ ದುರದೃಷ್ಟವೋ ತಿಳಿಯಲಿಲ್ಲ. "ಕಾಲಾಯ ತಸ್ಮೈ ನಮಃ" ಎಂಬಂತೆ ರಜೋ ಮತ್ತು ತಮೋ ಗುಣದ ಅಧಿಕ್ಯತೆಯ ಈ ಕಲಿ ಕಾಲದಲ್ಲಿ ಅದಕ್ಕೆ ತಕ್ಕುದಾದ ಸರಕಾರವು ಈಗ ಅಧಿಕಾರದಲ್ಲಿರುವುದರಿಂದಲೂ ಇದನ್ನು ಕೇಳುವವರಿಲ್ಲವೆಂದಾಗಿದೆ. ದೈವೀಕವಾಗಿಯೆ ದೇವಳದಲ್ಲಿ ಈ ವರೆಗೆ ನಡೆದಿದ್ದ ಅನ್ಯಾಯಗಳು ಹೊರಬಿದ್ದದ್ದನ್ನು ದೈವವೆ ಹೇಗೆ ಅದನ್ನು ಮುಂದುರಿಸಿ ಕೊಂಡು ಹೋಗುತ್ತದೆ ಎಂಬುದನ್ನು ನಿರೀಕ್ಷಿಸಬೇಕಾಗಿದೆ.

★ ★ ★

# ಉಪಸಂಹಾರ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಾಧಾರಣ ಪ್ರತಿ ಗ್ರಾಮಕ್ಕೆ ಒಂದರಂತೆ ಶಿವ, ದುರ್ಗಾ, ಸುಬ್ರಹ್ಮಣ್ಯ, ಗಣಪತಿ ವಾ ವಿಷ್ಣು ಈ ದೇವತೆಗಳಿಗೆ ಸಂಬಂಧಪಟ್ಟ ಯಾವುದಾದರೊಂದು ದೇವಾಲಯವು ಇದ್ದೇ ಇದೆ. ಅನಾದಿಯಿಂದ ಸರಕಾರಿ ತಸದೀಕು ಪಡೆದಿರುವ ಹೆಚ್ಚಿನ ದೇವಾಲಯಗಳೆಂದರೆ ಶಿವಾಲಯಗಳು ಮತ್ತು ಶಿವ ಸಂಬಂಧವಾದ ದುರ್ಗಾ, ಗಣಪತಿ, ಸುಬ್ರಹ್ಮಣ್ಯ ಮತ್ತು ಶಾಸ್ತವು ದೇವಾಲಯ ಗಳು. ವೈಷ್ಣವಾಂಶದ ದೇವಾಲಯಗಳು ತೀರಾ ವಿರಳವಾಗಿವೆ. ಹಾಗೆ ಇದ್ದರೂ ಸಾಧಾರಣ ಒಂಧು ಶತಮಾನದೊಳಗೆ ಕಟ್ಟಿಸಿದ್ದಾಗಿ ತಿಳಿದು ಬರುತ್ತದೆ.

ಈ ಶೈವ ದೇವಾಲಯಗಳ ಅರ್ಚಕತನವು ವಿಚಿತ್ರವಾಗಿದೆ. ಹೆಚ್ಚಿನ ಶಿವಾಲಯಗಳಲ್ಲೂ ತತ್ಸಂಬಂಧವಾದ ಇತರ ದೇವಾಲಯಗಳಲ್ಲೂ ಶೈವಾಗಮ ವನ್ನು ಎಳ್ಳಷ್ಟೂ ಅರಿಯದ ಲಿಂಗಪೂಜೆಯನ್ನು ನಿಷೇಧಿಸುವ, ವೈಷ್ಣವ ಮಾಧ್ವ ಶಿವಳ್ಳಿಯವರು ದ್ವಾದಶನಾಮ ಮತ್ತು ವಿಷ್ಣುವಿನ ಶಂಖ, ಚಕ್ರಾಂಕಿತ ತಪ್ತ ಮುದ್ರಾಧಾರಿಗಳಾಗಿ ಈಶ್ವರ ಲಿಂಗಕ್ಕೆ ಬಿಲ್ವಪತ್ರೆ ಭಸ್ಮಾದಿಗಳಿಂದ ಅರ್ಚಿಸದೆ ತುಳಸೀ ಗಂಧದಿಂದ ಅರ್ಚಿಸುವುದು ಬಹಳ ಚೋದ್ಯವಾಗಿದೆ. ಈ ರೀತಿಯ ಅರ್ಚಕತನವು ಭಾರತದ ಇದೊಂದು ಜಿಲ್ಲೆಯಲ್ಲಿ ಮಾತ್ರ ನಡೆಯುತ್ತದೆ ಎಂದು ಹೇಳಿದರೂ ತಪ್ಪಾಗಲಾರದು. ಇವರು ಈ ದೇವಾಲಯಗಳು ತಮ್ಮ ಹಿರಿಯರ ಹಕ್ಕಿನದೆಂದು ಹೇಳಿಕೊಂಡು ಒಳಗೆ ಶಿವಲಿಂಗವಿದ್ದರೂ ಕೆಲವೆಡೆಗಳಲ್ಲಿ ಲಿಂಗಕ್ಕೆ ಶ್ರೀ ದುರ್ಗಾಪರಮೇಶ್ವರಿ ಎಂತಲೂ ಶಂಕರನಾರಾಯಣನೆಂತಲೂ, ಅನಂತ ಪದ್ಮನಾಭನೆಂತಲೂ ಸಂಬೋಧಿಸಿ ಅವರ ಅಂಬೋಣಕ್ಕೆ ಸರಿಯಾಗುವಂತೆ ಕೆಲವು ಕಟ್ಟುಕತೆಗಳನ್ನು ಕಲ್ಪಿಸಿ ತಿಳುವಳಿಕೆ ಇಲ್ಲದ ಇತರ ಜನರಿಗೆ ಬೆರಗು ಗೊಳಿಸುತ್ತಾ ದೇವಸ್ಥಾನದ ಉತ್ಪತ್ತಿಯನ್ನು ದೇವಳಕ್ಕೆ ಬರುವ ವಂತಿಗೆ ವರಾಡ, ಕಾಣಿಕೆಗಳನ್ನು ತಮ್ಮ ಸ್ವಾರ್ಥಕ್ಕೆ ಉಪಯೋಗಪಡಿಸುವುದು ಚೋದ್ಯವಾಗಿದೆ. ವಿಷ್ಣು, ಶಿವರೊಳಗೆ ಮೇಲು ಕೀಳು ಭಾವನೆಯನ್ನು ಅರಿಯದ ಎಲ್ಲವೂ ದೇವತಾಂಶವೆಂದು ಭಾವಿಸುವ ಬ್ರಾಹ್ಮಣೇತರರಿಗೆ ಇವರು ಶಿವಾಲಯಗಳಲ್ಲಿ ಲಿಂಗದ ಹತ್ತಿರ ಶಾಲಿಗ್ರಾಮಗಳನ್ನು ಇಟ್ಟುಕೊಂಡು ಈಶ್ವರನಿಗೆ ಮಾಡಿದ ದೇವಳದ ಹೆಚ್ಚಿನ ನೈವೇದ್ಯವನ್ನು ನಿವೇದಿಸಿ ಈಶ್ವರನಿಗೆ ಸ್ವಲ್ಪ ಅಂಶವನ್ನು ತೋರಿಸಿ ವಂಚಕತನದಿಂದ ಪೂಜೆ ಮಾಡಿ ನಾವು ಶಿವ ನಿರ್ಮಾಲ್ಯವನ್ನು ಸೇವಿಸುವವರಲ್ಲವೆಂದು ಹೇಳಿಕೊಂಡು ಅದೇ ಶಿವಾಲಯದಲ್ಲಿ ಕುಳಿತು ಈಶ್ವರನ ಉತ್ಪತ್ತಿಯಿಂದಲೇ ತಯಾರಾದ ಅನ್ನವನ್ನು ಭುಂಜಿಸುವುದು ಇನ್ನೊಂದು ವಿಚಿತ್ರವಾದ ವಿಷಯವಾಗಿದೆ.

ಕನ್ನಡ ಜಿಲ್ಲೆಯ ಬ್ರಾಹ್ಮಣೇತರ ಜನರು ಈ ಬ್ರಾಹ್ಮಣರ ಆಂತರಿಕ ಭೇದವನ್ನು ಅರಿಯದೆ ಇವರು ಶಿವನನ್ನೆ ಅರ್ಚಿಸುತ್ತಾ ನಮಗೆ ಶಿವ ಪ್ರಸಾದವನ್ನೇ ಕೊಡುತ್ತಾರೆಂದು ನಂಬಿಕೊಂಡು ಮತ್ತು ಇವರು ಉತ್ತಮ ಬ್ರಾಹ್ಮಣರೆಂದು ನಂಬಿಕೊಂಡು ಅವರು ಹೇಳಿದಂತೆ ವರ್ತಿಸುವುದು ಮತ್ತೊಂದು ವಿಚಿತ್ರವಾದ ಸಂಗತಿಯಾಗಿದೆ.

'ಕಾಲಾಯ ತಸ್ಮೈ ನಮಃ' ಎಂಬಂತೆ ಚರಿತ್ರೆಗಳಲ್ಲಿ ಒಬ್ಬೊಬ್ಬ ರಾಜನ ಅಧಿಕಾರವು

ಮೇಲ್ಮೆಗೆ ಬರುವಾಗ ಹಿಂದೂ ದೇವಾಲಯಗಳು ಜೈನ ದೇವಾಲಯ ಗಳಾಗಿ, ವಾ ಮುಸಲ್ಮಾನ ಮಸೀದಿಗಳಾಗಿ ಪರಿಣಮಿಸುವುದಿವೆ. ಶಿವಾಲಯಗಳು ವೈಷ್ಣವಾಲಯಗಳಾಗಿ ಪರಿಣಮಿಸಿದ್ದು ತುಂಬಾ ಇವೆ. ದೃಷ್ಟಾಂತವಾಗಿ ತಿರುಪತಿ, ಶ್ರೀರಂಗ ದೇವಾಲಯಗಳು ಶಿವಸಮ್ಮಂಧವಾಗಿದ್ದು ಅವುಗಳು ವೈಷ್ಣವ ದೇವಾಲಯಗಳಾಗಿ ಮಾರ್ಪಟ್ಟವುಗಳೆಂಬ ಪ್ರತೀತಿಯೂ ಇದೆ. ಅದಾದರೂ ತಪ್ಪೆನಿಸುವುದಿಲ್ಲ. ಅವಿಕಾರಿಯಾದ ಪರಮಾತ್ಮನನ್ನು ಯಾವ ರೂಪನಾಮ ಕೊಟ್ಟು ಸಂಬೋಧಿಸಿದರೂ ದೈವಾಂಶವು ಕಮ್ಮಿಯಾಗುವುದಿಲ್ಲ. ಶಿವನು ವಿಷ್ಣುವಾಗಿ ಆಕಾರದಲ್ಲಿ ಮಾರ್ಪಟ್ಟರೂ ಭಕ್ತಾದಿಗಳು ವಿಷ್ಣುವೆಂದೇ ಅರ್ಚಿಸಿ ಅನುಗ್ರಹಕ್ಕೆ ಪಾತ್ರರಾಗುತ್ತಾರೆ. ಆದರೆ ನಮ್ಮ ಕನ್ನಡ ಜಿಲ್ಲೆಯಲ್ಲಿ ಹಾಗಾಗಲಿಲ್ಲ. ಶಿವಲಿಂಗವು ಇದ್ದಹಾಗೆ ಇದ್ದು ಲಿಂಗದ ಬದಿಯಲ್ಲಿ ವಿಷ್ಣು ಶಾಲಿಗ್ರಾಮವನ್ನು ಇಟ್ಟು ಲಿಂಗ ವಿರೋಧಿಯಾದವನು ಲಿಂಗಪೂಜೆ ಮಾಡುವುದು ಅತಿ ವಿಚಿತ್ರವಾಗಿದೆ.

ಈ ವಿಷಯವನ್ನು "ಉಡುಪಿ ಕ್ಷೇತ್ರದ ನೈಜ ಚಿತ್ರ ಮತ್ತು ಚಾರಿತ್ರಿಕ ಹಿನ್ನೆಲೆ' ಎಂಬ ಪುಸ್ತಕದಲ್ಲಿ ಉಡುಪಿಯಲ್ಲಿ ನಡೆದ ಘಟನೆಗಳ ವಿವರಣೆಯಲ್ಲಿ ಓದಬಹುದು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅತಿ ಮಹಿಮೆಯುಳ್ಳ ಪ್ರಸಿದ್ಧ "ಮುಹತೋಬಾರ್ ಶ್ರೀ ಕುಕ್ಕೆ ಸುಬ್ರಹ್ಮಣ್ಯೇಶ್ವರ ದೇವಾಲಯದಲ್ಲಿ ಮೇಲೆ ವಿವರಿಸಿದ ಮಾಧ್ವರಿಂದ ನಡೆದ ಲೋಪದೋಷಗಳು ಬಹಳ ವಿಷಾದವನ್ನು ತರುವಂತಹದ್ದಾಗಿದೆ."

ಈ ಮೇಲಿನ ಎಲ್ಲಾ ವಿವರಗಳಿಂದ ವಿಷದವಾಗುವುದೇನೆಂದರೆ : ಈ ದೇವಾಲಯಗಳಲ್ಲಿ ಗೋಪ್ಯವಾಗಿರುವ ಮಹಾಗಣಪತಿಯು ಈ ಮೊದಲು ಈಗಿನ ನರಸಿಂಹ ಗುಡಿಯಲ್ಲಿ ಇದ್ದುದೆಂದು ಸ್ಪಷ್ಟವಾಗುತ್ತದೆ. ಈ ವೈಷ್ಣವ ಮತ ಸ್ಥಾಪಕರಾದ ಮಾಧ್ವ ಮಠದ ತಪ್ತ ಮುದ್ರಾಧಾರಣೆ ಮಾಡುವ ದ್ವೈತವಾದೀ ಶಿವಳ್ಳಿ ಸ್ವಾಮಿಗಳು ತನ್ನ ತತ್ವಕ್ಕೆ ವಿರೋಧವಾದ ಈ ಶೈವ ಸಂಬಂಧವಾದ ಸುಬ್ರಹ್ಮಣ್ಯನ ಮೂಲ ಸ್ಥಾನದಲ್ಲಿ ಸಾಲಿಗ್ರಾಮವಿಟ್ಟು ವಂಚಕತನದಿಂದ ಪೂಜೆ ಮಾಡಲು ಆರಂಭಿಸಿದರೋ ಅಂದಿನಿಂದ ಇಂದಿನವರೆಗೂ ದೇವಸ್ಥಾನದಲ್ಲಿ ಸುಖವಿಲ್ಲ. ಇಲ್ಲಿ ಬರುವ ಭಕ್ತಾದಿಗಳಿಗೂ ಒಂದೇ ಸಮಯದಲ್ಲಿ ಎರಡು ಕಡೆಗಳಲ್ಲಿ ಪೂಜೆ ಉತ್ಸವಗಳು ನಡೆಯುವ ದೆಸೆಯಿಂದ ಕ್ಷೇಮವಿಲ್ಲ. ದೇವಾಲಯಕ್ಕೂ ಮಠಕ್ಕೂ ಇಂದಿಗೂ ಬಹಳ ಜಗಳಗಳು ಆಗುತ್ತಾ ಇವೆ.

ಒಂದು ಕ್ಷೇತ್ರದ ನಿಜತ್ವವನ್ನು ನಾಶಗೊಳಿಸಿ ತಮ್ಮ ತತ್ವದ ಮೇಲ್ಮೆಗೂ ಅಲ್ಲಿಯ ಸಂಪತ್ತಿಗೂ ಆಶೆಪಟ್ಟು ಸಲ್ಲದ ಕುಟಿಲತನದಿಂದ ವರ್ತಿಸುವುದು ಬಹಳ ನಿಂದಾಸ್ಪದವಾಗಿದೆ. ಆಯಾಯ ಕ್ಷೇತ್ರದಲ್ಲಿ ಆಯಾಯ ದೇವರಿಗೆ ಸಂಬಂಧಪಟ್ಟ ಆಗಮ ಪ್ರಕಾರ ಪೂಜೆ ನಡೆಯಬೇಕಾದುದು ಧರ್ಮವು. "ಸ್ವಧರ್ಮೆ ನಿಧನಂ ಶ್ರೇಯಃ" ಎಂಬ ಶ್ರೀ ಕೃಷ್ಣ ಪರಮಾತ್ಮನ ಗೀತಾ ವಾಕ್ಯದಂತೆ ಶ್ರೀ ಕೃಷ್ಣನನ್ನು ಆರಾಧಿಸುತ್ತಿರುವ ದ್ವೈತ ಮತಾನುಯಾಯಿಗಳಾದ ಸ್ವಾಮಿಗಳು ತಮ್ಮ ಮಠವು ಶ್ರೀ ಸುಬ್ರಹ್ಮಣ್ಯ ದೇವರ ಸಂಪತ್ತಿನಿಂದಲೇ ಉಂಟಾದುದೆಂದು ಗೊತ್ತಿದ್ದು ಸುಬ್ರಹ್ಮಣ್ಯ ದೇವಾಲಯದಲ್ಲಿ ಸಾಧಾರಣ ಒಂದೂವರೆ ಶತಮಾನ ಇದ್ದುಕೊಂಡು, ಬಂದ ಭಕ್ತರಿಗೂ ದೇವಾಲಯದ ಕಾರ್ಯಕರ್ತರಿಗೂ ಅಸಾಸು ಕೂಲವನ್ನುಂಟು ಮಾಡುವುದು ನಿಂದಾಸ್ಪದವಾಗಿದೆ. ಆದ್ದರಿಂದ ಬಲ್ಲವರಾದ ಶ್ರೀ ಸ್ವಾಮಿಗಳು ಶ್ರೀ ನರಸಿಂಹ ಗುಡಿಯಿಂದ ಸಾಲಿಗ್ರಾಮವನ್ನು ತೆಗೆದು

ಈಶಾನ್ಯ ಮೂಲೆಯಲ್ಲಿ ಶೃಂಗೇರಿ ಮಠದ ಶ್ರೀ ಚಂದ್ರಮೌಳೀಶ್ವರ ಗುಡಿ ಇದ್ದಂತೆ ಶ್ರೀ ನರಸಿಂಹ ದೇವರಿಗೂ ತಮ್ಮ ಮಠದಲ್ಲಿಯೇ ಒಂದು ಪ್ರತ್ಯೇಕವಾದ ಗುಡಿಯನ್ನು ಕಟ್ಟಿಸಿ ಅದರಲ್ಲಿರಿಸಿ ಗರ್ಭಗೃಹದೊಳಗೆ ಗೋಪ್ಯವಾಗಿರಿಸಿದ ಶ್ರೀ ಮಹಾಗಣಪತಿಯನ್ನು ಬಹಿರಂಗವಾಗಿ ಅದರ ಮೊದಲ ಸ್ಥಾನವಾದ ಈಗಿನ ನರಸಿಂಹ ಗುಡಿಯಲ್ಲಿ ಪುನಃ ಪ್ರತಿಷ್ಠಿಸಿ ಭಕ್ತಾದಿಗಳಿಗೆ ಅನುಗ್ರಹ ಮೂರ್ತಿಯನ್ನಾಗಿ ಮಾಡಬೇಕು. ಮತ್ತು ತಮ್ಮಿಂದ ಆಕ್ರಮಿಸಲ್ಪಟ್ಟ ದೇವಾಲಯದ ಒಳ ಆಗ್ನೇಯ ಮೂಲೆಯನ್ನು ಶ್ರೀ ಸುಬ್ರಹ್ಮಣ್ಯ ದೇವರಿಗೆ ಬಿಟ್ಟುಕೊಟ್ಟು ಶ್ರೀ ಸುಬ್ರಹ್ಮಣ್ಯ ಕ್ಷೇತ್ರಕ್ಕೆ ಒಂದು ದೊಡ್ಡ ಮಹತ್ವವನ್ನು ಉಳಿಸಿಕೊಡಬೇಕು. ದೇವಾಲಯದಲ್ಲಿ ಸ್ಮಾರ್ತರೂ, ವೈಷ್ಣವರೂ, ಮಠದವರೂ, ದೇವಸ್ಥಾನದವರೂ ಅಣ್ಣ ತಮ್ಮಂದಿರಂತೆ ಸಹೋದರಭಾವದಿಂದಿದ್ದು ದೇವಾಲಯದ ಕಾರ್ಯಗಳನ್ನು ಸುಗಮವಾಗಿ ನಡೆಸಿಕೊಂಡು ಬರಬೇಕು. ಹೀಗೆ ಆದರೇನೇ ಈ ದೇವಸ್ಥಾನಕ್ಕೆ ಶೋಭೆ ಹೆಚ್ಚುವುದೆಂದು ನನ್ನ ಅಭಿಪ್ರಾಯ.

ಈ ವಿಷಯವನ್ನು ಈಗಿನ ಆಡಳಿತೆ ಕಮಿಟಿ ಕೌನ್ಸಿಲಿನವರು ಶ್ರೀ ಸುಬ್ರಹ್ಮಣ್ಯದ ಮಾಧ್ವ ಮಠಕ್ಕೆ ತಿಳಿಸಿ ಸೌಹಾರ್ದದಿಂದ ಮುಂಚೆ ಇದ್ದಂತೆ ಸರಿಪಡಿಸುವುದು ಅವಶ್ಯ.

## ಹಳೆ ದಾಖಲೆಗಳು

ಸಂ. 1887ನೇ ಸಪ್ಟಂಬರ ತಿಂಗಳ ತಾರೀಕು 27ನೇ ಮಂಗಳವಾರ ದಕ್ಷಿಣ ಕನ್ನಡ ಜಿಲ್ಲಾ ಸಬ್ ಕೋರ್ಟಿನಲ್ಲಿ ನ್ಯಾಯಾಧೀಶ ಶ್ರೀ ಸಿ. ಗೋಪಾಲನ್ ನಾಯರ್‌ರವರು O.S. ನಂಬ್ರ 27 of 1886ನೇ ವ್ಯಾಜ್ಯದಲ್ಲಿ ಕೊಟ್ಟ ತೀರ್ಪು :

ವ್ಯಾಸತೀರ್ಥ ಸ್ವಾಮಿ - ವಾದಿ

ಪ್ರತಿವಾದಿಗಳು - 1. ಶ್ರೀನಿವಾಸ ಭಟ್ಟ 2. ಕೃಷ್ಣ ಶಬರಾಯ 3. ನಾರಾಯಣ ಶಗ್ರಿತ್ತಾಯ 4. ರಾಮಕೃಷ್ಣಯ್ಯ.

ಈ ವ್ಯಾಜ್ಯವು ವಾದಿ ವ್ಯಾಸತೀರ್ಥ ಸ್ವಾಮಿಯವರಿಂದ ಶ್ರೀ ಸುಬ್ರಹ್ಮಣ್ಯ ದೇವಸ್ಥಾನವು ತನ್ನ ಶಿಲಶಿಲಾ ಹಕ್ಕಿನದೆಂದು ಸ್ಥಾಪಿಸಲು ದೇವಸ್ಥಾನದ ಕಮಿಟಿ ಯವರ ಮೇಲೆ ಹೂಡಿದ್ದಾಗಿದೆ.

ಇದರ ಕೆಲವು ಮುಖ್ಯ ಅಂಶಗಳು ಮಾತ್ರ ಇಲ್ಲಿ ಪ್ರಕಟಿಸಲ್ಪಟ್ಟಿವೆ :

**ಪಾರಾ 12** : ಇದರಲ್ಲಿ ಸ್ವಾಮಿಗಳು ತನ್ನ ವ್ಯಾಜ್ಯವನ್ನು ಬಲಪಡಿಸಲು ಹಾಜ್ರುಪಡಿಸಿದ ಬನಾವಣೆ (forgery) ಶಾಸನದ ವಿಚಾರವನ್ನು ವಿವರಿಸಿರುತ್ತಾರೆ. ಶಕ 1272ರ ಶಾಸನದ ತಗಡುಗಳು ಸ್ವಾಮಿಗಳೇ ಹಾಜ್ರುಪಡಿಸಿದ ಶಕ 1388 ಮತ್ತು 1469ರ ಶಾಸನಗಳಂತಿಲ್ಲ. ಬಾಲ ಅಕ್ಷರದಲ್ಲಿ ದೊರಗು ಮಾಡಿ ಯಾರೋ ಕನ್ನಡ ಜಿಲ್ಲೆಯವರೇ ಇತ್ತೀಚೆಗೆ ಬರೆದಂತಿದೆ. ದ್ವಾರ ಸಮುದ್ರದ ಬಲ್ಲಾಳರು ಇವರಿಗೆ ಕೊಟ್ಟದ್ದೆಂದು ಆಗಲು ಸಾಧ್ಯವೇ ಇಲ್ಲ. ಈ ವಿಷಯದಲ್ಲಿ ವಿಚಾರಿಸ ತಕ್ಕದ್ದೇನೆಂದರೆ ದೇವಸ್ಥಾನದ ಬಗ್ಗೆ ಗೋವೆಯ ರಾಜನು ತನ್ನ ಕೊಡುಗೆಯನ್ನು ಶಕ 1387ರ V ಶಾಸನದಲ್ಲಿ ಸ್ಥಳೀಯ 32 ಗ್ರಾಮಗಳ ಮುಖ್ಯಸ್ಥರಿಗೆ ಬಿಟ್ಟು ಕೊಡುವಾಗ ಆ ರಾಜನಿಗೂ, ಬುಕ್ಕರಾಯನ ಶಕ 1469ರಲ್ಲಿ ತನ್ನ ಕೊಡುಗೆಯನ್ನು ದೇವಸ್ಥಾನದ ಬಗ್ಗೆ ಸ್ಥಳೀಯ ಸ್ಥಾನಿಕರಿಗೆ ಬಿಟ್ಟುಕೊಡುವಾಗ ಆ ಬುಕ್ಕರಾಯನಿಗೂ, ವಾದಿಯ ಮಠದ ಸ್ವಾಮಿಗಳಿಗೆ

ದೇವಸ್ಥಾನದ ಮೇಲೆ ಯಾವ ವಿಧದ ಹಕ್ಕೂ ಇದ್ದದ್ದು ಗೊತ್ತಿರಲಿಲ್ಲ. ಈ ಅನೇಕ ಕಾರಣಗಳಿಂದ ಸಾಕ್ಷಿ ಆಕ್ಟಿನ ಸೆಕ್ಷನ್ 90ರ ಪ್ರಕಾರ ಈ ಶಾಸನವು ನ್ಯಾಯವಾದುದೆಂದು ನಿರ್ಧರಿಸಲು ಸರಿಯಾದ ರುಜುವಾತು ಇಲ್ಲದ್ದರಿಂದ ಇದು ಅವಮಾನಕರವಾದ ಬನಾವಣೆ (disgraceful rank forgery) ಶಾಸನವೆಂದೂ ತನ್ನ ವ್ಯಾಜ್ಯವನ್ನು ಬಲಪಡಿಸಲು ವ್ಯಾಜ್ಯ ದಾಖಲಾದ ನಂತರ ಹೊಸತಾಗಿ ಬನಾವಟು ಮಾಡಿದ್ದೆಂದೂ ನಿಶ್ಚಯಿಸ ಬೇಕಾಗುತ್ತದೆ.

**ಪಾರಾ 13** : ಸ್ವಾಮಿಯವರು ಹಾಜರುಪಡಿಸಿದ Cಯಿಂದ H ಮತ್ತು J ದಾಕ್ಲೆಗಳಲ್ಲಿ ಈ ಮಠದ ಹಿಂದಿನ ಸ್ವಾಮಿಗಳು 1801ನೇ ಇಸ್ವಿಯಿಂದ 1835ನೇ ಇಸ್ವಿಯ ವರೆಗೆ ಮೈಸೂರು ಸರಕಾರದವರು ಸುಬ್ರಹ್ಮಣ್ಯ ದೇವಸ್ಥಾನದ ಷಷ್ಠಿ ಉತ್ಸವದ ಬಗ್ಗೆ ಸ್ವಾಮಿಯವರ ಮುಖಾಂತರ ಕಳುಹಿಸಿದ ಗಂಧ ಮೊದಲಾದ ವಸ್ತುಗಳ ಮೇಲೆ ಸುಂಕ ಇತ್ಯಾದಿಗಳನ್ನು ತೆಗೆದುಕೊಳ್ಳಬಾರದೆಂಬ ಬಗ್ಗೆ ಈ ಮಠದ ಹಿಂದಿನ ಸ್ವಾಮಿಗಳು 1801ನೇ ಇಸ್ವಿಯಿಂದ 1835ನೇ ಇಸ್ವಿಯ ವರೆಗೆ ಮೈಸೂರು ಸರಕಾರದೊಡನೆ ಮಾಡಿದ ಪತ್ರವ್ಯವಹಾರಗಳಲ್ಲಿ ಕೂಡ ಮಠದ ಸ್ವಾಮಿಗಳು ದೇವಸ್ಥಾನದ ಆಡಳಿತೆಯನ್ನು ನಡೆಸುತ್ತಿದ್ದರೆಂದು ಹೇಳಲಿಲ್ಲ. ಅಲ್ಲದೆ ಈ ಪತ್ರಗಳಲ್ಲಿ ''ಸುಬ್ರಹ್ಮಣ್ಯ ದೇವಸ್ಥಾನ'' ಮತ್ತು ''ನಿಮ್ಮ ಸ್ವಾಮಿಗಳ ನರಸಿಂಹ ಮಠ'' ಮತ್ತು ''ನಿಮ್ಮ ನರಸಿಂಹ ದೇವರು'' ಎಂದು ಪ್ರತ್ಯೇಕವಾಗಿ ವ್ಯತ್ಯಾಸವನ್ನು ತೋರಿಸಿರುತ್ತಾರೆ. ಅಲ್ಲದೆ ಸ್ವತಃ ಕಡುಮಾಧ್ವರಾದ ಪೂರ್ಣಯ್ಯನವರ ಪೆಚ್ಚಿನ ಒಲವು ಸ್ವಾಮಿಗಳ ಮೇಲೆ ಇದ್ದೂದೂ ಪೂರ್ಣಯ್ಯ ನವರು ಇವರ ಮಠಕ್ಕೆ ಬಿಟ್ಟ ಉತ್ತರ ಇನಾಮುಗಳಲ್ಲಿ ಕೂಡ, ಈ ಸ್ವಾಮಿಗಳು ಮಾಧ್ವರ ಮುಂದಾಳುಗಳೆಂದೂ, ಸುಬ್ರಹ್ಮಣ್ಯ ದೇವಸ್ಥಾನದ ಸೌಳಿಯ ಒಂದು ಬದಿಯಲ್ಲಿ ವಾಸಿಸುವವರೆಂದೂ, ಹೇಳಿದೆಯಷ್ಟೆ ಹೊರತು ಇವರು ದೇವಸ್ಥಾನದ ಮೆನೇಜರರಾಗಿದ್ದರೆಂದು ಎಲ್ಲಿಯೂ ಹೇಳಲಿಲ್ಲ.

**ಪಾರಾ 27** : ಅನಂತರ ವಾದಿಯು 1882ನೇ ನವಂಬರ 10ರಿಂದ 1883ನೇ ಜೂನ್ 29ರ ವರೆಗಿನ ತನ್ನ ಆಡಳಿತೆಯು ಲೆಕ್ಕ ಪತ್ರಗಳನ್ನು ಕ್ರಮವಾಗಿ ಅಲ್ಲದಿದ್ದರೂ ಕಳುಹಿಸಿಕೊಟ್ಟರು. ಆದರೆ ಆ ಲೆಕ್ಕ ಪತ್ರಗಳು ತೃಪ್ತಿಕರವಾಗಿರಲಿಲ್ಲ ವೆಂದು ಕಮಿಟಿಯವರು ಈ ವಿಷಯದಲ್ಲಿ ತಹಶಿಲ್ದಾರರಿಗೆ ರಿಪೋರ್ಟು ಮಾಡಿ ಮೊಕ್ತೇಸರರೆಲ್ಲರ ಮೇಲೆ ಆಪಾದನೆಗಳನ್ನು ಹೊರಿಸಿದ್ದಾರೆ. ಆಸ್ರಣ್ಣರಲ್ಲಿ ಒಬ್ಬರಾದ ರಾಮಕೃಷ್ಣರು ತನ್ನ ಮೊಕ್ತೇಸರಿಕೆಗೆ ರಾಜಿಕೊಟ್ಟರು. ಮತ್ತೊಬ್ಬ ಆಸ್ರಣ್ಣರು 30 ವರ್ಷ ಅವಧಿಯ ಒಂದು ಕರಾರನ್ನು ಬರಕೊಟ್ಟು ಸ್ವಾಮಿಯವರ ಕೈಯನ್ನೇ ಬಲಪಡಿಸಿದರು. ಈ ಕರಾರಿನಲ್ಲಿ ಸುಬ್ರಹ್ಮಣ್ಯ ದೇವಸ್ಥಾನಕ್ಕೆ ವರ್ಷಕ್ಕೆ 8500 ರೂಪ್ಯಾ ಉತ್ಪತ್ತಿಯಿದೆಯೆಂದೂ, ಯೋಗ್ಯವಾದ ಆಡಳಿತೆಯಿಂದ ವರ್ಷಕ್ಕೆ 1000 ರೂಪಾಯಿಯಂತೆ ಉಳಿಸಬಹುದೆಂದೂ, ದೇವಸ್ಥಾನದಿಂದ ಸ್ವಾಮಿಗೆ 1500 ರೂಪ್ಯಾ ಸಾಲವು ಸಲ್ಲತಕ್ಕದ್ದೆಂದೂ, ಇತ್ಯಾದಿ ವಿಶೇಷವಾದ ವಿಷಯಗಳು ಒಳಗೊಂಡಿವೆ. ಈ ಕರಾರಿನಿಂದ ಮತ್ತು ರಾಮಕೃಷ್ಣ ಆಸ್ರಣ್ಣರ ರಾಜಿನಾಮೆಯಿಂದ ಸ್ವಾಮಿಗೆ ಸಂಪೂರ್ಣ ಅಧಿಕಾರವುಂಟಾಯಿತು. ಇದರಿಂದ ಸ್ವಾಭಾವಿಕವಾಗಿ ದೇವಸ್ಥಾನದ ಆಡಳಿತೆಯು ಇನ್ನೂ ಕೆಟ್ಟು, ಆಸ್ರಣ್ಣರು ಸ್ಥಾನಿಕ ವೆಂಕಟ ದಾಸಪ್ಪ ಮತ್ತು ತರಿಕೆರೆ ಸುಬ್ಬಣ್ಣ ಇವರು ಸಬ್ ಮೆಜಿಸ್ಟ್ರೇಟರ ಮುಂದೆ ದೂರು ಕೊಟ್ಟರು. ಮತ್ತು ಈ ವಿಷಯವು ಕಮಿಟಿಯವರ ಮುಂದೆ ವಿಚಾರಣೆಗೆ ಬಂತು.

ಪಾರಾ 29 ವಾದಿ ಸ್ವಾಮಿಗಳ ಮೇಲೆ ಹೊರಿಸಿದ ಆಪಾದನೆಗಳು ಈ ಕೆಳಗಿನವು:

1) ದೇವಸ್ಥಾನದ ವಿನಿಯೋಗಾದಿಗಳನ್ನು ಸರಿಯಾಗಿ ನಡೆಸುವುದಿಲ್ಲ. ವಿನಿಯೋಗಾದಿ ಗಳಿಗೆ ಬೇಕಾದ ವಸ್ತುಗಳನ್ನು ಸರಿಯಾಗಿ ಕೊಡುವುದಿಲ್ಲ.
2) ತನ್ನ ಸ್ವಂತ ಲಾಭಕ್ಕಾಗಿ ವಿನಿಯೋಗಗಳನ್ನು ತಡಮಾಡಿ ಮಾಡಿಸುವುದು.
3) ದೇವಸ್ಥಾನದಲ್ಲಿ ಪರಿವಾರ ದೇವತೆಗಳ ವಿನಿಯೋಗಾದಿಗಳಿಗೆ ಬೇಕಾದ ವಸ್ತುಗಳನ್ನು ಸರಿಯಾಗಿ ಕೊಡುವುದಿಲ್ಲ.
4) ಉರ್ಲಿ ಅಕ್ಕಿಯನ್ನು ಕೊಡುವುದಿಲ್ಲ.
5) ಉದ್ಯೋಗಗಳಿಗೆ ಸರಿಯಾಗಿ ತಲಬು ಕೊಡುವುದಿಲ್ಲ ಮತ್ತು ಅನೇಕ ಉಪಾಧಿಗಳನ್ನು ನಿಲ್ಲಿಸಿದ್ದಾರೆ.
6) ಮತ್ಸರದಿಂದ ಭಕ್ತಾದಿಗಳು ದೇವಸ್ಥಾನದ ಧರ್ಮಗಳಲ್ಲಿ ಭಾಗವಹಿಸದಂತೆ ಮಾಡುತ್ತಾರೆ.
7) ದೇವಳದ ಕಟ್ಟಡಗಳಿಗೆ ಮಳೆಗಾಲದ ಛಾವಣಿಗಳನ್ನು ಮಾಡಿಸದೆ ನಾದುರುಸ್ತಿ ಪಡಿಸಿದ್ದಾರೆ. ಕೆಲವು ಕಟ್ಟೋಣಗಳು ಕೆಟ್ಟು ಹೋಗಿವೆ.
8) ಸರಿಯಾದ ಲೆಕ್ಕ ಪತ್ರಗಳನ್ನು ಇಡುವುದಿಲ್ಲ.
9) ಈ ಕೆಳಗಿನ ದೇವಸ್ಥಾನದ ಸೊತ್ತುಗಳನ್ನು ತನ್ನ ಸ್ವಂತಕ್ಕೆ ಇಟ್ಟುಕೊಂಡು ದುರುಪಯೋಗ ಮಾಡಿದ್ದಾರೆ.
    a) ರಥದ ಕೊಟ್ಟಿಗೆಯ ಕಲ್ಲಿನ ಹಲಗೆಗಳು.
    b) ಮೈಸೂರು ಮಹಾರಾಜರಿಂದ ದೇವಸ್ಥಾನಕ್ಕೆ ಕೊಡಲ್ಪಟ್ಟ - ಆನೆ.
    c) ಸುಬ್ಬಾ ಭಟ್ಟ ಎಂಬವರಿಂದ ದೇವಸ್ಥಾನಕ್ಕೆ ಅರ್ಪಿಸಲ್ಪಟ್ಟ ರತ್ನಗಳ ಮಾಲೆ.
    d) ಕಾಣಿಕೆ ಡಬ್ಬಿಗಳಲ್ಲಿ ಜಮೆಯಾದ ಹಣ ಮತ್ತು ಇತರ ಕಾಣಿಕೆಗಳು (ಇವುಗಳನ್ನು ಸ್ವಾಮಿಯು ತನ್ನ ಇಚ್ಛೆ ಬಂದಂತೆ ವಾಡಿಕೆಗೆ ವಿರೋಧವಾಗಿ ಒಡೆಯುತ್ತಾರೆ.)
10) ವಾಲಗ ಗೋಪುರದ ಹತ್ತಿರದ ಸ್ಥಳವನ್ನು ಆಕ್ರಮಿಸಿ ತನಗೆ ಬೇಕಾದ ಕಟ್ಟೋಣ ಕಟ್ಟಿಸಿದ್ದಾರೆ.
11) ದೇವಸ್ಥಾನದ ಹೆಸರಿನಲ್ಲಿ ರೂ. 15,000 ಸುಳ್ಳು ಸಾಲವನ್ನು ಮಾಡಿ, ತನ್ನ ಮಠಕ್ಕೆ ಬರತಕ್ಕದ್ದೆಂದು ಮಾಡಿದ್ದಾರೆ.
12) ತನ್ನ ಆಡಳಿತೆ ಕಾಲದ ಆಯವ್ಯಯಗಳ ಲೆಕ್ಕಗಳನ್ನು ಕಮಿಟಿಯವರಿಗೆ ಒಪ್ಪಿಸಲಿಕ್ಕೆ ಮತ್ತು ದೇವಸ್ಥಾನದ ಆಭರಣಗಳನ್ನು ತೋರಿಸಲಿಕ್ಕೆ ನಿರಾಕರಿಸಿದ್ದಾರೆ. ಮತ್ತು -
13) ದೇವಸ್ಥಾನದ ಹಣವನ್ನು ದುರುಪಯೋಗ ಮಾಡಲು ಅನುಕೂಲವಾಗುವಂತೆ, ಕ್ರಮವಾಗಿ ನೇಮಿಸಬೇಕಾಗಿದ್ದ ಮಣೆಗಾರರನ್ನು ನೇಮಿಸಲಿಲ್ಲ.

ಪಾರಾ 34 : ಸ್ವಾಮಿಯ ಮೇಲ ಅಷ್ಟು ಆಪಾದನೆಗಳಿದ್ದರೂ, ಕಮಿಟಿ ಯವರು ಅವರನ್ನು ಅಮಾನತು ಮಾಡಿದ್ದಾರೆ ಮಾತ್ರ. ಇದರಿಂದ ಸ್ವಾಮಿಗೆ ಶುದ್ಧ ಬನಾವಟು (Rank forgery) ಶಾಸನವನ್ನು ತಯಾರಿಸಿ ದೇವಸ್ಥಾನದ ಮೇಲೆ ತನಗೆ ಹಕ್ಕನ್ನು ಸ್ಥಾಪಿಸಲು ಅವಕಾಶ ಕೊಟ್ಟಂತಾಯಿತು. ಸಾಧಾರಣ 100 ವರ್ಷಗಳಿಂದ ಅಥವಾ 1817ರಿಂದ 1886ರ ವರೆಗೆ

ಯಾರೂ ಅರಿಯದ ಈ ಶಾಸನವು ವ್ಯಾಜ್ಯವು ದಾಖಲಾದ 2 ಅಥವಾ 3 ತಿಂಗಳೊಳಗೆ ಅಕಸ್ಮಾತ್ತಾಗಿ ತನಗೆ ಸಿಕ್ಕಿತ್ತೆಂದು ಹಾಜರುಪಡಿಸಿದ್ದು ವಿಚಿತ್ರವಾಗಿದೆ. ವಾದಿ ಸ್ವಾಮಿಯು ಮತ್ತು ಅವರ ರಾಮಕೃಷ್ಣ ಐತಾಳರು ಹಾಜರುಪಡಿಸಿದ ದಾಕ್ಲೆಗಳಿಂದ ತಿಳಿಯುವುದೇನೆಂದರೆ - ಸ್ವಾಮಿಯು ಸಣ್ಣ ಪ್ರಾಯದವರಾಗಿ ಸರಿಯಾದ ವ್ಯವಹಾರ ವಿಚಾರ ಗೊತ್ತಿಲ್ಲದ ವರಾಗಿದ್ದು, ಮಠದ ಮೆನೇಜರರಾದ ತನ್ನ ಸ್ವತಃ ಅಣ್ಣನಾದ ರಾಮಕೃಷ್ಣ ಐತಾಳರ ಕೈಗೊಂಬೆಯಾಗಿ ಕೆಲಸ ಮಾಡಿದ್ದಾರೆ. ಮಠಕ್ಕಿಂತಲೂ ಹೆಚ್ಚಿನ ಉತ್ಪತ್ತಿಯುಳ್ಳ ಸುಬ್ರಹ್ಮಣ್ಯ ದೇವಸ್ಥಾನದ ಅಧಿಕಾರವು ತನ್ನ ಸ್ವಾರ್ಥವನ್ನು ಸಾಧಿಸಲು ಯೋಗ್ಯ ಸಂದರ್ಭವೆಂದು ತಿಳಿದು, ಅದನ್ನೇ ಪಡೆದುಕೊಳ್ಳಲು ಸಹಜ ವಾಗಿಯೇ ಆತುರರಾಗಿದ್ದಾರೆ.

**ಪಾರಾ 35 :** ............ ............ ಆದುದರಿಂದ ನಾನು ಈ ಕೆಳಗಿನಂತೆ ತೀರ್ಮಾನಿಸಿದ್ದೇನೆ.

೧. ವಾದಿಯು ದೇವಸ್ಥಾನದ ಮೇಲೆ ತನಗೆ ಹಕ್ಕಿರುವುದೆಂದು ವಾದಿಸಿದ ಹಕ್ಕನ್ನು ರುಜುಪಡಿಸಲಾರದವನಾಗಿದ್ದಾನೆ.

೨. ಶ್ರೀ ಸುಬ್ರಹ್ಮಣ್ಯ ದೇವಸ್ಥಾನವು 1863ನೇ ಇಸ್ವಿಯ XXನೇ ಆಕ್ಟ್ ಪ್ರಕಾರ ದೇವಸ್ಥಾನದ ಕಮಿಟಿಯ ಅಧಿಕಾರಕ್ಕೊಳಪಟ್ಟಿದೆ.

೩. ಅದರ ಸದಸ್ಯರು ನ್ಯಾಯವಾದ ಮತ್ತು ಸಾಕಷ್ಟು ಕಾರಣಗಳಿಗಾಗಿ, ವಾದಿಯನ್ನು ಅಧಿಕಾರದಿಂದು ತೆಗೆದು. ಅದರ ಮೊಕ್ತೇಸರಿಕೆಯನ್ನು ರದ್ದು ಪಡಿಸಿದ್ದಾರೆ.

ಆದ್ದರಿಂದ ಈ ವ್ಯಾಜ್ಯವು ಖರ್ಚು ಸಮೇತ ವಾದಿಯ ವಿರೋಧವಾಗಿ ಡಿಸ್‌ಮಿಸ್ ಮಾಡಲಾಗಿದೆ.

## ಮಣೆವ್ಯಾಜ್ಯ ಜಜ್‌ಮೆಂಟ್

ಪುತ್ತೂರು ಡಿಪ್ಟಿ ಕಲೆಕ್ಟರ್ ಮುನ್ಸಿಫ್ ಕೋರ್ಟಿನಲ್ಲು 31ನೇ ಅಕ್ಟಂಬ್ರ 1876ನೇ ಯಿಸಿವಿ.
ಹಾಜ್ರು ಮಂಗೀಷರಾಯ
ಸಂ। 1876ನೇ ಯಿಸವಿ ಮೂಲ ವ್ಯಾಜ್ಯ ನಂಬ್ರ 279
ವಾದಿ - ವಿದ್ಯಾಪೂರ್ಣ ಸ್ವಾಮಿ
ವಕೀಲ-ಅಂತೋನಿ ಜುವಾಮು ಬೌತ್ತಿಸ, ಧಾರೇಶ್ವರ ಲಕ್ಷ್ಮಿನಾರ್ಣಪ್ಪ.
ಪ್ರತಿವಾದಿ - ಹೆಬ್ಬಾರ ಸುಬ್ರಾಯ
ವಕೀಲ - ರಘುನಾಥಯ್ಯ, ಮಂಗೀಷ್ ರಾವ್, ನಾರಾಯಣ ರಾವ್.

ವಾದಿಯು ತಾನು ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ಮೊಕ್ತೇಸರನಾಗಿರುವುದ ರಿಂದ ಈ ದೇವಸ್ಥಾನದಲ್ಲಿ ಹೆಬ್ಬಾರ ವೃತ್ತಿಯನ್ನು ನಡೆಸುವ ಸೌಕರ ಪ್ರತಿವಾದಿಯು ವಿವಾದದಲ್ಲಿರುವ 3 ಕಾರ್ಯಗಳನ್ನು ನಡೆಸದೆ ಇರುವದರಿಂದ ತನಗೆ ಆದ ಮಾನನಷ್ಟ ರೂಪ್ಯಾ 200 ಪ್ರತಿವಾದಿಯಿಂದ ತನಗೆ ಬರಬೇಕೆಂದು ವಾದಿಸುತ್ತಾನೆ.

1. ಭಾವ ಸಂವತ್ಸರದ ಪುಷ್ಯ ಶುದ್ಧ 6ರಲ್ಲು ದೇವರನ್ನು ರಥಕ್ಕೆ ಕೊಂಡು ಹೋಗುವಾಗ್ಗೆ

ಸಂಗಡಹೋದ ಉದ್ದಿಷ್ಯ ವಿದ್ಯಾನಂದ ತೀರ್ಥ ಸ್ವಾಮಿಯರ ಒಟ್ಟಿನಲ್ಲು ಪ್ರತಿವಾದಿಯು ಜೀವಿಯಲ್ಲಿ ದೀವಟಿಗೆ ಹಿಡಿಯಲಿಲ್ಲ.

2. ಸದ್ರಿ ಸಂವತ್ಸರದ ಫಾಲ್ಗುಣ ಶುದ್ಧ ದಿವಸ ಸುಬ್ರಹ್ಮಣ್ಯ ದೇವರ ಮಹಾಪೂಜೆಗೆ ವಾದಿಯು ಈತನ ಶಿಷ್ಯ ಸಮೇತ ಹೋದಾಗ ಪ್ರತಿವಾದಿಯು ಮಣೆಯನ್ನು ಹಾಕಲಿಲ್ಲ.

3. ಈ ಸಂವತ್ಸರದ ಚೈತ್ರ ಶುದ್ಧ ೧ರಂದು ಆಗುವ ಉತ್ಸವಕ್ಕೆ ಪಂಚಾಂಗ ಶ್ರವಣ ವಗೈರೆ ಕೆಲ್ಸಕ್ಕೆ ವಾದಿಯನ್ನು ದೀವಟಿಗೆ ಸಮೇತ ಪ್ರತಿವಾದಿಯು ಕರಕೊಂಡು ಹೋಗಿ ಕೂತುಕೊಳ್ಳಲಿಕ್ಕೆ ಮಣೆ ಹಾಕಬೇಕಿತ್ತು. ಹಾಗೆ ಪ್ರತಿವಾದಿಯು ಮಾಡಲಿಲ್ಲ. ಸದ್ರಿ 3 ಕೆಲ್ಸಗಳು ಪ್ರತಿವಾದಿಯು ಮಾಡತಕ್ಕದ್ದಾಗಿರ್ವಾಗ ಆತನು ಅವುಗಳನ್ನು ಮಾಡದೇ ಇರ್ವದರಿಂದ ಮಾನನಷ್ಟಕ್ಕಾಗಿ ಈತನ ಮುಖ್ಯ ಸಾಧನೆ ಆಗಿರುತ್ತದೆ.

ಪ್ರತಿವಾದಿಯು ತಾನು ವಿವಾದದಲ್ಲಿರ್ವ ದೇವಸ್ಥಾನದ ಹೆಬ್ಬಾರ ಮೊಕ್ತೇಸರ ಹೊರತು ನೌಕರನಲ್ಲ. ವಿವಾದದಲ್ಲಿರುವ ಕೆಲ್ಸಗಳನ್ನು ತಾನು ಮಾಡುವವನೂ ಅಲ್ಲ. ಮಾಡಲೂ ಇಲ್ಲ. ಉಗ್ರಾಣದಲ್ಲಿರ್ವ ಸಾಮಾನನ್ನೂ, ತನಗೆ ಕೊಡಿಸದೇ ತನಗೆ ಕೊಡ್ಸಿದನೆಂತ ನನ್ನ ಮೇಲೆ ವಾದಿಯು ಮಾಡಿದ ನಂಬ್ರ 171/1868ನೇ ವ್ಯಾಜ್ಯ ಅದರ ಮೇಲೆ ಆದ ನಂಬ್ರ 313/ 1869ನೇ ಅಪೀಲ್‌ನಲ್ಲಿ ಡಿಸ್‌ಮಿಸ್ ಆದ್ದರಿಂದಲೂ 1874ನೇ ಇಸವಿ ಇಲ್ಲಿ ಆದ ಚೋರಿ ನಂಬ್ರದಲ್ಲಿ ತನ್ನನ್ನು ಸೇರಿಸಬೇಕೆಂದು ವಾದಿಯು ಮಾಡಿದ ತಂತ್ರಗಳು ದುಷ್ಪ್ರಯತ್ನಗಳು ನಿಶ್ಚಲವಾದ್ದರಿಂದ ಜಾತಿ ಸಂಬಂಧದ ದೇಶಿಕ ವಾದಿಯು ಸುಳ್ಳು ವ್ಯಾಜ್ಯ ಮಾಡಿದ್ದಾನೆಂತ ವಾದಿಸುತ್ತಾನೆ.

ಪ್ರತಿವಾದಿಯು ಹೆಬ್ಬಾರ ವೃತ್ತಿಯನೆಂಬುದು ನಿರ್ವಿವಾದವಾದದ್ದು. ಹೆಬ್ಬಾರ ವೃತ್ತಿ ಎಂದರೆ ತುಳು ರಾಷ್ಟ್ರದಲ್ಲಿ ಹಿರೇ ಬ್ರಾಹ್ಮಣರದ್ದು. ಉಪಾಧಿಯವ ನಾಗಿರುವ ಪ್ರತಿವಾದಿಯು ಶಿವಬ್ರಾಹ್ಮಣ ವಾದಿಯು ಶಿವಳ್ಳಿ ಬ್ರಾಹ್ಮಣ. ಶಿವ ಬ್ರಾಹ್ಮಣರಿಗೆ ಅಡ್ಡ ಪಂಕ್ತಿಯಲ್ಲಿ ಶಿವಳ್ಳಿ ಬ್ರಾಹ್ಮಣರು ಕೂತು ಮಾಡುವ ಭೋಜನ ಸಂಬಂಧ ಉಳ್ಳವಾದಿ ಪ್ರತಿವಾದಿಯರೊಳಗೆ ಪ್ರತಿವಾದಿಯ ಜಾತಿಗಳ ವಾದಿಯ ಮೇಲು ಪ್ರತಿವಾದಿಯ ಜಾತಿ ಕೀಳು ಎಂತ ತೋರಿಸಲಿಕ್ಕೆ ವಿವಾದದಲ್ಲಿರುವ 3 ಕಾರ್ಯಗಳನ್ನು ಪ್ರತಿವಾದಿಯು ನಡೆಸುವವನೆಂತ ಪ್ರತಿವಾದಿ ಕಡೆ ವಕೀಲನು ಚರ್ಚಿಸುತ್ತಾನೆ.

ವಿವಾದದಲ್ಲಿರುವ 3 ಕಾರ್ಯಗಳು ವಾದಿಯ ಗುರುಗಳ ಪರಂಪರೆ ಯಿಂದ ಅವರಿಗೆ ಪ್ರತಿವಾದಿಯ ಹಿರಿಯರು ಪರಂಪರೆಯಿಂದ ನಡೆಸಿ ಬಂದವರೆಂತ ವಾದಿಯು ತನ ಕೈಫೇತಿನಲ್ಲಿ ಹೇಳಲಿಲ್ಲ.

ಯಾವ ಸ್ವಾಮಿಯರಿಗೆ ಅವರ ಜವಿಯಲ್ಲಿ ದೀವಟಿಗೆಯನ್ನು ಹಿಡಿಯುವ ಶೂದ್ರರಲ್ಲಿ ಆದರೂ ಕೀಳು ಮನುಷ್ಯನೆಂಬ ಸಂಗ್ತಿಯು ಯಾರಿಂದಲೂ ನಿರಾಕರಿಸತಕ್ಕದಲ್ಲ. ಇದು ರೂಢಿಯಲ್ಲಿರುವಂತಾದ್ದು. ವಾದಿಗೆ ಮಾತ್ರ ದೀವಟಿಗೆ ಹಿಡಿಯುವ ಶಿವ ಬ್ರಾಹ್ಮಣನೆಂಬ ಪ್ರತಿವಾದಿ ಆಗಲಿಕ್ಕೇನೂ ನಿಬಂಧನೆ ಯಾಗಲೀ, ಕಾರಣವಾಗಲೀ ವಾದಿಯ ಕಡೆಯಿಂದ ಹ್ಯಾಗೂ ತೋರಿಸಿ ಕೊಡಲಿಲ್ಲ. ಸದ್ರಿ ಸಂಗ್ತಿಗಳಿಂದ ವಾದಿಯ ವ್ಯಾಜ್ಯವನ್ನು ಖರ್ಚು ಸಮೇತ ತೆಗೆದುಹಾಕಿ ವಾದಿಯು ಪ್ರತಿವಾದಿ ಕಡೆ ಕೋರ್ಟು ಖರ್ಚನ್ನು ವರ್ಷ ಒಂದರ ಶೇಕಡಾ 6

ಪ್ರಕಾರ ಆಗುವ ಬಡ್ಡಿ ಸಮೇತ ತೆರಬೇಕೆಂತ ಅಪ್ಪಣೆ ಕೊಡಲಾಯಿತು.

## ಈ ವ್ಯಾಜ್ಯದಲ್ಲಿ ದಾಖಲಾದ ಅಪೀಲು

Judgement of the Appeal Suit No. 578 of 1876

Present J.W. Best Eaq.

Vidyapoorna Swami Plff. Appealcnts

Verses Rep.

Subraya Hebbara Deft.

This is an appeal by the plff. against the decree of the Dt. Mff. of Puttur dismissing the suit the object of which was to recover from the Deft. Rs. 200-00 damages for injury done to the plaintiff. repultation by reason of he Defendent having niglected to do the following acts.

This appeal Comming on for hearing on the 25th day on june 1878 before the Dt. judge J.W. Best Esq.

The Judgement A and B say nothing about the plain tiffs' right to have seats provided for him by the Hebbars and from the evidence of the witnesses examined in this case it is clear that such seats have hither to been provided by the plaintiffs' own servant **Gindi Narayana**

It is unnecessary to decide whether plaintiff and defendent are of the same cast are not.

I agree with the munsiff has failed to make out any caste for damages.

This appeal is therefore dismissed and defendents' Costs of opposing it will be paid by the plaintiff.

Judgement pronounced on the 26th June 1878.

(Sd.) J.W. BEST

(True Copy) (Dt. Judge)

ದೇವಸ್ಥಾನದ ಆಡಳಿತೆಯವನಾದ ಹೆಬ್ಬಾರನು ಮಣೆ ಇಡುವವನಲ್ಲ. ಮಾಧ್ವ ಸ್ವಾಮಿಯ ಕೆಲಸದ ಗಿಂಡಿ ಮಾಣಿಯೇ ಮಣೆ ಇಡುವವನು ದೀವಿಟಿಗೆ ಹಿಡಿಯುವವನು ಆಗಬೇಕೆಂದು ತೀರ್ಪು ಕೊಡಲ್ಪಟ್ಟಿದೆ.

-------

ಉಪ್ಪಿನಂಗಡಿ ತಾಲೂಕು ತಹಶೀಲ್‌ದಾರರ ಸೀಲ್

ವುಪ್ಪಂಗಡಿ ತಾಲ್ಲುಕ ಕಚೇರಿಯಿಂದ

ಇಸ್ತಾರು ನಾಮ ಯಾವತ್ತು ಜನರಿಗೆ ತಿಳಿಯಪಡಿಸುವುದೇನೆಂದರೆ : ಸುಬ್ರಹ್ಮಣ್ಯ ಜಾತ್ರೆ

ವೇಳ್ಯವಲ್ಲಿ ಕೆಳಗೆ ಕಾಣ್ಸೆವಣಾವ ಅಕ್ರಮಗಳು ಕೆಲವು ದೇವಸ್ಥಾನದ ಕಡೆಯಿಂದಲೂ ಕೆಲವು ಊರ ಜನ ಮತ್ತು ಜಾತ್ರೆಗೆ ಕೂಡಿದ ಜನರಿಂದ ಸಹಾ ನಡ್ಸೆವಣಾಗುತ್ತದೆ ಎಂತ್ತಾ ಹಜ್ರು ಕಲೆಕ್ಟರ್ ಸಾಹೇಬರವರ ತಿಳುವಳಿಕೆಗೆ ಬಂದು ಅವುಗಳು ಮನ್ನಾಪಡಿಸಬೇಕೆಂತ ವಗೈರೆ ಹಜ್ರು ಹುಕುಂ ತಲುಪಿರುವುದರಿಂದ ಅಪ್ಪಣೆ ಕೊಡ್ವದೇನೆಂದ್ರೆ.

ಸದ್ರಿ ಅಕ್ರಮವಾದ ಕೃತ್ಯಗಳು ತಕ್ಷೀರು ಆಗ್ವದ್ರಿಂದ ಇನ್ನುಮುಂದೆ ಸಾಫ್ ಮನ್ನಾ ಮಾಡತಕ್ಕದಾಗಿದೆ. ಇದ್ಕೆ ವಿರೋಧವಾಗಿ ಯಾರೂ ಸದ್ರಿ ಅಕ್ರಮಗಳು ನಡ್ಸುತ್ತಾರೋ ಆತವಾಲಿವಕ್ಕೆ ಶೇರಿ ಸಹಾಯ ಮಾಡುತ್ತಾರೋ ಅಂತವರನ್ನು ಇಂಡಿಯನ್ ಪೆನಲ್‌ಕೋಡಿನಲ್ಲಿ ಯಾವ ತಕ್ಸೀರಿಗೆ ನಿರ್ಣಯಿಸಲಾದ ಶಿಕ್ಷೆಗೆ ಗುರಿಮಾಡಿ ದಂಡಿಸಲಾದೀತು ಎಂತ ಇದರ ಮೂಲಕ ಖಂಡಿತವಾಗಿ ತಿಳಿಸೋಣಾಗ್ಿಯದೆ ತಾ. 24 ದಶಂಬ್ರ 1868 ಇಸ್ವಿ ಮೊ। ಸುಬ್ರಹ್ಮಣ್ಯ.

ಸದ್ರಿ ಅಕ್ರಮಗಳು ಯಾವುದೆಂದ್ರೆ :

1. ಜಾತ್ರೆ ವೇಳ್ಯೆ ಮಾರಾಟಕ್ಕೆ ತರೋಣಾದ ಜಾನ್ವಾರುಗಳ ಮೇಲೆ ದೇವಸ್ಥಾನದವರು ಅಕ್ರಮವಾಗಿ ತೆರಿಗೆ ವಸೂಲು ಮಾಡುವದು.

2. ರಥೋತ್ಸವ ದಿವಸ ತೇರ ಬೀದಿಯಲ್ಲಿ ತಲೇಗೆ ಕಟ್ಟಿದ ರುಮಾಲು ವಗೈರೆ ಹರಿದು ಬಿಸಾಡ್ವದು.

3. ವಿಧವ ಹೆಂಗ್ಸರಿಗೆ ಅಪಮಾನ ಆಗ್ವ ಹಾಗೆ ಬಾಯಿ ಬಡಕೊಳ್ಳುವದು.

4. ಸಪ್ತಮಿಾ ದಿವಸ ಆರಾಟದ ಬಗ್ಗೆ ದೇವರು ಕುಮಾರಧಾರೆಯಲ್ಲಿ ಅವಭೃತ ಸ್ನಾನ ಮಾಡಿ ಬರುತ್ತಾ ಸುಬ್ಬಪ್ಪನ ಸುಲಿಗೆ ಎಂತ ಆಜುಬಾಜು ಅಂಗಡಿಗಳಲ್ಲಿ ಸುಲಿಗೆ ಮಾಡುವದು.

5. ಸರಕಾರ ರಸ್ತೆಯಲ್ಲಿ ಅಂಗಡಿ ಹಾಕಿದವರಿಂದ ಕಿನಾರೆ ಮನೆ ಜನರು ಬಾಡಿಗೆ ಎಂತ ವಸೂಲು ಮಾಡ್ವಂತ್ತದ್ದು.

ಸಹಿ ..................

ಈ ಇಸ್ತಿಹಾರು ತಹಶಿಲ್ದಾರ್

## ಎರಡು ಪತ್ರಗಳು

2ನೇ 3ನೇ ಮುಕ್ತೇಸರರ ಬಳಿಗೆ ರವಾನೆ ನಂ. 9 ತಾ. 8-1-'86

ಶಿವಳ್ಳಿ ಮತ ಸ್ಥಾಪನೆಗಳ ಕಮಿಟಿ ಮೆಂಬರರ ಕ್ಯಾಂಪಿನಿಂದ

ಸುಬ್ರಹ್ಮಣ್ಯ ಕನ್ಯಾ ಕುಕ್ಕೆಗಾಯ್ದು ಮಾತೋಭಾರು ಸುಬ್ರಹ್ಮಣ್ಯ ದೇವಳ ವೇವಳ ಮೊಕ್ತೇಸರರು 2ನೇ ರಾಮಕೃಷ್ಣ ಆಸ್ರಣ್ಣರು 3ನೇ ನರಸಿಂಹ ಆಸ್ರಂಣರು 4ನೇ ಕೃಷ್ಣಯ್ಯ ಇವರಿಗೆ ತಾಕೀತು.

ಸದ್ರಿ ಸುಬ್ರಹ್ಮಣ್ಯೇಶ್ವರ ದೇವಸ್ಥಾನದಲ್ಲಿ ಕಾಲಿವೆ ವನದ ನೆವನದ ಮೇಲೆ ವಳಬಾರ ಕೂಡದಾಗಿ 1ನೇ ಮುಕ್ತೇಸರರು ಅಡ್ಡಿ ಕಾಯ್ಯುತಾರೆಂತ ತಿಳಿತದೆ. ಈ ಸಂಬಂಧ ಬಡ ಜನರಿಗೆ ಬೋನಕ್ಕೆ ವಿಘ್ನವಾಗಿ ಅಂಥವರು ಪ್ರಯಾಸ ಪಡುವುದಾಗುತ್ತದೆ. ಇನ್ನು ಈ ರೀತಿ ಮಾಡಕೂಡದು. ಕ್ರಮವಾದ ಬಹಿಷ್ಕೃತರಿಗೆ ಮಾತ್ರ ಅಟಕಾಯಿಸಬೇಕಲ್ಲದೆ ಬರಹ ಮೂಲಕ ಪಡಿಯದೇ ಇರುವಂತವರನ್ನು ಯಾವಾಗ್ಯು ತಡುಭೋಜನಕ್ಕೆ ವಿಘ್ನಪಡಿಸಕೂಡದು. ತಾ.

1-8-'86 ಮೊಕ್ಕಾ ಎಡಮಂಗ್ಲ ತರುಮೋರಿ ನಾರಾಯಣ ಶಗ್ರಿತ್ತಾಯನ ದುಜು (ಇನ್ನು ಎರಡು ದಸ್ಕತು ಇದೆ)

ಇದರಲ್ಲಿ 1ನೇ ಮುಕ್ತೇಸರರಾಗಿದ್ದ ಸ್ವಾಮಿಗಳು ತಮಗೆ ವಿರೋಧವಿದ್ದ ವರನ್ನೆಲ್ಲಾ ದೇವಸ್ಥಾನದಲ್ಲಿ ಊಟಕ್ಕೆ ಬಿಡುತ್ತಿರಲಿಲ್ಲವೆಂದು ಕೂಡಾ ವ್ಯಕ್ತವಾಗುತ್ತದೆ.

## Madras Gageteer William Travellar

Subramania : Village in Uppinangady Taluk of S.K. 12'-41' N. and 75'-36' E. of the foot of mountain name of which Pushpagiri boarder of the District Coorg Elevation 5626 feet above the sea. At its Summit are many aneient cairus. In the village is an old famous. Saivate Temple and it is on the chief centres of surpent warship in South India. Anual festival in November and december. Gattu fair held : 5000 Cuttbare normaly brought from Mysere.

ಇದರಲ್ಲಿ 8-1-1886ರ ವರೆಗೆ ಶ್ರೀ ಸುಬ್ರಹ್ಮಣ್ಯ ದೇವರಿಗೆ ಸುಬ್ರಹ್ಮಣ್ಯೇಶ್ವರ ಎಂಬ ಹೆಸರಿತ್ತು. ಆ ಮೇಲೆ ಮಾಧ್ವ ಸ್ವಾಮಿಗಳು ಸುಬ್ರಹ್ಮಣ್ಯ ದೇವಸ್ಥಾನಕ್ಕೆ ಬಂದ ನಂತರ ಕಾಣಿಕೆ ವರಾಡ ವಗೈರೆಗಳನ್ನು ತನ್ನ ಸ್ವಾಧೀನ ಮಾಡಿಕೊಳ್ಳಲು ದೇವರ ಹೆಸರನ್ನು ಸುಬ್ರಹ್ಮಣ್ಯ ಸ್ವಾಮಿ ಎಂದು ತನ್ನ ಹೆಸರಿನಂತೆ ಮಾಡಿಸಿಕೊಂಡರೆಂದು ತಿಳಿದುಬರುತ್ತದೆ. ಮದರಾಸು ಗಜೇಟಿಯರ್‌ನಲ್ಲೂ ಶಿವಸಂಮ್ಮಂಧವಾದ ಶೈವಾಲಯವೆಂದೇ ವಿವರಿಸಿರುವರು.

## ತಾಮ್ರ ಶಾಸನ

ಸ್ವಸ್ತಿ ಶ್ರೀ ಗಣಪತಯೇ ನಮಃ ಶ್ರೀ ಗುರುಭ್ಯೋ ನಮಃ

॥ ನಮಸ್ತುಂಗರಶಿರಃ ॥

ಶ್ರೀ ಮನ್ಮಹಾ ರಾಜಾಧಿರಾಜ ರಾಜಪರಮೇಶ್ವರ ಶ್ರೀವೀರ ಹರಿಹರ ರಾಯರ ಕುಮಾರ ಪ್ರತಾಪ ಬುಕ್ಕ ಮಹಾರಾಯರ ನಿರೂಪದಿಂ ಮಂಗಳೂರ ರಾಜ್ಯವನ್ನು ಗೋವೆಯ ಬಾದಷವೊಡೆಯರು ಆಳುತಿಹಲ್ಲಿ ಶಕವರುಷ ೧೩೨೯ ವರ್ತಮಾನ ವ್ಯಯ ಸಂವತ್ಸರದ ಚೈತ್ರ ಶು। ೧ರಲ್ಲು ಕಡಬದ ಸ್ಥಳದ ಕುಕ್ಕೆಯ ದೇವರಿಗೆ ಕೊಟ್ಟ ಧರ್ಮಶಾಸನದ ಕ್ರಮವೆಂತೆಂದರೆ ಕುಕ್ಕೆಯ ದೇವರಿಗೆ ಉಳ್ಳಂಥಾ ದೇವರ ಈ ಸ್ಥಳದಲ್ಲೂ ಅರಮನೆಗೆ ನಾಲ್ವರು ಪಾದಮೂಲಿಗಳು ತೆರುವ ವಸ್ತುವಿನ ವಿವರ................ಇನ್ನೂರ ಎಪ್ಪತ್ತು ಹೊನ್ನಮ್ಮ ಆ ಚಂದ್ರಾರ್ಕಸ್ಥಾಯಿ ಆಗಿ ನಡೆದುಬಹುದು. ಈ ಧರ್ಮವನು ಬಂಗರ ವೊಡೆತನದಲ್ಲಿ ಅಲ್ಲಿಯ ಸ್ಥಾನೀಕರು ನಡೆಸಿಬಹರು. ॥ ಸ್ವದತ್ತ ॥ ಷಷ್ಠಿ ॥ ಏಕೈವಃ ಭಗಿನ ಗ್ರಾಹೇಸಃ ॥ ಶ್ರೀ ಶ್ರೀ ಶ್ರೀ ವೊಪ್ಪ ಬಾಶಂಣನ ಬರಹ.

**ಶ್ರೀ ಸ್ಕಾಂದ ಪುರಾಣೇ ಸನತ್ಕುಮಾರ ಸಂಹಿತಾಯಾಂ ಸಹ್ಯಾದ್ರಿಖಂಡೆ**

**ಶ್ರೀ ಪರಶುರಾಮ ಕ್ಷೇತ್ರೋತ್ಪತ್ತಿರ್ನಾಮಷಷ್ಠೋಧ್ಯಾಯಃ ॥**

ವಿಜ್ಞಾಯ ಪೂರ್ವಸೀಮಾಂ ತಾಂ ಭುವಮಭ್ಯುತ್ಸಸರ್ಜ ಹ । ಗೋಕರ್ಣ ಕ್ಷೇತ್ರ ಮುಖ್ಯಾನಿ

ತೀರ್ಥಾನ್ಯಾಯತನಾನಿ ಚ ॥೪೭॥ ತತ್ರ ಪ್ರಕಾಶಮಗಮ- ದ್ಗೋಕರ್ಣಂ ಜಲಧೇಸ್ತಟೇ । ತದಾ ರಾಮಃ ಪ್ರಹೃಷ್ಟಾತ್ಮಾತಾನ್ ವಿಪ್ರಾನ್ ಪ್ರತ್ಯಭಾಷತ ॥೪೮॥ ಗೋಕರ್ಣ ಕ್ಷೇತ್ರವರ್ಯಸ್ತು ದತ್ತೋಽಯಂ ಭವತಾಂ ಮಯಾ। ದೇವಸ್ಥಾನಾನಿ ಕ್ಷೇತ್ರಾಣಿ ತೀರ್ಥಾನ್ಯಾಯತನಾನಿ ಚ ॥೪೯॥ ತಪಶ್ಚರಧ್ವಂ ವಿಧಿವದ್ಯಥಾಪೂರ್ವಮವಸ್ಥಿತಾಃ । ಸುಪುತ್ರ ಪೌತ್ರ ಸಹಿತಾ ದೇವತಾ- ತಿಥಿ ಪೂಜಕಾಃ ॥೫೦॥ ಧನಧಾನ್ಯ ಸಮೃದ್ಧಾರ್ಥಾಃ (ನ ಸಂಭವೇಥಾಃ ಕದಾಚನ। ಮಧುನಾಮ್ನಾಭಿಧಾನೇನ ವಿಶ್ವಸ್ತಾಯಾಂ ಕಲೌಯುಗೇ ॥೫೧॥ ಪುತ್ರಸ್ತು ಜಾಯತೇ ತೇನ ಯುಷ್ಮಾಕಂ ಚ ಪರಾಭವಃ ॥ ಭವಿಷ್ಯತಿನ ಸಂದೇಹೋ ಸ್ವಮತಾ ಸೂಯಕಾರಣಾತ್ ॥೫೨॥ ಈಶ್ವರಸ್ಯ ಪ್ರಸಾದತ್ವಾದ್ಭುವ್ಯಂ ಶ್ರೇಯೋ ಭವಿಷ್ಯತಿ । ॥ಋಷಯ ಊಚುಃ ॥ ಕಿಂ ಗೋತಂ ಚ ಕಥಂ ಜಾತಾಃ ಕಿಂ ನಾಮ ತೇನ ನಿರ್ಮಿತಾಃ । ಏತತ್ಸರ್ವಮಶೇಷೇಣ ವಿಪ್ರಾಣಾಂ ಬ್ರೂಹಿ ಸೂತಜ ॥೫೩॥ ಸೂತ ಉವಾಚ ಶೃಣಾಧ್ವಮೃಷಯಃ ಸರ್ವೇ ಕಥಾಮತಿ ಪುರಾತನೀಂ । ಷಣ್ಮುಖಸ್ಯ ಯಥ್ಯೆವಾಹ ಭಗವಾನ್ ಗೋವೃಷಧ್ವಜಃ ॥೫೪॥ ತತ್ತೇಹಂ ಸಂಪ್ರವಕ್ಷ್ಯಾಮಿ ಭವಂತಃ ಶೃಣುತಾದರಾತ್ । ಆದೌ ರಸಸಹಸ್ರಾಣಿ ವಿಪ್ರಾಃ ಶೈವೇನ ನಿರ್ಮಿತಾಃ ॥೫೫॥ ಪಶ್ಚಾತ್ತು ಷಟ್ಸಹಸ್ರಾಣಿ ವಿಷ್ಣುನಾ ನಿರ್ಮಿತಾಖಿಲಾಃ ತಾವಂಶ್ಯೇವ ಸಹಸ್ರಾಣಿ ಭೂಸುರಾ ಬ್ರಹ್ಮ ನಿರ್ಮಿತಾಃ ॥೫೬॥ ಶೇಷಾಂ ಶುಶ್ರೂಷಣಾರ್ಥಾಯ ಶೂದ್ರಾಸ್ತದ್ದ್ವಿಗುಣಾಃ ಕೃತಾಃ । ಆದೌ ಸೃಷ್ಟ್ವಾ ಮಯಾ ವಿಪ್ರಾಃ ಪೂಜಾರ್ಥಂ ಮಮ ನಿತ್ಯಶಃ ॥೫೭॥ ಶಿವದ್ವಿಜೇತಿ ವಿಖ್ಯಾತಾಃ ಸರ್ವಶಾಸ್ತ್ರೇಷು ಕೋವಿದಾಃ । ಷಟ್ಕರ್ಮ ನಿರತಾಃ ಶಾಂತಾ ವೇದಪಾಠರತಾಃ ಸದಾ ॥೫೮॥ ಪಂಚಯಜ್ಞಪರಾ ನಿತ್ಯಂ ಗೋತ್ರಮಷ್ಟಾದಶೋತ್ತಮಾಃ । ಅಂಗೀರಸೋ ಭರದ್ವಾಜೋ ವಿಶ್ವಾಮಿಶ್ರೋಽಥ ಗೌತಮಃ ॥೫೯॥ ಕೌಶಿಕೋ ಕುಶಿಕುಶ್ಚೈವಮತ್ರಿರ್ಗಾರ್ಗ್ಯಸ್ತಥೈವ ಚ । ವಶಿಷ್ಠೋ ಭಾರ್ಗವಃ ಕಣ್ವಃ ಭೃಗುಃ ಕಶ್ಯಪ ಏವ ಚ ॥೬೦॥ ಆಗಸ್ತ್ಯ ಕಪಿಲೋ ವತ್ಸ ಜಮದಗ್ನ್ಯುಪಮನ್ಯವಃ ॥೬೧॥ ಅಹಂ ವಿಭೂತಿರ್ಬಹುಭಿರ್ಲಿಂಗ ರೂಪೇ ವಸಾಮ್ಯಲಂ । ಲಿಂಗಂತು ದ್ಯೋತತೇ ಯತ್ರ ತತ್ರ ತತ್ರ ವಸಂತಿ ಹಿ ॥೬೨॥ ಕಾಶೀಕ್ಷೇತ್ರೆ ತು ಗೋಕರ್ಣೇತವ ಕ್ಷೇತ್ರೇ ತು ಷಣ್ಮುಖ । ಗಯಾಪದೇ ತಥಾ ಚಾನ್ಯೇ ಪುಣ್ಯಕ್ಷೇತ್ರೇ ಚ ಭೂಸುರಾಃ ॥೬೩॥ ತೇಷಾಂ ಸಂತಾನಜಾ ಯೇ ಚ ಧರ್ಮಿಷ್ಠಾಃ ಪುತ್ರಪೌತ್ರಕಾಃ । ಭವಿಷ್ಯಂತಿ ನ ಸಂದೇಹೋ ಮಮ ಧ್ಯಾನ ಪಾರಾಯಣಾಃ ॥೬೫॥ ತತಸ್ತೇ ಭೂಸುರಾಃ ಸರ್ವೇ ಹರ್ಷೇಣ ಮಹತಾನ್ವಿತಾಃ । ಕೃತಕೃತ್ಯಾ ಬೃಶಂ ರಾಮಮಾಶಿಷಾ ಸಮಪೂಜ-ಯನ್ ॥೬೫॥ ಅಥ ತೈರಭ್ಯನುಜ್ಞಾತೋ ಯಯೌ ಪ್ರಾಪ್ತ ಮನೋರಥಃ । ಗತೇ ಮುನಿವರೇ ರಾಮೇ ದೇಶಾತ್ತಸ್ಮಾನ್ನಿಜಾಶ್ರಮಂ ॥೭೭॥ ಹರ್ಷೇಣ ಮಹತಾಯುಕ್ತಾಃ ಪ್ರತಿಜಗ್ಮುರ್ಯಥಾಗತಂ ॥ ಆವಸನ್ ಭಕ್ತಿ ಪೂರ್ವಾಶ್ಚ ಶಿವಧ್ಯಾನ ಪರಾಯಣಾಃ ॥೭೮॥ ವಿಶೇಷೇಣ ಗುಹಕ್ಷೇತ್ರೇ ವಾಸಂ ಚಕ್ರುರತಂದ್ರಿತಾಃ । ಧಾರಾತೀರ್ಥೇ ಮಹಾಪುಣ್ಯೇ ಸ್ನಾನಂ ಕೃತ್ವಾತು ನಿತ್ಯಶಃ ॥ ಪಂಚಯಜ್ಞ ಪರಾ ನಿತ್ಯಂ ವೇದಪಾಠರತಾಃ । ಮುಚುಕುಂದಾಜ್ಞಯಾ ಸರ್ವೇ ಸ್ಕಂದಪೂಜಾ ಪರಾಯಣಾಃ । ತತ್ರ ತಸ್ತು ಸುಸಂತೋಷಪುತ್ರ ಪೌತ್ರಾದಿಭಿರ್ಯುತಾಃ ॥೮೨॥

(ವಿಶ್ವಸ್ತಾ=ವಿಧವಾ)

ಈ ಪುಸ್ತಕದಲ್ಲಿ ಯಾವ ವಿಷಯವೂ ಒಂದು ಮತವನ್ನಾಗಲೀ ವ ವ್ಯಕ್ತಿಯನ್ನಾಗಲೀ ದೂಷಣೆ ಮಾಡಿ ಬರೆದದ್ದೆಂದು ಯಾರೂ ಭಾವಿಸ ಕೂಡದು. ನನಗೆ ಯಾರಲ್ಲೂ ವೈಷಮ್ಯವಿಲ್ಲ.

ಎಲ್ಲರೂ ಒಳ್ಳೆಯದಾಗಬೇಕೆಂಬುದೇ ನನ್ನ ಅಭಿಲಾಷೆ. ಒಬ್ಬನಲ್ಲಿ ಅಥವಾ ಒಂದು ಮತದಲ್ಲಿ ಇರುವ ಕುಂದುಕೊರತೆಗಳನ್ನು ಇನ್ನೊಬ್ಬನು ತೋರಿಸಿಕೊಟ್ಟರೇನೇ ಅದನ್ನು ತಿಳಿದುಕೊಂಡು ಸರಿಪಡಿಸಿಕೊಳ್ಳಬಹುದಾಗಿದೆ. ಬಲ್ಲವರು ಅದನ್ನು ದೋಷವಾಗಿ ಎಣಿಸುವುದಿಲ್ಲ. ನಾನು ಬ್ರಾಹ್ಮಣನಾಗಿ ಹುಟ್ಟಿ "ಕಾರ್ಯ ಮಿತ್ಯೇವ ಯತ್ಕರ್ಮನಿಯತಂ ಕುರುತೇರ್ಜುನ" ಎಂಬ ಗೀತೋಕ್ತಿಯಂತೆ ನನ್ನ ಕರ್ತವ್ಯವೆಂದು ಬ್ರಾಹ್ಮಣರ ಒಂದು ಪಂಗಡ ತಪ್ಪು ದಾರಿಯಲ್ಲಿ ಹೋಗುತ್ತಿರುವುದು ನನ್ನ ಮನಸ್ಸಿಗೆ ವ್ಯಸನವನ್ನುಂಟುಮಾಡಿದ್ದರಿಂದ ಬಲ್ಲ ಆ ಪಂಗಡದ ಹೊಸ ಜನಾಂಗವು ತಮ್ಮ ಲೋಪದೋಷಗಳನ್ನು ಸರಿಪಡಿಸಿ ನಮ್ಮ ಹಿಂದೂ ಸನಾತನ ಧರ್ಮದ ಸೇವೆಗೈಯ್ಯುವರೆಂಬ ಮಹತ್ವಾಕಾಂಕ್ಷೆಯಿಂದ ಇದರಲ್ಲಿ ಅನೇಕ ವಿಷಯಗಳನ್ನು ಪ್ರಕಟಿಸಿದ್ದಾಗಿದೆ. ಹಂಸಕ್ಷೀರ ನ್ಯಾಯವರಿತು ಓದುಗರು ಸ್ವೀಕರಿಸಬೇಕಾಗಿ ಕೇಳಿಕೊಂಡು ಇದನ್ನು ಮಂಗಳ ಮಾಡುತ್ತೇನೆ.

ಧ್ಯಾಯೇತ್ ಷಣ್ಮುಖ ಮಿಂದು ಕೋಟಿ ಸದೃಶಂ ರತ್ನಪ್ರಭಾಶೋಭಿತಂ ।
ಬಾಲಾರ್ಕದ್ಯುತಿ ಷಟ್ಕಿರೀಟ ವಿಲಸತ್ಕೇಯೂರ ಹಾರಾನ್ವಿತಂ ॥

ಕರ್ಣಾಲಂಬಿತ ಕುಂಡಲ ಪ್ರವಿಲಸದ್ ಗಂಡಸ್ಥಲಾ ಶೋಭಿತಂ ।
ಕಿಂಚಿತ್ಕಂಕಣ ಕಿಂಕಿಣೀ ರವಯುತಂ ಶೃಂಗಾರ ಸಾರೋದಯಂ ॥

ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣ ಮುದಚ್ಯತೆ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೆ ॥

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

